# ಬಿಡಿ ಬರಹಗಳ ದ್ವಿತೀಯಾರ್ಧ



ಬಿಡಿ ಬರಹಗಳ : ಶ್ರೀ ಎಸ್. ವೆಂಕಟರಮಣ ಅಡಿಗರವರಿಂದ ನಿರೂಪಣಗೊಂಡ ಅವರ .

 ಮುದಣ್ರ : 2012



ಲೇಖಕರು :
ಎಸ್. ವೆಂಕಟರಮಣ ಅಡಿಗ

ಪಕ್ರಾಶಕರು : ವೇ|| ಬ್ರ|| ಶ್ರೀ ಸುಬ್ರಹ್ಮಣ್ಯ ಉಡುಪ

# ಹುಟ್ಟು – ಸಾವು ಮರುಹುಟ್ಟು ಇತ್ಯಾದಿ

**ಅಹನ್ಯಹನಿ ಭೂತಾನಿ ಪ್ರವಿಶಂತಿ ಯಮಾಲಯಮ್ ।**
**ಶೇಷಾಃ ಸ್ಥಾವರಮಿಚ್ಛಂತಿ ಕಿಮಾಶ್ಚರ್ಯ ಮತಃ ಪರಮ್ ॥**

ಮಹಾಭಾರತದಲ್ಲಿ ಯಕ್ಷಪ್ರಶ್ನೆಗೆ ಧರ್ಮರಾಜನ ಉತ್ತರವಿದು. ಪ್ರತಿನಿತ್ಯವೂ ಜೀವರಾಶಿಯ ಸಾವನ್ನು ಕಣ್ಣಾರೆ ಕಾಣುತ್ತಲೇ ಇದ್ದೂ ಬದುಕಿರುವ ನಾವು ಚಿರಂಜೀವಿಗಳೆಂದು ಭಾವಿಸುತ್ತೇವೆಂಬುದಕ್ಕಿಂತ ಮಿಗಿಲಾದ ಆಶ್ಚರ್ಯಕರ ಸಂಗತಿ ಬೇರೇನು ಇದೆ? ಹುಟ್ಟು ಸಾವನ್ನು ಆದಿ ಶಂಕರರು "**ಪುನರಪಿ ಜನನಂ ಪುನರಪಿ ಮರಣಂ**" ಎಂದು ಚಕ್ರಗತಿಯ ನಿರಂತತೆಯೆಂದು ಉಪದೇಶಿಸಿದ್ದಾರೆ. ಮಹಾನುಭಾವರು ಹೇಳುವಂತೆ ನಮ್ಮ ಈಗಿನ ಹುಟ್ಟೇ ಪುನರ್ಜನ್ಮ. ಹಾಗೆಯೇ ಮರಣವೂ ಪುನರ್ಮರಣ. ಹಾಗಾದರೇ ಈ ಹುಟ್ಟು ಸಾವಿನ ತುದಿ ಮೊದಲೆಲ್ಲಿ? ಈ ಪ್ರಶ್ನೆಯನ್ನು ದಾರ್ಶನಿಕ ಮಹರ್ಷಿಗಳು, ಚಿಂತಕರು, ವಿಮರ್ಶಕರು ಹಲವು ಮುಖಗಳಿಂದ ಚರ್ಚಿಸಿ ಸತ್ಯವನ್ನು ಹೊರತರಲು ಪ್ರಯತ್ನಿಸಿದ್ದಾರೆ. ಪ್ರಯತ್ನಿಸುತ್ತಲೇ ಇದ್ದಾರೆ.

ನಾವು ಸ್ವಭಾವತಃ ಹುಟ್ಟಿಗಿಂತಲೂ ಮರಣವನ್ನು ಕುರಿತು ಹೆಚ್ಚು ಚಿಂತಿಸುತ್ತೇವೆ. ಒಂದು ವಿಶೇಷ ವಸ್ತು ನಮಗೆ ದೊರೆತಾಗ ಮತ್ತು ನಮ್ಮಲ್ಲಿರುವ ಒಂದು ಪ್ರಿಯವಾದ ವಸ್ತು ಕಳೆದುಹೋದಾಗ ನಮ್ಮ ಪ್ರತಿಕ್ರಿಯೆಯಲ್ಲಾಗುವ ತೀವ್ರತೆಯಲ್ಲಿ ತುಂಬಾ ವ್ಯತ್ಯಾಸವಿದೆ. ಒಂದು ವಸ್ತು ದೊರೆತಾಗ ಸಂತೋಷ ತೃಪ್ತಿ ಉಂಟಾಗುತ್ತದೆ ಮತ್ತು ಹೇಗೂ ನಾವು ಅದನ್ನು ಅನುಭವಿಸುತ್ತೇವಲ್ಲ! ಎಂಬ ಧೋರಣೆಯಿರುತ್ತದೆ. ಆದರೆ ಬಹುಕಾಲ (ಅಥವಾ ಸ್ವಲ್ಪವೇ ಸಮಯದವರೆಗಾದರೂ) ನಮ್ಮ ವಶದಲ್ಲಿದ್ದ ಒಂದು ಅತ್ಯಂತ ಪ್ರಿಯವಾದ ವಸ್ತು ಕಳೆದಾಗ ಅಯ್ಯೋ! ಕಳೆದು ಹೋಯಿತೆ? ಎಲ್ಲಿಗೆ ಹೋಗಿರಬಹುದು? ಮುಂದೆ ಸಿಕ್ಕೀತೇ ? ಎಂಬ ಕಾತುರ, ದುಃಖ ನಿರಂತರವಾಗಿರುತ್ತದೆ. ಹಾಗೆಯೇ ಮನೆಯಲ್ಲೊಂದು ಜನನವಾದರೆ ಸಂತೋಷದಲ್ಲಿ ಮೈಮರೆತು ಆ ಮಗುವಿನೊಂದಿಗೆ ಬೆಳೆಯುವ ಕನಸು ಕಾಣುತ್ತಿರುತ್ತೇವೆ. ಆದರೆ ನಮ್ಮ ಸಹವಾಸದಲ್ಲಿದ್ದ ವ್ಯಕ್ತಿಯೊಂದು ಸತ್ತರೆ, ಬಂಧು–ಬಾಂಧವ–ಬಳಗ–ಸ್ನೇಹಿತರು ಪರಿಚಿತರು ಎಲ್ಲರೂ ದುಃಖಿಸುತ್ತೇವೆ, ಆ ವ್ಯಕ್ತಿಯ ಬದುಕಿದ್ದಾಗಿನ ಸಾಧನೆಗಳನ್ನು ಗುಣಶೀಲಗಳನ್ನೂ ವರ್ಣಿಸುತ್ತೇವೆ, ಸಾಯುವ ಮೊದಲು ಶರೀರದ ಚಟುವಟಿಕೆಗಳ ಕಾರಣವಾದ ಕಣ್ಣಿಗೆ ಕಾಣದ ಆ ಸತ್ವವನ್ನು, ಅದು ಮತ್ತೆ ಬರಬಹುದಾದ ಸಂಭಾವ್ಯತೆಯನ್ನು ಕುರಿತು ಚಿಂತಿಸ ತೊಡಗುತ್ತೇವೆ. ಬದುಕಿನ ಕ್ಷಣಿಕತೆಯನ್ನು ಅರಿತು ವೈರಾಗ್ಯ ತಾಳುತ್ತೇವೆ. ಇದೇ ಸ್ಮಶಾನ ವೈರಾಗ್ಯ. ಈ ವೈರಾಗ್ಯವೇ ಮುಂದಿನ ತತ್ವ ಚಿಂತನೆಯ ಮೂಲ.

ಈ ಚಿಂತನೆಯಲ್ಲಿ ಮುಖ್ಯವಾಗಿ ಎರಡು ದೃಷ್ಟಿ ಒಂದು ಶಾಸ್ತ್ರೀಯ ದೃಷ್ಟಿ ಮತ್ತೊಂದು ವೈಚಾರಿಕ ದೃಷ್ಟಿ. ಪ್ರಾಚೀನ ದರ್ಶನ ಶಾಸ್ತ್ರಗಳು, ವಿಸ್ತಾರವಾಗಿ ತರ್ಕಬದ್ಧವಾಗಿ ಚರ್ಚಿಸಿ



ಸಿದ್ಧಾಂತವನ್ನು ರೂಪಿಸಿವೆ. ಆದರೂ ಲೌಕಿಕ ದೃಷ್ಟಿಗೆ ಗೋಚರಿಸದ, ಪಾರಲೌಕಿಕವಾದ ಸೂಕ್ಷ್ಮ ಸಂಗತಿಗಳನ್ನು ತತ್‌ಕ್ಷಣದಲ್ಲಿ ನಂಬಲು ಎಲ್ಲರಿಂದಲೂ ಸಾಧ್ಯವಾಗದು.

**ಅಚಿಂತ್ಯಾಃ ಖಲು ಯೇ ಭಾವಾಃ**
**ನ ತಾಂಸ್ತರ್ಕೇಣ ಸಾಧಯೇತ್ ।**
**ಪ್ರಕೃತಿಭ್ಯಃ ಪರಂ ಯತ್ತು**
**ತದಚಿಂತ್ಯಸ್ಯ ಲಕ್ಷಣಮ್॥**

ಮಹಾಭಾರತ ಭೀಷ್ಮಪರ್ವದ ಉಕ್ತಿಯಿದು. ಮೂಲ ಪ್ರಕೃತಿಯಿಂದ ಹೊರತಾಗಿರುವ, ಇಂದ್ರಿಯಾತೀತ ವಿಷಯಗಳನ್ನು ಕೇವಲ ತರ್ಕದಿಂದ ಅರಿತುಕೊಳ್ಳಲಾಗದು ಏಕೆಂದರೆ

**ಯತೋ ವಾಚೋ ನಿವರ್ತಂತೇ।**
**ಅಪ್ರಾಪ್ಯಮನಸಾ ಸಹ ॥**

ಈ ಆಧ್ಯಾತ್ಮಿಕ ರಹಸ್ಯಗಳು ಅಚಿಂತ್ಯವಾಗಿವೆ. (ತೈತ್ತರೀಯ ಉಪನಿಷತ್ತು) ದರ್ಶನ ಶಾಸ್ತ್ರದ ಕಲ್ಪನೆಗೂ ಸಿಗದ ಅನೇಕ ಸಂಗತಿಗಳು ಸ್ವರ್ಗದಲ್ಲೂ ಭೂಲೋಕದಲ್ಲೂ ಇವೆ ಯೆಂದು ಪ್ರಸಿದ್ಧ ಆಂಗ್ಲನಾಟಕಕಾರ ಶೇಕ್ಸಪಿಯರ್ ಹ್ಯಾಮ್ಲೆಟ್ ನಾಟಕದಲ್ಲಿ ಹೇಳಿದ್ದಾನೆ.

(There are more things in heaven and earth, horatio they are dreamt of in your philosophy)

ಮನುಷ್ಯರೂ ತಾವು ಬಯಸದೇ ಯಾವುದೇ ಪ್ರಯತ್ನವಿಲ್ಲದೆ ಸುಖಿಗಳು– ದುಃಖಿಗಳು, ಹೆಡ್ಡರು – ಬುದ್ಧಿವಂತರು, ಧನಿಕರು – ಬಡವರು ಆಗಿರುತ್ತಾರೆ ಈ ವೈರುಧ್ಯಕ್ಕೇನೋ ಕಾರಣವಿರಲೇಬೇಕು. ಏಕೆಂದರೆ ಕಾರಣವಿಲ್ಲದೆ ಕಾರ್ಯವಿಲ್ಲ.

**ಸಮಾಕರ್ಷಂತಿ ಪೃಥಿವೀಂ ಸಮಂ ಶಾಸ್ತ್ರಾಣ್ಯಧೀಯತೇ ।**
**ಉನ್ಮಜ್ಜಂತಿ ನಿಮಜ್ಜಂತಿ ದೈವಸ್ಯೈ ಕಸ್ಯಲೀಲಯಾ ॥**

ಒಂದೇ ರೀತಿಯಲ್ಲಿ ಮಾಡಿದ ಉಳುಮೆಯ ಫಸಲಾಗಲೀ ಒಂದೇ ರೀತಿಯಲ್ಲಿ ಮಾಡಿದ ಶಾಸ್ತ್ರಾಧ್ಯಯನದ ಫಲಿತವಾಗಲಿ ಏಕರೀತಿಯಾಗಿರುವು ದಿಲ್ಲವೆಂಬುವುದಕ್ಕೆ 'ದೈವಲೀಲೆ'ಯನ್ನುತ್ತಾರೆ. ಹಾಗೆಯೇ ಹುಟ್ಟು ಸಾವಿಗೆ ಕಾರಣವನ್ನೂ ದೈವಲೀಲೆಯೆನ್ನು ತ್ತಾರೆ. ಈ ದೈವವೆಂದರೇನು? ಜನನ ಮರಣಗಳಿಗೆ ಕಾರಣವಾದ ಈ ದೈವದ ಲೀಲಾ ವೈಭವವೇನು? ಗೊತ್ತಿಲ್ಲ, ಗೊತ್ತಿಲ್ಲ. ಮೊದಲು ಪ್ರಸ್ತಾಪಿಸಿದಂತೆ ವೈಚಾರಿಕ ದೃಷ್ಟಿಗೆ ಕೊಂಚ ಬಲವನ್ನಿರಿಸಿಕೊಂಡು ಓದುಗ ಬಂಧುಗಳೊಂದಿಗೆ ಈ ಚಿಂತನೆಯನ್ನು ಹಂಚಿಕೊಳ್ಳುವುದೇ ನನ್ನ ಈ ಲೇಖನದ ಉದ್ದೇಶ.

ನಿರಂತರವಾಗಿ ಅನೇಕ ವರ್ಷಗಳು ಏಕೆ–ಜೀವನ ಪರ್ಯಂತ ಅಧ್ಯಯನ ಮಾಡಿದರೂ ತಿಳಿದುಕೊಳ್ಳಲಾಗದಷ್ಟು ವಿಸ್ತಾರವಾದ, ಆಳವಾದ ವಿಷಯಗಳನ್ನು ಸ್ವಲ್ಪಮಟ್ಟಿಗೆ ಅರ್ಥೈಸಿಕೊಳ್ಳಲು ಸಾಧ್ಯವಾಗುವಂತೆ ಕೆಲವು ಉಪಶೀರ್ಷಿಕೆಗಳನ್ನು ಗುರುತಿಸಿಕೊಳ್ಳೋಣ.

1. ಸಾವು ಎಂದರೇನು. 2. ಮರಣನಂತರ?3. ಪುನರ್ಜನ್ಮ – ಯಾಕೆ?

4. ಪರಲೋಕ ಇದೆಯೇ? ಅದರ ಸ್ವರೂಪವೇನು 5. ಶ್ರಾದ್ಧಾದಿಗಳ ಪ್ರಸ್ತುತತೆ.

**ಸಾವು ಅಂದರೇನು?**: ನಮ್ಮ ಈ ಶರೀರ ಚೈತನ್ಯಮಯ. ಚೈತನ್ಯ ಉಡುಗಿತೆಂದರೆ ಶರೀರದ ಚಟುವಟಿಕೆಗಳೆಲ್ಲ ಸ್ಥಬ್ಧ "**ಆತ್ಮ**"ವೇ ಈ ಚೈತನ್ಯಕ್ಕೆ ಕಾರಣವೆಂಬುದು ಶಂಕರರ ಮತ. ಮೇಲ್ನೋಟಕ್ಕೆ ಚೈತನ್ಯ ಶೀಲವಾದ ಇಂದ್ರಿಯಗಳು ಆತ್ಮವಾಗಿಯೇ ಕಾಣುತ್ತವೆ. ಆದುದರಿಂದ ಇಂದ್ರಿಯಗಳು ಮತ್ತು ಆತ್ಮ ಒಂದೇ ಎಂಬ ಭ್ರಮೆಯುಂಟಾಗುತ್ತದೆ. ಹೇಗೆಂದರೆ–

**ಅಗ್ನಿ ಸಂಸರ್ಗಾತ್ ಯಥಾ**
**ಲೋಹ ಮಗ್ನಿತ್ವ ಮುಪಗಚ್ಛತಿ ।**
**ಗಚ್ಛತ್ಯಾತ್ಮತಾಮಿಂದ್ರಿಯಾದಿಕಮ್ ॥**
**–ಯೋಗವಾಸಿಷ್ಠ**

ಅಗ್ನಿ ಸಂಪರ್ಕದಿಂದ ಲೋಹಗಳು ಅಗ್ನಿಯಾಗಿಯೇ ಕಾಣುವಂತೆ ಅತ್ಮನ ಸಂಪರ್ಕದಿಂದ ಇಂದ್ರಿಯಾದಿಗಳೂ ಆತ್ಮವಾಗಿಯೇ ಕಾಣುತ್ತದೆ. ಈ ಆತ್ಮ ಅಥವಾ ಚೈತನ್ಯ ಹೇಗೆ ಹುಟ್ಟುತ್ತದೆ? ಎಂಬುದು ಯಾರ ಚಿಂತನೆಗೂ ನಿಲುಕಿಲ್ಲ. ಅನೇಕ ಪಾಶ್ಚಾತ್ಯ ವಿದ್ವಾಂಸರೂ ಈ ಚಿಂತನೆಯಲ್ಲಿ ಹಿಂದೆ ಬಿದ್ದಿಲ್ಲ. ಅಮೇರಿಕಾದ ಪ್ರಸಿದ್ಧ ವಿಜ್ಞಾನಿ **ಜೆ.ಬಿ. ರಾಇನ್**ರವರು "The reach of the mind"ನ ಪ್ರಾರಂಭದಲ್ಲಿ ಬರೆಯುತ್ತಾರೆ.

"Science cannot explain what the human mind really is, and how it works , with the brain. No one even pretends to know how consciousness is produced"

ಆತ್ಮ ಮತ್ತು ಇಂದ್ರಿಯಗಳು ಅಭಿನ್ನವಾಗಿ ಕಾಣಿಸುವ ಭ್ರಮೆಯಿಂದ ಹೊರಬಂದಾಗ, ಇಂದ್ರಿಯಾಧೀನವಾದ ಶರೀರದಿಂದ ಆತ್ಮ ಬೇರೆಯಾಗುವುದೇ ಮೃತ್ಯು. ಆಧ್ಯಾತ್ಮಿಕವಾಗಿ ಈ ರಹಸ್ಯವನ್ನು ತಿಳಿಯಲು ನಮಗಿರುವ ಪ್ರಮಾಣ – ವೇದಗಳು. ಪ್ರತ್ಯಕ್ಷ ಅನುಮಾನ ಉಪಮಾನ ಮೊದಲಾದ ಪ್ರಮಾಣಗಳಿಂದಲೂ ತಿಳಿಯಲಾಗದ ಪ್ರಮಾಣವನ್ನು ಪ್ರಕಟಿಸುವುದೇ ವೇದಗಳ ಲಕ್ಷಣವೆಂದು ಹೇಳಲಾಗಿದೆ. ಆದರೆ ಅರ್ಥಾನುಸಂಧಾನದ ಮೇಲೆ ಶಾಸ್ತ್ರೀಯವಾದ ಮಿಮರ್ಶೆ, ಸಿದ್ಧಾಂತ ಪ್ರತಿಪಾದನೆ, ಅದಿಶಂಕರರರಂತಹ ಅವತಾರ ಪುರುಷರಿಂದ ಮಾತ್ರವೇ ಸಾಧ್ಯವಾದೀತು. ಆ ರಹಸ್ಯ ಭೇದಿಸುವಷ್ಟೆತ್ತರಕ್ಕೇರುವ ಜನಸಾಮಾನ್ಯರ ಪ್ರಯತ್ನವು ಪ್ರಯತ್ನವಾಗಿಯೇ ಉಳಿದೀತು. **ರವೀಂದ್ರನಾಥ ಟಾಗೋರ್, ಸ್ವಾಮೀ ವಿವೇಕಾನಂದ, ರಾಮಕೃಷ್ಣ ಪರಮಹಂಸ**ರಂತಹ ಭಾರತೀಯ ಚಿಂತಕರಲ್ಲದೆ ಪಾಶ್ಚಾತ್ಯ ವಿಜ್ಞಾನಿಗಳು, ಚಿಂತನಶೀಲರು, ದಾರ್ಶನಿಕರನೇಕರು ಪ್ರಸ್ತುತ ವಿಷಯದಲ್ಲಿ ನಂಬಿಕೆಯಿಟ್ಟು ಅತ್ಯಂತ ಸೂಕ್ಷ್ಮದೃಷ್ಟಿಯಿಂದ ಸಂಶೋಧನೆ ನಡೆಸಿದ್ದಾರೆ. ಅದೇ ಹಾದಿಯಲ್ಲಿ ಆಧುನಿಕ ವಿದ್ವಾಂಸರೂ ಸಂಶೋಧನೆ ಮುಂದುವರಿಸುತ್ತದ್ದಾರೆ. ಇವರದು ಶಾಸ್ತೀಯ ಮಿತಿಯೊಳಗೆ ಜನಸಾಮ್ಯಾನ್ಯರಿಗೆ ತಿಳಿಯ ಹೇಳುವ ವೈಚಾರಿಕ ದೃಷ್ಟಿ.



**ಮೃಡ–ಪ್ರಾಣತ್ಯಾಗೆ** ಎಂಬ ಧಾತುವಿನಿಂದ **'ಮೃತ್ಯು'** ಪದದ ವ್ಯುತ್ಪತ್ತಿಯನ್ನೂ **ಜೀವ–ಪ್ರಾಣಧಾರಣೇ** ಎಂಬ ಧಾತುವಿನಿಂದ ಜೀವನ ಶಬ್ದದ ವ್ಯುತ್ಪತ್ತಿಯನ್ನೂ ಹೇಳಲಾಗಿದೆ ಇವು ಸಾವು ಬದುಕಿನ ಸರಳಾರ್ಥ.

**ಮೃತ್ಯುವಿನ ಕಾರಣ : ಮೃತ್ಯುವಿಗೆ ನಾಲ್ಕು ಕಾರಣಗಳು : (1) ಆಯುಃಕ್ಷಯ** – ಅಂದರೆ ಭಗವಂತನಿಂದ ನಿರ್ದಿಷ್ಟವಾದ ಆಯಸ್ಸಿನ ಮುಕ್ತಾಯ **(2) ಕರ್ಮಕ್ಷಯ**–ಪ್ರಸ್ತುತ ಶರೀರ ದಿಂದ ಅನುಭವಿಸಬೇಕಾದ ಕರ್ಮಫಲದ ಅಂತ್ಯ **(3) ಅಯಸ್ಸು ಮತ್ತು ಕರ್ಮ ಫಲದ** ಅನುಭವದ ಕೊನೆ **(4) ಉಪಚ್ಛೇದಕ ಕರ್ಮ**–ಅಂದರೆ ಅಕಾಲ ಮೃತ್ಯು. ಶರೀರಕ್ಕೆ ಪ್ರಾಪ್ತವಾಗುವ, ಅಪರಿಹಾರ್ಯವಾದ ವಾತ– ಪಿತ್ಥಾದಿ ರೋಗಗಳ ಉಲ್ಬಣ, ಭೂಕಂಪ, ಬಿರುಗಾಳಿ, ಅಕಸ್ಮಿಕ ದುರ್ಘಟನೆಗಳು –ಇತ್ಯಾದಿ.

ಮೊದಲ ಮೂರು ಕಾಲ ಮೃತ್ಯುವಿನ ಕಾರಣಗಳು. ಪ್ರಾರಬ್ಧಾನುಸಾರವಾಗಿ ಯಾವ ಜೀವ ಯಾವ ಶರೀರದಲ್ಲಿ ಎಷ್ಟು ಕಾಲ ಇರಬೇಕೆಂದು ನಿರ್ಧಾರಿತವಾಗಿದೆಯೋ ಅಷ್ಟು ಕಾಲ ಮಾತ್ರ ಆ ಶರೀರದಲ್ಲಿದ್ದು ಹೋಗುವುದು ಕಾಲ ಮೃತ್ಯು. ಸಾಧಾರಣ ರೋಗಗಳು, ಯುದ್ಧ, ಸರ್ಪದಂಶನ, ವ್ಯಾಘ್ರಾದಿ ಪ್ರಾಣಿಗಳಿಂದ, ಅಥವಾ ಬೇರಾವುದೋ ಕಾರಣ ದಿಂದ ಕಾಲ ಮೃತ್ಯು ಸಂಭವಿಸುತ್ತದೆ. ನಿರಂತರ ಅನುಷ್ಠಾನ, ಭಗವದರಾಧನೆ, ಜಪ ಹೋಮಾಧಿಗಳಿಂದ ಅಕಾಲ ಮೃತ್ಯುವನ್ನು ತಾತ್ಕಾಲಿಕವಾಗಿ ಮುಂದೂಡಲು ಸಾಧ್ಯ. ಅದರೆ ಮೃತ್ಯುವಿನಿಂದ ಪಾರಾಗಲು ಮಾತ್ರ ಸಾಧ್ಯವಿಲ್ಲ.

ಪ್ರಾರಬ್ಧ ಮುಗಿಯದೇ ಸಂಭವಿಸುವ ದೇಹ ತ್ಯಾಗವೇ ಅಕಾಲ ಮೃತ್ಯು. ಮೇಲೆ ನಾಲ್ಕರಲ್ಲಿ ವಿವರಿಸಿದ ಆಕಸ್ಮಿಕ ಕಾರಣಗಳೊಂದಿಗೆ ಆತ್ಮಹತ್ಯೆ, ಕೊಲೆ ಮೊದಲಾದಂತೆ ಸಂಭವಿಸುವ ಮೃತ್ಯು ಅಕಾಲ ಮೃತ್ಯು. **'ಅಕಾಲ ಮೃತ್ಯುಹರಣಂ.....'** ಎಂಬ ಸೂಕ್ತಿಯಂತೆ ಅನನ್ಯ ಗತಿಕರಾಗಿ ಭಗವಂತನ ಚರಣ ಸೇವನೆಯಿಂದ ಅಕಾಲ ಮೃತ್ಯುವಿನ ನಿವಾರಣೆ ಸಾಧ್ಯವಾದೀತು. ಅದರೆ ಮೃತ್ಯುವಿನಿಂದ ಪಾರಾಗಲು ಮಾತ್ರ ಸಾಧ್ಯವೇ ಇಲ್ಲ.

**ಸಾವು ಅನಿವಾರ್ಯ (ಭಗವದಿಚ್ಛೆ)** : ಸಾವಿನ ಬಗ್ಗೆ ರಾಮಕೃಷ್ಣ ಪರಮ ಹಂಸರು ಯಾವಾಗಲೂ ಉದ್ಗರಿಸುತ್ತಿದ್ದ ಮಾತಿದು.

ಭಗವಂತ ಎರಡು ಸಂದಭಗಳಲ್ಲಿ ನಗುತ್ತಾನಂತೆ, ಇಬ್ಬರು ಸಹೋದರು ದಾರ ಹಿಡಿದು ಈ ಭೂಭಾಗ ನನ್ನದು ಎಂದು ಭೂಮಿಯನ್ನು ಅಳೆಯುತ್ತಿರುವಾಗ, ಒಮ್ಮೆ ಮತ್ತು ಇನ್ನೊಮ್ಮೆ–ಯಮನು ಪಾಶ ಹಿಡಿದು ರೋಗಿಯ ಸಮೀಪದಲ್ಲಿ ನಿಂತಿರುವಾಗ ವೈದ್ಯರು–"ಈ ರೋಗಿಯನ್ನು ನಾನು ಬದುಕಿಸುತ್ತೇನೆ" ಎಂದು ಭರವಸೆ ನೀಡುವಾಗ.

**ಜೀವ ಹೋಯಿತು=? ಜೀವ ಅಂದರೇನು?–**

**ಚೈತನ್ಯಂ ಯದಧಿಷ್ಠಾನಂ ಲಿಂಗದೇಹಶ್ಚಯಃ ಪುನಃ ।**
**ಚಿಚ್ಛಾಯಾಲಿಂಗ ದೇಹಸ್ಯ ತತ್ಸಂಗೋ ಜೀವ ಉಚ್ಯತೇ ॥**

ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಪಂಚ ಪ್ರಾಣಗಳು ಮತ್ತು ಮನಸ್ಸು, ಬುದ್ಧಿ – ಈ ಹದಿನೇಳು ತತ್ವಗಳ ಸಮಾವೇಶವೇ ಜೀವ, ಶರೀರದ ಯಾವತ್ತೂ ಚಟುವಟಿಕೆಗಳಿಗೆ ಈ ಹದಿನೇಳು ತತ್ವಗಳ ಸಮಾವೇಶವೇ ಕಾರಣ.

**ಮೃತ್ಯುವಿನ ಪ್ರಾದುರ್ಭಾವ:** ಮೃತ್ಯುವನ್ನು **'ಮೃತ್ಯು ದೇವತೆ'**ಯೆಂದು ಹೇಳುತ್ತಾರೆ, ಈ ಮೃತ್ಯುದೇವತೆ ಯಾರು? ಮಹಾಭಾರತದ ದ್ರೋಣ ಪರ್ವದಲ್ಲಿ ಈ ಮೃತ್ಯುವಿನ ಪ್ರಾದುರ್ಭಾವದ ವರ್ಣನೆಯಿದೆ.

ಸೃಷ್ಟಿಯ ಆದಿಯಲ್ಲಿ ಬ್ರಹ್ಮದೇವನು ಕೇವಲ ಸೃಷ್ಟಿಕಾರ್ಯದಲ್ಲೇ ನಿರತನಾಗಿದ್ದನು. ಸಂಹಾರಕ್ಕೆ ಯಾವುದೇ ವ್ಯವಸ್ಥೆಯಿಲ್ಲದೆ ಜಗತ್ತೆಲ್ಲವೂ ಪ್ರಾಣಿಗಳಿಂದ ತುಂಬಿಹೋಯಿತು. ಪ್ರಾಣಿಗಳ ನಿರಂತರ ವೃದ್ಧಿಯನ್ನು ಕಂಡು ಸಂಹಾರದ ಬಗೆಗೆ ಯೋಚಿಸುತ್ತಿರುವಾಗಲೇ ಕೋಪಗೊಂಡ ಅವನ ಇಂದ್ರಿಯಗಳಿಂದ ಅಗ್ನಿಯೊಂದು ಉತ್ಪತ್ತಿಯಾಯಿತು. ಈ ಅಗ್ನಿಜ್ವಾಲೆಯಿಂದ ಚರಾಚರವಾದ ಸಕಲ ಜಗತ್ತೂ ಸುಟ್ಟು ಭಸ್ಮವಾಯಿತು. ಸ್ಥಾವರ ಜಂಗಮಾತ್ಮಕವಾದ ಪ್ರಾಣಿಸಂಕುಲವೇ ನಾಶವಾಯಿತು.

ಜೀವ ದಯಾಪರನಾದ ರುದ್ರನ ಪ್ರಾರ್ಥನೆಯಿಂದ ಪ್ರಸನ್ನನಾದ ಬ್ರಹ್ಮ ಪ್ರಳಯ ಕಾರನಾದ ಆಗ್ನಿಯನ್ನು ಉಪಸಂಹರಿಸಿಕೊಂಡು ಅಂತರಾತ್ಮನಲ್ಲಿ ವಿಲೀನಗೊಳಿಸಿದನು. ಇದೇ ಸಮಯದಲ್ಲಿ ಬ್ರಹ್ಮನ ಇಂದ್ರಿಯ ಸಮುದಾಯದಿಂದ ಸ್ತ್ರೀಯೊಬ್ಬಳ ಪ್ರಾದುರ್ಭಾವ ವಾಯಿತು. ಈಕೆಯನ್ನು ಬ್ರಹ್ಮನು ಹತ್ತಿರ ಕರೆದು 'ಮೃತ್ಯು' ಎಂದು ಸಂಬೋಧಿಸಿ "ನನ್ನಲ್ಲಿ ಅಡಗಿರುವ ರೋಷಬುದ್ದಿಯಿಂದ ಪ್ರಕಟವಾದ ನೀನು ಯಾರ ತಾರತಮ್ಯವೂ ಇಲ್ಲದೆ ಎಲ್ಲರನ್ನೂ ಸಂಹರಿಸುವ ಮೂಲಕ ಶ್ರೇಯೋವಂತಳಾಗು " ಎಂದು ಆಜ್ಞಾಪಿಸಿದ. ಬ್ರಹ್ಮನ ಆಜ್ಞೆಯನ್ನು ಕೇಳಿದ ಮೃತ್ಯು ದೇವತೆ ಅತ್ಯಂತ ಚಿಂತೆ ಮತ್ತು ವ್ಯಥೆಯಿಂದ ಏನೂ ತೋಚದೆ ಕಣ್ಣೀರಿಟ್ಟಳು. ಅದರೆ ಬ್ರಹ್ಮನು ಆ ಕಣ್ಣೀರನ್ನು ಕೆಳಕ್ಕೆ ಬೀಳದಂತೆ ಕೈಗಳಲ್ಲೇ ಧರಿಸಿ, ಅವಳನ್ನು ಸಂತೈಸುತ್ತಾ ಈ ಕಣ್ಣೀರಿನ ಹನಿಗಳೇ ನಾನಾ ವಿಧವಾದ ರೋಗ ರುಜಿನಗಳಾಗಿ ಜೀವಿಯ ಅಂತ್ಯಕಾಲದಲ್ಲಿ ಅವರನ್ನು ಸಾಯಿಸಲು ನಿನಗೆ ನೆರವಾಗುತ್ತದೆಂದು ಹೇಳಿ ದನು. (ಆದುದರಿಂದ ಮೃತ್ಯು ಮುಖರಾದವರ ಸಮೀಪದಲ್ಲಿ ಬಂಧುಗಳಾಗಲೀ ಯಾರೇ ಆಗಲಿ ಕಣ್ಣೀರಿಡಬಾರದೆಂಬ ಮಾತು ಪ್ರಚಲಿತವಿದೆ)

ನಂತರ ಮೃತ್ಯುವು ದುಃಖವನ್ನು ತನ್ನಲ್ಲಿಯೇ ಅಡಗಿಸಿಕೊಂಡು ಬ್ರಹ್ಮನಲ್ಲಿ ಅರಿಕೆ ಮಾಡುತ್ತಾಳೆ. "ಭಗವನ್! ಅಧರ್ಮವೂ, ಪಾಪವೂ, ಕ್ರೂರವೂ ಆದ ಕರ್ಮವನ್ನು ಮಾಡುವಂತೆ ನನಗೇಕೆ ಆಜ್ಞಾಪಿಸುತ್ತಿರುವೆ? ನಾನು ಯಾವುದೇ ಕಾರಣಕ್ಕೂ ಯಮನ ಅರಮನೆಗೆ ಹೋಗಲಾರೆ. ಅಲ್ಲದೆ ನಿನ್ನ ಅಣತಿಯಂತೆ ನಾನು ಯಾರನ್ನು ಸಂಹರಿಸು ತ್ತೇನೆಯೋ ಅವರ ವಿಯೋಗದಿಂದ ಅವರ ತಾಯಿ–ತಂದೆ, ಗಂಡ–ಹೆಂಡತಿ, ಅಣ್ಣ–ತಮ್ಮ, ಅಕ್ಕ–ತಂಗಿ, ಮಕ್ಕಳು–ಮೊಮ್ಮಕ್ಕಳು, ಮೊದಲಾದ ಬಂಧುಗಳು, ಸ್ನೇಹಿತರು ಕಂಬನಿಗೆರೆಯುತ್ತಾರೆ. ನಾನು ಅವರ ಶಾಪಕ್ಕೆಗುರಿಯಾಗಬೇಕಾಗುತ್ತದೆ. ರೋದಿಸುತ್ತಿರುವ ಬಂಧುಗಳ ನಡುವೆ ಪ್ರಾಣಗಳನ್ನು ಅಪಹರಿಸಲು ನನ್ನಿಂದ ಸಾಧ್ಯವಾಗುವುದಿಲ್ಲ" ಎಂದು



ಪರಿಪರಿಯಾಗಿ ಬೇಡಿಕೊಂಡಳು. ಬ್ರಹ್ಮನು ಅವಳ ಸೃಷ್ಟಿಯ ಕಾರಣವನ್ನು ವಿವರಿಸಿ ಧರ್ಮಾಧರ್ಮದ ವಿವೇಚನೆಯಿಲ್ಲದೆ ಸಂಹಾರ ಕಾರ್ಯ ನಿರ್ವಹಿಸುವುದೇ ಆಕೆಯ ಕರ್ತವ್ಯವೆಂದೂ, ಇದರಿಂದ ಆಕೆಗೆ ಯಾವ ವಿಧವಾದ ಪಾಪಲೇಶವೂ ಉಂಟಾಗುವು ದಿಲ್ಲವೆಂದೂ, ಯಾವುದೇ ಜೀವ ಸಂಕುಲದ ಶಾಪ ತಟ್ಟುವುದಿಲ್ಲವೆಂದೂ ಸಮಾಧಾನ ಪಡಿಸಿದ. ಮೃತ್ಯುವು ಬ್ರಹ್ಮನಿಗೆ ವಿಧೇಯಳಾಗಿ ನಿಂತರೂ ಸಂಹಾರ ಕಾರ್ಯದಲ್ಲಿ ಮಾತ್ರ ಪ್ರವೃತ್ತಳಾಗಲಿಲ್ಲ.

ಬ್ರಹ್ಮನು ಪ್ರಸನ್ನ ಚಿತ್ತನಾಗಿ ಸೃಷ್ಟಿಯ ಕಾರ್ಯವನ್ನು ಮುಂದುವರಿಸಿದನು. ಆದರೆ ಸಂಹಾರ ಕಾರ್ಯದಲ್ಲಿ ಬ್ರಹ್ಮನಿಗೆ ಯಾವ ಮಾತನ್ನೂ ಕೊಡದ ಮೃತ್ಯುವು ಧೇನು ಕಾಶ್ರಮ, ಕೌಶಿಕೀನದೀ ತೀರಾದಿಗಳಿಗೆ ತೆರಳಿ ಬಹುಕಾಲ ತಪಸ್ಸಿನಲ್ಲಿ ಲೀನವಾದಳು. ಮೃತ್ಯುವಿನ ತಪಸ್ಸಿಗೆ ಮಚ್ಚಿದ ಬ್ರಹ್ಮ ಪ್ರತ್ಯಕ್ಷನಾಗಿ "ನನ್ನ ಅಂಜಲಿಯಲ್ಲಿ ಬಿದ್ದ ನಿನ್ನ ಅಶ್ರಬಿಂದುಗಳು ಪ್ರಾಣಿಗಳ ಶರೀರದಲ್ಲಿ ನಾನಾ ವಿಧವಾದ ವ್ಯಾಧಿರೂಪದಲ್ಲಿ ಹುಟ್ಟುತ್ತವೆ. ಆಯುಷ್ಯ ಕಳೆದ ನಂತರ ಆ ವ್ಯಾಧಿಗಳೇ ಅಂತಹ ಜೀವಿಗಳನ್ನು ಸಂಹಾರ ಮಾಡುತ್ತವೆ. ನಿನಗೆ ಅಧರ್ಮದ ಲೇಪವುಂಟಾಗುವುದಿಲ್ಲ. ನಿನ್ನ ಕಾರ್ಯದಲ್ಲಿ ನಾನು, ಯಮ, ಮತ್ತು ಇತರ ದೇವತೆಗಳೂ ಸಹಾಯಕರಾಗಿರುತ್ತಾರೆ. ಅಲ್ಲದೆ ಲೋಭ, ಕ್ರೋಧ, ದ್ರೋಹ, ಇತರರನ್ನು ಕುರಿತು ಆಡುವ ಕಠಿಣೋಕ್ತಿ ಇವುಗಳ ಜೊತೆಗೆ ಅಧರ್ಮಾಚರಣೆ ಯಿಂದ ಅತನು ಸಂಪಾದಿಸಿದ ಪಾಪವೂ ಅವನ ಸಾವಿಗೆ ಸಹಕಾರಿಯಾಗುತ್ತದೆ. ಅದುದರಿಂದ ಸಮಸ್ತ ಜೀವರಾಶಿಯನ್ನು ಸಂಹರಿಸುವುದರಿಂದ ನೀನು ನಿನ್ನ ಕರ್ತವ್ಯವನ್ನು ನೆರವೇರಿಸಿದಂತಾಗುತ್ತದೆ" ಎಂದು ಸಮಾಧಾನ ಪಡಿಸಿ ಅಂತರ್ಧಾನನಾದನು.

**ಮರಣಕಾಲೀನ ಸ್ಥಿತಿ:** ಮುಮೂರ್ಷು ವ್ಯಕ್ತಿಯ ವಾಗಿಂದ್ರಿಯ ಎಲ್ಲಕ್ಕಿಂತ ಮೊದಲು ಮನಸ್ಸಿನಲ್ಲಿ ವಿಲೀನವಾಗುತ್ತದೆ. ಆಗ ಅವನ ಮನಸ್ಸು ಮಾತ್ರ ವಿಚಾರ ಶಕ್ತಿಯನ್ನು ಹೊಂದಿದ್ದು ವಾಕ್ ಶಕ್ತಿಕುಂಠಿತವಾಗಿ ಮಾತು ತೊದಲುವವನಾಗುತ್ತಾನೆ. ನಂತರ ಶ್ರವಣೇಂದ್ರಿಯಗಳು, ಚಕ್ಷುರಿಂದ್ರಿಯಗಳು ಮೊದಲಾದ ಇಂದ್ರಿಯಗಳೂ ಮನಸ್ಸಿನಲ್ಲಿ ವಿಲೀನವಾಗುತ್ತವೆ. ಕಣ್ಣು ಮಂಜಾಗುತ್ತದೆ. ಶ್ರವಣ ಶಕ್ತಿ ಕುಗ್ಗುತ್ತದೆ. ಅನಂತರ ಮನಸ್ಸು ಪ್ರಾಣಗಳಲ್ಲಿ ವಿಲೀನವಾಗುತ್ತದೆ. ಆಗ ವ್ಯಕ್ತಿ ಕೇವಲ ಉಸಿರಾಡುತ್ತಿರುತ್ತಾನೆಯೇ ಹೊರತು ಬಾಹ್ಯಜ್ಞಾನವಿರುವುದಿಲ್ಲ. ಪ್ರಾಣವು ಜೀವದೊಳಗೆ ಪ್ರವೇಶಿಸುತ್ತದೆ. ಜೀವವು ಪೃಥಿವೀ, ಅಪ್, ತೇಜ, ವಾಯು, ಆಕಾಶವೆಂಬ ಪಂಚ ತನ್ಮಾತ್ರಗಳಲ್ಲಿ ಸೇರಿಕೊಳ್ಳುತ್ತದೆ. ಮೃತ್ಯುಕಾಲದಲ್ಲಿ ಹೃದಯದಿಂದ ಹೊರಡುವ 101 ನಾಡಿಗಳಲ್ಲಿ ಒಂದು ನಾಡಿಯನ್ನು ಪ್ರವೇಶಿಸಿ ಜೀವವು ದೇಹತ್ಯಾಗ ಮಾಡುತ್ತದೆ.

ಮೃತ್ಯುವಿನ ನಂತರ?

ಮೃತ್ಯುವೆಂದರೆ ಆತ್ಮ ದೇಹದಿಂದ ಬೇರೆಯಾಗುವುದು. ಈ ಅವಿನಾಶಿಯಾದ ಆತ್ಮ ಸೂಕ್ಷ್ಮರೂಪದಿಂದ ಶರೀರಾಂತರವನ್ನು ಪ್ರವೇಶಿಸುತ್ತದೆ. "ವಾಸಾಂಸಿ ಜೀರ್ಣಾನಿ ಯಥಾವಿಹಾಯ......." ಎಂಬ ಭಗವದ್ವಾಣಿಯಂತೆ ಉತ್ಸವಾದಿ ನಿಮಿತ್ತಗಳಲ್ಲಿ ಬಟ್ಟೆ

ಬದಲಿಸುವುದು ಹೇಗೋ ಹಾಗೆ ಜೀವಕ್ಕೆ ದೇಹಾಂತರ ಪ್ರಾಪ್ತಿ. (ದೇಹಾಂತರ ಪ್ರಾಪ್ತಿಯ ಮಧ್ಯಂತರ ಸ್ಥಿತಿಯೊಂದಿದೆ – ಮುಂದೆ ಪ್ರಸ್ತಾಪಿಸುತ್ತೇನೆ) ಮೃತ್ಯುವಿನ ನಂತರ ಈ ಪಾಂಚಭೌತಿಕ ಶರೀರ ನಾಶವಾಗುವುದಿಲ್ಲ. ಆದರೆ ಪಂಚಭೂತಗಳಲ್ಲಿ ಲೀನವಾಗುತ್ತದೆ. ಇದೊಂದು (ಲೀನವಾಗುವಿಕೆ) ರಾಸಾಯನಿಕ ಪ್ರಕ್ರಿಯೆ. ರಸಾಯನ ಶಾಸ್ತ್ರ ಹೇಳುವಂತೆ ಮೇಣದ ಬತ್ತಿ ಉರಿಯುವಾಗ ಯಾವುದೇ ವಸ್ತು ನಾಶವಾಗುವುದಿಲ್ಲ–ವಿಲೀನ ವಾಗುತ್ತದೆ. ಹಾಗೆಯೇ ಶರೀರ ನಾಶವಾದಂತೆ ಕಾಣಿಸಿದರೂ ಅದರಲ್ಲಿನ ಪ್ರಥಿವೀ, ಅಪ್, ತೇಜ, ವಾಯು, ಆಕಾಶ ತತ್ವವೆಂಬ ಮೂಲ ವಸ್ತುಗಳು ಪಂಚಭೂತಾತ್ಮಕವಾದ ಪ್ರಕೃತಿಯಲ್ಲಿ ಲೀನವಾಗುತ್ತವೆ. ನಾಶವಾಗುವುದಿಲ್ಲ. ಇದೇ ಹುಟ್ಟು ಸಾವಿನ ರಹಸ್ಯ.

**ಅಂತ್ಯೇಷ್ಟಿಸಂಸ್ಕಾರ – ಯಾಕೆ ?**

ಶರೀರ ಪಂಚಭೂತಗಳಲ್ಲಿ ವಿಲೀನವಾಗುವ ಮೊದಲು ಶರೀರಕ್ಕೆ ಮಾಡುವ ಸಂಸ್ಕಾರವೇ ಅಂತ್ಯೇಷ್ಟಿ. ಇಷ್ಟಿ ಅಂದರೆ ಅಗ್ನಿಮುಖದಲ್ಲಿ ಭಗವಂತನನ್ನು ಆರಾಧಿಸುವ ಒಂದು ವಿಧಾನ.

ಮೃತನು ಆಹಿತಾಗ್ನಿಯಾಗಿದ್ದರೆ ಆತನ ಶವವನ್ನು ಅಗ್ನಿತ್ರಯದಲ್ಲಿ ಅರ್ಪಿಸಬೇಕು. ಅಂದರೆ ದಹನ ಸಂಸ್ಕಾರ ಮಾಡಬೇಕು. ಗೃಹಸ್ಥ–ಗೃಹಿಣಿಯಾಗಿದ್ದರೆ ಔಪಾಸನಾಗ್ನಿಯಲ್ಲಿ ಅಗ್ನಿಯು ಅನುಗತವಾಗದಿದ್ದರೆ ಪ್ರೇತಾಧಾನೌಪಾಸನ ಮಾಡಿ ಆ ಅಗ್ನಿಯಲ್ಲಿಯೂ, ವಿಧವೆ–ವಿಧುರರ ಶವವನ್ನು ಉತ್ತಪನಾಗ್ನಿಯಲ್ಲಿಯೂ, ವೃತಿಗಳ ಶರಿರವನನ್ನು ಕಪಾಲಾಗ್ನಿ ಯಲ್ಲೂ ಬಾಲ ಕನ್ಯೆಯರ ಶವವನ್ನು ತುಷಾಗ್ನಿಯಲ್ಲೂ ಅರ್ಪಿಸಿ ಸಂಸ್ಕರಿಸಬೇಕು, ವ್ಯಕ್ತಿಯ ಮರಣಾನಂತರ ಸಂಸ್ಕಾರಯೋಗ್ಯವಾದ ಈ ಶರೀರವನ್ನು ಕೊಳೆಯಲು ಬಿಡದಂತೆ ಎಷ್ಟು ಬೇಗ ಸಂಸ್ಕರಿಸಿದರೆ ಅಷ್ಟು ಉತ್ತಮವೆಂದು ಹೇಳುವುದು ರೂಢಿ. ಯಾಕೆಂದರೆ ಇದು ಪಂಚಭೂತಗಳಲ್ಲಿ ಲೀನವಾಗಬೇಕು. ಭೂಮಿ, ನೀರು, ತೇಜಸ್ಸು, ವಾಯು, ಆಕಾಶ– ಈ ಪಂಚಭೂತಗಳನ್ನು ಭಗವಂತನ ಸ್ವರೂಪವೆಂದು. ನಾವು ನಂಬಿದ್ದೇವೆ. ಈ ಭಗವತ್ಸರೂಪದಲ್ಲಿ ಲೀನವಾಗಬೇಕಾದ ಶವಕ್ಕೆ (ಶವ ಸಂಸ್ಕಾರ) ಸ್ನಾನ, ಹೊಸಬಟ್ಟೆ ಧಾರಣೆ, ತುಳಸಿ– ಪುಷ್ಪಾದಿಗಳಿಂದ ಅಲಂಕಾರ ಎಲ್ಲವೂ ಅರ್ಥಪೂರ್ಣವೆನಿಸುತ್ತದೆ. ಕೆಲವು ಜನಾಂಗದವರು ನೇರವಾಗಿ ಶವವನ್ನು ಮಣ್ಣು ಮಾಡುತ್ತಾರೆ. (ಪೃಥ್ವೀ ತತ್ವದಲ್ಲಿ ವಿಲೀನಗೊಳಿಸುವಿಕೆ) ಆಗಲೂ ಅಲಂಕೃತ ಪಲ್ಲಕ್ಕಿಯಂತಹವಾಹಕದಲ್ಲಿ ವಾದ್ಯಮೇಳದೊಂದಿಗೆ ಮೆರವಣಿಗೆ ಮಾಡುತ್ತಾರೆ. ತನ್ನಿಮಿತ್ತ ವಾಗಿ ಅನ್ನಸಂತರ್ಪಣೆಯ ಮೂಲಕ ಭೂತ ತೃಪ್ತಿಗೊಳಿಸುವುದೂ ಉಂಟು. ಈ ಆಚರಣೆಯ ಹಿನ್ನಲೆಯೂ ಶವದ ಪಾವಿತ್ರ್ಯವನ್ನು ಸೂಚಿಸುತ್ತದೆ. ಇಸ್ಲಾಂ ಧರ್ಮಿಯರು ಶವವಾಹಕವನ್ನು ಹೊರುವುದು ಪುಣ್ಯಕಾರ್ಯವೆಂದು ಭಾವಿಸುತ್ತಾರೆ.

**ಪ್ರೇತಯೋನಿ**

ಪಾಂಚಭೌತಿಕ ಶರೀರದಿಂದ ಹೊರಬಂದ ಜೀವಕ್ಕೆ ಜೀವಿತಾವಧಿಯ ಕರ್ಮಾನು ಸಾರ ಪ್ರೇತಯೋನಿ ಪ್ರಾಪ್ತವಾಗುತ್ತದೆ. ಮನುಷ್ಯಯೋನಿ, ಪಶುಯೋನಿ, ಪರ್ಯಗ್ಯೋನಿ



ಮೊದಲಾದ ದೃಶ್ಯಯೋನಿಗಳಿಗಿಂತ ಭಿನ್ನವಾಗಿದ್ದು ಇದು ಆದೃಶ್ಯಯೋನಿ ಯಾಗಿರುತ್ತದೆ. ಮನುಷ್ಯ, ಪಶು, ಪಕ್ಷಿಗಳಲ್ಲಿ ಪಂಚಭೂತಳಲ್ಲೊಂದಾದ ಪೃಥ್ವಿಯ ಅಂಶ ಹೆಚ್ಚಾಗಿದ್ದು ಸ್ಥೂಲ ದೃಷ್ಟಿಗೆ ಗೋಚರವಾಗಿರುತ್ತದೆ. ಅದರೆ ಪ್ರೇತಯೋನಿಯಲ್ಲಿ ವಾಯುವಿನ ಅಂಶವೇ ಪ್ರಧಾನವಾಗಿದ್ದು ಪ್ರಥ್ವಿಯ ಅಂಶ ಇಲ್ಲವೇ ಇಲ್ಲವೆಂದು ಹೇಳಬಹುದಾದಷ್ಟು ಅತ್ಯಲ್ಪ ಪ್ರಮಾಣದಲ್ಲಿರುತ್ತದೆ. ಆದುದರಿಂದ ಇದು (ಪ್ರೇತಯೋನಿ) ಅದೃಶ್ಯವಾಗಿದ್ದು ಸುಂಟರಗಾಳಿಯಂತೆ ಶಕ್ತಿಯುತವಾಗಿರುತ್ತದೆ. ಇದಕ್ಕೆ ಹಸಿವು – ನೀರಡಿಕೆ ಜಾಸ್ತಿ. ಆದರೆ ಕಂಠನಾಳ ಸೂಕ್ಷ್ಮವಾಗಿರುವುದರಿಂದ ಬೇಗ ತೃಪ್ತಿಯಾಗುವು ದಿಲ್ಲ. ಜೀವಿತಾವಧಿಯ ಸ್ವಭಾವಕ್ಕನುಗುಣವಾದ ರಾಗ ದ್ವೇಷಾದಿಗಳನ್ನು ಪ್ರಕಟಿಸುವ ಸಾಮರ್ಥ್ಯ ಹೊಂದಿರುತ್ತದೆ. ನಾಮ – ಗೋತ್ರೋಚ್ಚಾರಣೆಯ ಮೂಲಕ ಅರ್ಪಿಸುವ ದ್ರವ್ಯಗಳ ಸತ್ವದಿಂದ ಇದು ತೃಪ್ತಿ ಹೊಂದುತ್ತದೆ. ಗಾಯತ್ರೀ ಮಂತ್ರ ಜಪಾನುಷ್ಠನ, ಭಾಗವತಾದಿ ಪುಣ್ಯ ಕಥಾ ಶ್ರವಣ, ಗಯಾ ಶ್ರಾದ್ಧಾದಿಗಳಿಂದ ಈ ಪ್ರೇತತ್ತ್ವ ನಿವೃತ್ತಿಯಾಗು ತ್ತದೆ. ಅಥರ್ವ ವೇದದಲ್ಲಿ ಪ್ರೇತತ್ತ್ವ ನಿವೃತ್ತಿಯ ಅನೇಕ ಮಂತ್ರಗಳನ್ನು ಉಲ್ಲೇಖಿಸ ಲಾಗಿದೆ. ಆಯುರ್ವೇದದಲ್ಲಿ 'ಭೂತವಿದ್ಯಾ' ಎಂಬ ಪ್ರತ್ಯೇಕ ವಿಭಾಗವಿದೆ.

**ಸೂಕ್ಷ್ಮ – ಕಾರಣ ಶರೀಶ**

ಮನಸ್ಸು, ಅಹಂಕಾರ ಮತ್ತು ಇಂದ್ರಿಯಗಳು (ಮೂಗು, ನಾಲಿಗೆ, ಕಣ್ಣು ಕಿವಿ, ಚರ್ಮ) ಮತ್ತು ಪಂಚ ಕರ್ಮೇಂದ್ರೀಯಗಳು (ವಾಕ್, ಪಾಣಿ, ಪಾದ, ಗುದ, ಉಪಸ್ಥ) ಮನಸ್ಸು (11), ಪ್ರಾಣ (12), ಅಹಂಕಾರ (13) ಅಹಮಿಕೆಯನ್ನು ಉತ್ಪಾದಿಸುವಶಕ್ತಿ (14) ಬುದ್ಧಿ, ಭಾವ, ವಿಚಾರ, ಸಂಸ್ಕಾರ (15, 16, 17, 18) ಗಳನ್ನು ಒಂದುಗೂಡಿಸುವ ಶಕ್ತಿ–ಈ ಹದಿನೆಂಟು ಶಕ್ತಿಗಳ ಸಮೂಹವೇ **ಸೂಕ್ಷ್ಮ ಶರೀರ**. ಗಾಳಿಪಟದ ನೂಲು ಸುತ್ತುವ ರಾಟೆಯಿಂದ ದಾರ ತುಂಡಾದರೆ ಆ ಗಾಳಿಪಟವನ್ನು ಮತ್ತೊಂದು ರಾಟೆಗೆ ಜೋಡಿಸಿ ದಾಗ ಆ ಗಾಳಿಪಟ ಅದೇ (ಮತ್ತೊಂದು) ರಾಟೆಗೆ ಹೊದಿಕೊಂಡು ಹಾರಾಟವನ್ನು ಮುಂದುವರಿಸುತ್ತದೆ. ಅದೇ ರೀತಿ ಮರಣ ಕಾಲದಲ್ಲಿ ಹೃದಯವೆಂಬ ರಾಟೆಯ ಸಂಪರ್ಕದಾರ ತುಂಡಾದಕೂಡಲೇ ಸೂಕ್ಷ್ಮ ಶರೀರವೆಂಬ ಗಾಳಿಪಟವು ಹಾರುತ್ತಾ ತನ್ನ ಪ್ರಧಾನ ಕರ್ಮವಿಪಾಕದ ವಾಸನೆಗಳನ್ನು ತೃಪ್ತಿಗೊಳಿಸುವ ಸಮಾನ ಸಂಸ್ಕಾರವುಳ್ಳ ಗರ್ಭವನ್ನು ಸೇರುತ್ತದೆ.

ಭೌತ ವಿಜ್ಞಾನಿಗಳು Electron, Proton, Neutron ಗಳಾಗಿ ವಿಭಜಿಸಲ್ಪಟ್ಟ ಪರಮಾಣುವಿನ ಕಣಗಳಿಂದ ಸಮಗ್ರ ಸೃಷ್ಟಿಯ ರಚನೆಯಾಗಿದೆಯೆಂದು ಪ್ರಮಾಣೀಕರಿಸಿ ದ್ದಾರೆ. ಆದರೆ ಸಾವಿರಾರು ವರ್ಷಗಳ ಹಿಂದೆ ನಮ್ಮ ಮಹರ್ಷಿಗಳು ಸತ್ವ, ರಜ, ತಮೋ ಗುಣಾತ್ಮಕವೇ ಈ ಸೃಷ್ಟಿಯೆಂದು ಪ್ರತಿಪಾದಿಸಿದ್ದಾರೆ. ಮರಣಾನಂತರ ಪ್ರಾಪ್ತವಾಗುವ ಇಂತಹ ಶೂಕ್ಷ್ಮ ಶರೀರಕ್ಕೆ ಆದಿಭೌತಿಕ ಮತ್ತು ಆಧ್ಯಾತ್ಮಿಕ ಸಮಸ್ಯೆಗಳ ವಿವೇಚನಾ ಸಾಮರ್ಥ್ಯವಿದೆ. ಶ್ವೇತಾಶ್ವರೋಪನಿಷತ್ತಿನಲ್ಲಿ ಈ ಸೂಕ್ಷ್ಮ ಶರೀರದ ಸ್ವರೂಪ "**ಬಾಲಾಗ್ರಶತ ಭಾಗಸ್ಯ ಶತಧಾಕಲ್ಪಿತಸ್ಯ ಚ**" ಅಂದರೆ ಕೂದಲಿನ ಹತ್ತು ಸಾವಿರದಲ್ಲಿ ಒಂದನೇ ಅಂಶದಷ್ಟು

ಸೂಕ್ಷ್ಮವೆಂದು ಹೇಳಿದೆ. ಸ್ಥೂಲ ಶರೀರದಿಂದ ಹೊರಬಂದ ಈ ಸೂಕ್ಷ್ಮ ಶರೀರ ಯೋಗಬಲದಿಂದ ಪರಕಾಯ ಮಾಡುವ ಸಾಮರ್ಥ್ಯ ಹೊಂದಿದ್ದು. ಅತ್ಮಬಲದಿಂದ ಸ್ಥೂಲ ಶರೀರದಲ್ಲಿ ಪ್ರಕಟ ವಾಗುತ್ತದೆ. (ಆದಿಶಂಕರರು ಪರಕಾಯ ಪ್ರವೇಶ ಮಾಡಿದ ಉಲ್ಲೇಖವನ್ನು ಅಸಂಗತವೆಂದೋ ಅಸಂಭಾವ್ಯವೆಂದೋ ತೂರಿಬಿಡುವಂತಿಲ್ಲ ವಲ್ಲವೇ?) ಶ್ರೀ ಸ್ವಾಮೀರಾಮರವರ "ಲಿವಿಂಗ್ ವಿತ್ ದಿ ಹಿಮಾಲಯನ್ ಮಾಸ್ಟರ್ಸ್" ಬರಹದಲ್ಲಿ ಅವರು ಟಿಬೆಟ್ಟಿಗೆ ಹೋಗಿ ತಮ್ಮ ಪರಮ ಗುರುಗಳನ್ನು ಸಂದರ್ಶಿಸಿ ಅಲ್ಲಿ ಇದ್ದಾಗ ಪರಮ ಗುರುಗಳು ಪರಕಾಯ ಪ್ರವೇಶದ ಪ್ರಾತ್ಯಕ್ಷಿಕೆಯೊಂದನ್ನು ಶ್ರೀ ರಾಮ ಅವರಿಗೆ ಸ್ಪಷ್ಟವಾಗಿ ಮಾಡಿ ತೋರಿಸಿದ ವಿವರಗಳನ್ನು ದಾಖಲಿಸಿದ್ದಾರೆ. ಸೂಕ್ಷ್ಮ ಶರೀರಾಂತರ್ಗತ ಸ್ಮೃತಿಗೆ ಸಂಬಂಧಿಸಿದಂತೆ **ಕೆನಡಾದ ಸ್ನಾಯು ಸರ್ಜನ್ ಡಾ॥ ಪೆನ್‌ಫೀಲ್ಡ್‌**ರವರು ನಡೆಸಿದ ಸಂಶೋಧನೆ – ಫಲಿತಾಂಶ 1958 ಸಪ್ಟೆಂಬರ್‌ದ ರೀಡರ್ಸ್ ಡೈಜೆಸ್ಟ್‌ನಲ್ಲಿ ಪ್ರಕಟವಾಗಿದೆ

**ದಿವ್ಯದೇಹ:** ಬೈಬಲ್ **'ನವವಿಧಾನ'** ಚತುರ್ಥ ಖಂಡದಲ್ಲಿ "**ಅಪ್ರಾಕೃತ ಜನ್ಮ**" ಶಬ್ದದ ಉಲ್ಲೇಖವಿದೆ. ಈ ಶಬ್ದದ ಉಲ್ಲೇಖವು ದಿವ್ಯದೇಹ ಪ್ರಾಪ್ತಿಯನ್ನು ಕುರಿತು ಸಂಕೇತಿಸುತ್ತದೆ.

**ಅಂತರಾಳಗತಿ:** ಹುಟ್ಟಿನಿಂದ ಸಾವಿನ ತನಕ ಸ್ಥಿತಿ ದೃಷ್ಟಿಗೋಚರವಾಗಿ ರುವುದರಿಂದ ಅದರ ಬಗ್ಗೆ ಜಿಜ್ಞಾಸೆಯಿರುವುದಿಲ್ಲ ಮೃತ್ಯುವಿನಿಂದ ಪುನರ್ಜನ್ಮದ ತನಕ ಸಮಯ ಅಜ್ಞಾತವಾಗಿರುವುದರಿಂದ ಈ ಬಗ್ಗೆ ಜಿಜ್ಞಾಸೆ ಸಹಜ. **ಪೂರ್ವ ಶರೀರ ತ್ಯಾಗದ ನಂತರ ಮತ್ತೊಂದು ನಿರ್ದಿಷ್ಟ ಶರೀರ ಪ್ರಾಪ್ತಿಯವರೆಗಿನ ಗತಿಯೇ ಅಂತರಾಳಗತಿ.** ಋಜುಗತಿ ಮತ್ತು ವಕ್ರಗತಿಯೆಂದು ಎರಡು ವಿಧ, ಉತ್ಪತ್ತಿ ಸ್ಥಾನ (ಪುನರ್ಜನ್ಮ ಸ್ಥಾನ) ಸಮ ಶ್ರೇಣಿಯಲ್ಲಿದ್ದರೆ ಜೀವ ರಜುಗತಿಯಲ್ಲೂ ವಿಷಮ ಶ್ರೇಣಿಯಲ್ಲಿದ್ದರೆ ವಿಷಮ ಗತಿಯಲ್ಲೂ ಚಲಿಸುತ್ತದೆ. ವಿಷಮಗತಿಯಲ್ಲಿ ಅಡೆತಡೆಗಳು ಜಾಸ್ತಿ.

ಮರಣಾನಂತರ ಹೊರಟ ಸ್ಥೂಲ ಶರೀರ (1) ಅಗ್ನಿ ಸಂಸ್ಕಾರದಿಂದ ಭಸ್ಮವಾಗುತ್ತದೆ (2) ಮಾಂಸಾಶಿಯಾದ ಜಂತು ತಿಂದರೆ ವಿಷ್ಠಾರೂಪದಿಂದ ಉದರದಿಂದ ಹೊರಬರುತ್ತದೆ. (3) ಹೂತರೆ ಕ್ರಿಮಿ ಕೀಟಗಳ ರೂಪದಲ್ಲಿ ಪರಿಣತವಾಗುತ್ತದೆ.

ಸ್ಥೂಲ ಶರೀರದಿಂದ ಹೊರಟ ಕರ್ಮಲಿಪ್ತವಾದ ಆತ್ಮಕ್ಕೆ ಮೂರು ಗತಿಗಳು. ದೇಹತ್ಯಾಗನಂತರ ಲೋಕಾಂತರ ಸಂಚಾರವೇ **ಗತಿ**. ಗತಿಗೋಸ್ಕರ ನಿರ್ದಿಷ್ಟವಾದ ದೇಶವೇ **ಪಥ** (ಮಾರ್ಗ), ಸೂಕ್ಷ್ಮ ಶರೀರ (ಜೀವ)ದ ಮೂರು ಗತಿಗಳು (1) ಅರ್ಚಿ ಮಾರ್ಗ (2) ಧೂಮಮಾರ್ಗ (3) ಉತ್ಪತ್ತಿ ವಿನಾಶ ಮಾರ್ಗ.

(1) ಅರ್ಚಿಮಾರ್ಗ, ಉತ್ತರ ಮಾರ್ಗ, ಶುಕ್ಲ ಮಾರ್ಗ, ದೇವಯಾನ ಮಾರ್ಗ, ಅನಾವೃತ್ತಿ ಮಾರ್ಗವೆಂದು ಇದಕ್ಕೆ ಹೆಸರು. ಜ್ಯೋತಿಷ್ಠೋಮಾದಿಯಾಗಗಳನ್ನು ಮಾಡಿದವರು, ಜನ್ಮಾಂತರದಲ್ಲಿ ಸಂಚಿತವಾದ ಪಾಪಫಲಗಳನ್ನೆಲ್ಲ ಅನುಭವಿಸಿ ಮುಗಿಸಿ ದವರು, ಉತ್ತರಾಯಣದಲ್ಲಿ ಮರಣಿಸಿದವರು, ಒಟ್ಟಾರೆ ಹೇಳುವುದಾದರೆ ಯಾವುದೇ



ಸಂಚಿತ ಕರ್ಮಫಲವನ್ನು ಅನುಭವಿಸಲು ಏನೂ ಉಳಿದಿಲ್ಲ ಎನ್ನುವವರು ಈ ಮಾರ್ಗ ವಾಗಿ ಹೋಗಿ ಮೋಕ್ಷ ಪಡೆಯುತ್ತಾರೆ. ಅಂದರೆ ಹುಟ್ಟು ಸಾವಿನಿಂದ ಬಿಡುಗಡೆ ಹೊಂದಿ ಭಗವಂತನಲ್ಲಿ ಲೀನವಾಗುತ್ತಾರೆ. "**ನ ಸ ಪುನರಾವರ್ತತೇ**" ಇವರಿಗೆ ಪುನರ್ಜನ್ಮವಿಲ್ಲ.

"**ದೇವತ್ವಂ ಸಾತ್ವಿಕಯಾಂತಿ ಮನುಷ್ಯಂ ತ್ವಂಚರಾಜಸಾಃ । ತಿರ್ಯಕ್ತ್ವಂ ತಾಮಸಾ ನಿತ್ಯಂ ಇತ್ಯೇಷಾ ತ್ರಿವಿಧಾ ಗತಿಃ** ॥ (ಮನುಸ್ಮೃತಿ 12–40), ಸಾತ್ವಿಕ ಚಿಂತನೆ ಸಾತ್ವಿಕ ಆಚರಣೆ ಇವು ಮೋಕ್ಷದ ಮಾರ್ಗಗಳು.

(2) "**ದ್ವೇ ಸ್ರುತೀಽ ಅಶೃಣವಂ ಪಿತೃಣಾಮಹಂ ದೇವನಾಮುತ ಮರ್ತ್ಯಾನಾಮ್ । ತಾಭ್ಯಾಮಿದಂ ವಿಶ್ವಮೇಜತ್ ಸಮೇತಿ ಯದಂತರಾ ಪಿತರಂ ಮಾತರಂ ಚ** ॥" ಋಗ್ವೇದದ ಎಂಟನೇ ಅಷ್ಟಕದ ಈ ಮಂತ್ರ ದೇವಯಾನ ಮತ್ತು ಪಿತೃಯಾಣವನ್ನು ಕುರಿತು ಹೇಳುತ್ತದೆ. ಪಿತೃಯಾಣ ಕೃಷ್ಣಗತಿ, ಆವೃತ್ತಿ ಮಾರ್ಗ, ಧೂಮ ಮಾರ್ಗ, ಪಿತೃ ಮಾರ್ಗ – ಹೀಗೆ ಅನೇಕ ಹೆಸರಿನಿಂದ ಕರೆಯಲ್ಪಡುವ ಇದು ಪಿತೃಲೋಕದ ಮಾರ್ಗ, ಸಂಚಿತ ಪುಣ್ಯ ಕರ್ಮಫಲ ಭೋಗಕ್ಕಾಗಿ ಈ ಲೋಕ ಪಾಪ್ತಿ. "ಕ್ಷೀಣೇ ಪುಣ್ಯೇ ಮಾರ್ತ್ಯ ಲೋಕಂ ವಿಶಂತಿ" – ನಿಯತ ಕರ್ಮಾಫಲ ಭೋಗದ ನಂತರ ಪುನಃ ಹುಟ್ಟು–ಸಾವಿನ ಚಕ್ರಕ್ಕೆ ಸಿಲುಕಬೇಕು.

ಸಜಾತೀಯ ಆಕರ್ಷಣದ ಸಿದ್ಧಾಂತ ವಿಜ್ಞಾನದಲ್ಲಿ ಅತಿಮುಖ್ಯ. ಪ್ರತಿಯೊಂದು ವಸ್ತು ಸಜಾತೀಯ ಘನದ ಕಡೆಗೆ ವ್ಯಷ್ಟಿಸಮಷ್ಟಿಯ ಕಡೆಗೆ ಅಕರ್ಷಿತವಾಗುವುದು ಸಹಜ ವೈಜ್ಞಾನಿಕ ಕ್ರಿಯೆ – ಪೃಥ್ವಿಯ ಅಂಶ ಮಣ್ಣಿನ ಕಡೆಗೆ – ಹೀಗೆ. ಪಾಂಚ ಭೌತಿಕ ಶರೀರದಿಂದ ಹೊರಟ ಪಂಚ ಜ್ಞಾನೇಂದ್ರಿಯ, ಪಂಚ ಕರ್ಮೇಂದ್ರಿಯ, ಪಂಚಪ್ರಾಣ, ಮನಸ್ಸು ಬುದ್ಧಿಯೆಂಬ ಹದಿನೇಳು ತತ್ವಗಳ ಸಮ್ಮಿಳಿತ ರೂಪವಾದ ಸೂಕ್ಷ್ಮ ಶರೀರದಲ್ಲಿ ಚಂದ್ರನ ಅಂಶವಾದ ಮನಸ್ಸು ಪ್ರಧಾನವಾಗಿರುವುದರಿಂದ ಚಂದ್ರ ಲೋಕದ ಕಡೆಗೆ ಸ್ವಾಭಾವಿಕ ವಾಗಿ ಆಕರ್ಷಿತವಾಗುತ್ತದೆ. ಈ ಚಂದ್ರಲೋಕವೇ ಮುಖ್ಯವಾದ ಪಿತೃಲೋಕ. ಆದ್ದರಿಂದ ಪಿತೃಗಳನ್ನು ಉದ್ದೇಶಿಸಿ ಆಚರಿಸುವ ಈ ವಾರ್ಷಿಕ ಶ್ರಾದ್ಧಾದಿಗಳನ್ನು ಚಾಂದ್ರಮಾನ ಮಾಸದ ತಿಥಿಯನ್ನು ಅನುಸರಿಸಿ ಆಚರಿಸುವುದು ರೂಢಿಗೆ ಬಂತು (ಮಾಸ ಎಂಬುದು ಚಾಂದ್ರಮಾನಕ್ಕೆ ಮಾತ್ರ ಪೂರ್ತಿ ಅನ್ವಯವಾಗುತ್ತದೆ. (ಮಸ್ಯತೆ– ಇತಿಮಾಸಃ) ಚಂದ್ರನ ಕ್ಷಯ ವೃದ್ಧಿಯನ್ನನುಸರಿಸಿ ಪರಿಗಣಿಸಲ್ಪಡುವುದರಿಂದ ಇದು ಮಾಸ. ಸೌರಮಾನವೆಂದರೆ ಸೂರ್ಯನ ಗತಿಯನ್ನನುಸರಿಸಿ ಗುರುತಿಸುವ ತಿಂಗಳು. ಇಲ್ಲಿ ಕ್ಷಯ ವೃದ್ಧಿಯ ಪ್ರಶ್ನೆ ಇಲ್ಲ. ಚಂದ್ರನು ಭೂಮಿಗೆ ಅತ್ಯಂತ ಸಮೀಪದಲ್ಲಿರುವ ಭಾದ್ರಪದ ಅಮಾವಾಸ್ಯೆಯಂದು ಪಿತೃಗಳನ್ನು ಉದ್ದೇಶಿಸಿ ಮಾಡುವ ಮಹಾಲಯ ಶ್ರಾದ್ಧಕ್ಕೆ ವಿಶೇಷ ಮಹತ್ವವಿರುವುದು ಇದೇ ಕಾರಣದಿಂದ.

**(3) ಉತ್ಪತ್ತಿ ವಿನಾಶಮಾರ್ಗ:** ಭೂಮಿಯಲ್ಲಿ ಕ್ಷಣಿಕ ಪದಾರ್ಥಗಳಾದ ಸಂಪತ್ತು, ಪಶುಗಳು, ಮನೆ ಮುಂತಾದವುಗಳ ಮೇಲೆ ಯಾರ ಮನಸ್ಸು ಅತಿ ಹೆಚ್ಚು ತಲ್ಲೀನ ವಾಗಿರುತ್ತದೆಯೋ, ಅಲ್ಲಿ ಪೃಥ್ವಿಯ ಅಂಶವು ಮನಸ್ಸನ್ನು ಅವರಿಸಿರುತ್ತದೆ. ಅಂದರೆ ಪಾರ್ಥಿವ ವಸ್ತುಗಳ ಮೇಲಿನ ವಾಸನಾ ಬಲ ಪ್ರಬಲವಾಗಿ (ರುವುದರಿಂದ) ಮನಸ್ಸಿನ ಶಕ್ತಿ

ಕುರಿತವಾಗಿ ಚಂದ್ರಲೋಕದ ಗತಿ ಪ್ರಾಪ್ತವಾಗುವುದಿಲ್ಲ. ಮತ್ತೆ ಮತ್ತೆ ಭೂಮಿಯ ಮೇಲೆ ಶರೀರ ಧಾರಣೆ ಮಾಡುತ್ತಲೇ ಇರಬೇಕಾಗುತ್ತದೆ. ಸೋರೆಬುರುಡೆ ಸ್ವಾಭಾವಿಕ ವಾಗಿ ತೇಲುತ್ತದೆ. ಅದಕ್ಕೆ ಮಣ್ಣಿನ ಪ್ರಬಲವಾದ ಲೇಪವಿದ್ದರೆ ಅದು ತೇಲುವ ಸ್ವಾಭಾವಿಕ ಸಾಮರ್ಥ್ಯವನ್ನು ಕಳೆದುಕೊಂಡು ಮುಳುಗುತ್ತದೆ. ಹಾಗೇಯೇ ಮನೆ, ಆಸ್ತಿ, ಸಂಪತ್ತು ಎಂಬ ಮಣ್ಣಿನ ಮೇಲಿನ ವಿಶೇಷ ವಾಸನಾ ಬಲವುಳ್ಳ ಜೀವದ ಚಂದ್ರಲೋಕ ಪ್ರಾಪ್ತಿಗೆ ಸಹಕಾರಿಯಾಗದ ಮನಸ್ಸಿನ ಶಕ್ತಿ ದುರ್ಬಲವಾಗಿ ಚಂದ್ರಲೋಕ ತಲುಪುವುದಿಲ್ಲ. ವಾಸನಾಬಲದಿಂದ ಮತ್ತೆ ಮತ್ತೆ ತಿರ್ಯಗ್ಯೋನಿಯಲ್ಲಿ ಹುಟ್ಟುತ್ತಲೇ ಇರಬೇಕಾಗುತ್ತದೆ.

## ಪೂರ್ವಜನ್ಮ ಇತ್ತು; ಈ ಜನ್ಮ ಪುನರ್ಜನ್ಮಕ್ಕೆ ನಾಂದಿ

**ಒಂದೇ ತಂದೆ** – ತಾಯಿಯಂದಿರಿಂದ ಜನಿಸಿದ ಮಕ್ಕಳ ಸ್ವಭಾವ ಭಿನ್ನವಾಗಿರುವುದು, ನವಜಾತ ಶಿಶುಗಳಲ್ಲಿ ಕಂಡು ಬರುವ ಸ್ತನ್ಯಪಾನಾದಿ ಸಹಜ ಪ್ರವೃತ್ತಿ, ಸಕಲ ಜೀವಿ ಗಳಲ್ಲೂ ಕಂಡು ಬರುವ ಮರಣ ಭಯ–ಈ ಎಲ್ಲ ಸಂಗತಿಗಳೂ ಪೂರ್ವಜನ್ಮದ ಸಂಸ್ಕಾರದ ಪ್ರಮಾಣಗಳು. ಹಾಗಿಲ್ಲದೆ ಇದ್ದರೆ ಈ ಸಂಗತಿಗಳಿಗೆ ಸಮಾಧಾನಕರ ಕಾರಣ ಹುಡುಕುವುದು ಕಷ್ಟ ನಮ್ಮ ಈಗಿನ ಜನ್ಮದಿಂದಲೇ ನಮ್ಮ ಪೂರ್ವಕಾಲೀನ ಮತ್ತು ಮರಣೋತ್ತರ ಅಸ್ತಿತ್ವವು ಸಿದ್ಧಿಸುತ್ತದೆ. ನಮ್ಮ ಈ ಜನ್ಮಕ್ಕೆ ಯಾವುದಾದರೂ ಕಾರಣ ವಿರುವುದಾರೆ, ಅದು ಈ ಜನ್ಮಕ್ಕಿಂತ ಮೊದಲೇ ಇರಬೇಕು (ಕಾರಣವಿಲ್ಲದೆ ಕಾರ್ಯ ವಿಲ್ಲ). ಏಕೆಂದರೆ ಕಾರ್ಯದ ನಿಯತ ಪೂರ್ವವರ್ತಿಯಾಗಿರುವುದೇ ಕಾರಣದ ಸ್ವರೂಪ. "ನಾಸತೋ ವಿದ್ಯತೇ ಭಾವಃ ನಾಭಾವೋ ವಿದ್ಯತೇ ಸತಃ" ಅಸತ್ ಎಂಬುದರ 'ಭಾವ' (ಅಸ್ತಿತ್ವ–ಇರುವಿಕೆ)ಇರುವುದಿಲ್ಲ. ಹಾಗೆಯೇ 'ಸತ್'ಎಂಬುದರ ಅಭಾವವೂ ಇರಲಾರದು –ಎಂಬುದು ಆಬಾಧಿತವಾದ ಸಿದ್ಧಾಂತ. ಪಾಶ್ಚಾತ್ಯ ವಿದ್ವಾಂಸರು ಈ ಸಿದ್ಧಾಂತವನ್ನು ಒಪ್ಪಿದ್ದಾರೆ. ಲ್ಯಾಟಿನ್ ಭಾಷೆಯಲ್ಲಿ ಈ ಸಿದ್ಧಾಂತವನ್ನು ಕೆಳಗಿನ ಶಬ್ದಗಳಲ್ಲಿ ಹೆಳಲಾಗಿದೆ.

"Ex nihilo fil" ಇದರ ಆಂಗ್ಲ ಅನುವಾದ "nothing comes out of nothing" ಇದು "**ನಾಸತೋ ವಿದ್ಯತೇ ಭಾವಃ**" ಎಂಬುದನ್ನು ಸ್ಪಷ್ಟಪಡಿಸುತ್ತದೆ.

ನಮ್ಮ ಈ ಕಣ್ಣುಗಳಿಗೆ ಕಾಣಿಸುವುದಿಲ್ಲವೆಂದ ಮಾತ್ರಕ್ಕೆ ಎಲ್ಲವನ್ನೂ ಅಲ್ಲಗಳೆಯು ವಂತಿಲ್ಲ. "**ವೇದೋಽಖಿಲೋ ಧರ್ಮ ಮೂಲಮ್**" ಎಂಬ ಗೌತಮ ಧರ್ಮ ಸೂತ್ರದಂತೆ ನಮ್ಮ ಪರಂಪರಾಗತ ಧಾರ್ಮಿಕ ಆಚರಣೆಗಳ ಮೂಲವನ್ನು, ಈ ಕಣ್ಣುಗಳಿಗೆ ಗೋಚರಿಸದ ಸತ್ಯವನ್ನು ವೇದಗಳೆಂಬ ಜ್ಞಾನದ ಕಣ್ಣುಗಳಿಂದ ಕಂಡು ನಂಬಬೇಕು. ಹಾಗೆಯೇ ಪುನರ್ಜನ್ಮದ ಸಿದ್ಧಾಂತದ ಬಗೆಗೂ ನಮಗೆ ವೇದಗಳೇ ಮೂಲಪ್ರಮಾಣ. ಈ ಕೆಳಗಿನ ಕೆಲವು ಮಂತ್ರಗಳಲ್ಲಿ ಪುನರ್ಜನ್ಮದ ಬಗೆಗೆ ಸ್ಪಷ್ಟವಾದ ಚಿತ್ರಣವಿದೆ.

**ಮೃತ ಆತ್ಮದ ಪುನರಾಗಮನ (ಪುನರ್ಜನ್ಮ)ದ ಕುರಿತು ವೇದಗಳು**

1. **ಪ್ರೇಹಿ ಪ್ರೇಹಿ ಪ್ರಥಿಭಿಃ ಪೂರ್ವೇಭಿರ್ಯತ್ರಾ ನಃ ಪೂರ್ವೇ ಪಿತರಃ ಪರೇಯುಃ । ಉಭಾ ರಾಜಾನಾ ಸ್ವಧಯಾ ಮದಂತಾ ಯಮಂ ಪಶ್ಯಸಿ ವರುಣಂ ಚ ದೇವಮ್** ॥



2. ಸಂಗಚ್ಛಸ್ವ ಪಿತೃಭಿಃ ಸಂ ಯಮೇನೇಷ್ಟಾಪೂರ್ತೇನ ಪರಮೇ ವ್ಯೋಮನ್ । ಹಿತ್ವಾ ಯಾ ವದ್ಯಂ ಪುನರಸ್ತ ಮೇಹಿ ಸಂಗಚ್ಛಸ್ವತನ್ವಾಸುವರ್ಚಾಃ ॥

3. ಅವಸೃಜ ಪುನರಗ್ನೇ ಪಿತೃಭ್ಯೋ ಯಸ್ತಽ ಆಹುತಶ್ಚರತಿ ಸ್ವಧಾಭಿಃ । ಆಯುರ್ವ ಸಾನಽ ಉಪವೇತು ಶೇಷಃ ಸಂಗಚ್ಛತಾಂ ತನ್ವಾ ಜಾತವೇದಃ ॥

**–ಋಗ್ವೇದದ ಹತ್ತನೇ ಮಂಡಲದ ಮಂತ್ರಗಳು**

1. ಮೃತ ತಂದೆಯೊಡನೆ ಮಗ ಹೇಳುವ ಮಾತು –ತಂದೆಯೇ, ನಮ್ಮ ಪಿತಾಮಹಾದಿ ಪೂರ್ವ ಪುರುಷರು ಹೋದ ಅನಾದಿಕಾಲದ ಅದೇ ಮಾರ್ಗದಲ್ಲಿ ಅತೀ ಶೀಘ್ರವಾಗಿ ಹೋಗಿರಿ (ಪ್ರೇಹಿ ಪ್ರೇಹಿ ದ್ವಿರುಕ್ತಿಯಿಂದ ಅತಿ ಶೀಘ್ರವಾಗಿ ಗಮಿಸಬೇಕೆಂಬ ಸೂಚನೆ) ಮತ್ತು ಅಲ್ಲಿ (ಸ್ವಧಯಾ ಮದಂತಾಃ) ಅಮೃತದಿಂದ ತೃಪ್ತರಾಗಿ ಯಮ–ವರುಣ ಇಬ್ಬರು ರಾಜರ ದರ್ಶನ ಪಡೆಯಿರಿ.

2. ಮೃತ ತಂದೆಯೇ! (ಅವದ್ಯಂ ಹಿತ್ವಾ ಯಾ) ಪಾಪವನ್ನು ತ್ಯಜಿಸಿ ಮಾಡಿದ ಶ್ರೌತ–ಸ್ಮಾರ್ತ, ದಾನ–ಧರ್ಮರೂಪ ಕರ್ಮಪ್ರಭಾವದಿಂದ ತಾವು ಯಮನದರ್ಶನ ಪಡೆಯಿರಿ. ಅನಂತರ ಅವನ ಶಾಸನದಲ್ಲಿರುವ ಪಿತೃಗಳನ್ನು ಭೇಟಿಯಾಗಿರಿ (ಸಮಾಗಮನ ಮಾಡಿ). ಯಮ ಮತ್ತು ಪಿತೃಗಣಗಳು (ಪರಮೇವ್ಯೋಮನ್) ಉತ್ತಮ ಪಿತೃಲೋಕ (ಅಂದರೆ ಸ್ವರ್ಗ) ದಲ್ಲಿ ಇರುತ್ತಾರೆ. (ಅಸ್ತಂ) ಭೋಗದಿಂದ ಕರ್ಮಕ್ಷಯವಾದ ಮೇಲೆ (**ಪುನಃ ಏಹಿ**) ಮತ್ತೆ ಬನ್ನಿ. (**ಸಂಗಚ್ಛಸ್ವತನ್ವಾಸುವರ್ಚಾಃ)–ಮತ್ತೇ ಭೂ ಲೋಕಕ್ಕೆ ಬಂದು ಶರೀರ ಧಾರಣೆ ಮಾಡಿರಿ.**

3. **ಹೇ ಅಗ್ನೇ**–ಎಲೈ ಅಗ್ನಿಯೇ; **ಯಃ**–ಯಾವ ಮೃತ ಪುರುಷನು; **ತೇ** – ನಿನಗೆ; **ಅಹುತಃ**–ಚಿತೆಯಲ್ಲಿ ವೇದಮಂತ್ರ ಪುರಸ್ಸರವಾಗಿ ಆಹುತಿ ರೂಪದಿಂದ ಸಮರ್ಪಿ ಸಲ್ಪಟ್ಟಿದ್ದಾನೆಯೋ; (ಮತ್ತು) **ಸ್ವಧಾಭಿಃ**–ಸ್ವಧಾಕಾರೋಚ್ಚರಣಾದಿಗಳಿಂದಾಗಿ; **ಚರತಿ**–ಸಂಚರಿಸುತ್ತಿದ್ದಾನೆಯೋ (ಅವನನ್ನು); **ಪಿತೃಭ್ಯಃ**–ಪಿತೃಗಳ ಪ್ರಾಪ್ತಿಗಾಗಿ (ಪಿತೃಲೋಕ ಪ್ರಾಪ್ತಿಗಾಗಿ), ಪಿತೃಲೋಕದಲ್ಲಿ ಕರ್ಮಭೋಗಾನಂತರ; ಪುನಃ **ಅವಸೃಜ**–ಮತ್ತೊಮ್ಮೆ ಭೂಮಿಗೆ ಬರಲು ಪ್ರೇರಿಸು. **ಹೇ ಜಾತವೇದ**–ಎಲೈ ಅಗ್ನಿಯೇ! (ನಿನ್ನ ಕೃಪೆಯಿಂದ);**ತನ್ವಾ ಸಂಗಚ್ಛತಾಂ** (ಪಿತೃ ಲೋಕದಿಂದ ಬಂದು) ಶರೀರ ಧಾರಣೆ ಮಾಡಲಿ; **ಆಯುರ್ವಸಾನಃ** –(ಬದುಕಿ ಬಂದು) ಬಹುಕಾಲ; **ಶೇಷ ಉಪವೇತು**–ಸಂತಾನವನ್ನು ಪಡೆಯಲಿ (ಅವನಿಗೆ ಸಂತಾನ ಪ್ರಾಪ್ತಿಯಾಗಲಿ ಹುಟ್ಟು ಸಾವಿನ ನಿರಂತರತೆಯು ನಡೆಯುತ್ತಿರಲಿ).

ಈ ಮೂರೂ ಮಂತ್ರಗಳೂ ಅಥರ್ವವೇದದಲ್ಲೂ ಇವೆ. ಎಲ್ಲ ಮಂತ್ರಗಳ ತಾತ್ಪರ್ಯ ವೆಂದರೆ ಪಿತೃಲೋಕದಲ್ಲಿ ಕರ್ಮಾವಸಾನ ಪರ್ಯಂತ ಇದ್ದು ಪುನಃ ಜನ್ಮ ತಾಳಿ ಸಂತಾನ ಪಡೆದು ಸೃಷ್ಟಿಯ ನಿರಂತರತೆ ನಡೆಯುತ್ತಿರಬೇಕು.

**ದೇವತ್ವಂ ಸಾತ್ವಿಕಾ ಯಾಂತಿ ಮನುಷ್ಯತ್ವಂ ಚ ರಾಜಸಾಃ ।**
**ತಿರ್ಯಕ್ತ್ವಂ ತಾಮಸಾ ನಿತ್ಯಂ ಇತ್ಯೇಷಾ ತ್ರಿವಿಧಾ ಗತಿಃ ॥**

ಸತ್ವಗುಣಿಗಳು ದೇವಯೋನಿಯನ್ನೂ ರಜೋಗೂಣಗಳು ಮನುಷ್ಯ ಯೋನಿಯನ್ನೂ ತಮೋಗುಣಗಳು ತಿರ್ಯಗ್ಜಂತು ಯೋನಿಯನ್ನೂ ಪಡೆಯುತ್ತಾರೆ. ಇವರು ಯಾವುದೇ ಯೋನಿಯಲ್ಲಿದ್ದರೂ ನಾಮ ಗೋತ್ರೋಚ್ಚಾರಣೆಯ ಮೂಲಕ ಮೃತ ವ್ಯಕ್ತಿಯನ್ನು ಉದ್ದೇಶಿಸಿ ನೀಡಿದುದೆಲ್ಲವೂ ಅವರಿಗೆ ಪ್ರಾಪ್ತವಾಗುತ್ತದೆ. ಒಂದು ವೇಳೆ ಮೃತವ್ಯಕ್ತಿಗೆ ಮೋಕ್ಷ ಪ್ರಾಪ್ತಿಯಾಗಿದ್ದರೆ ಅವನನ್ನುದ್ದೇಶಿಸಿ ನೀಡಿದುದು ಕರ್ತೃವಿನ ಸಂಚಿತ ಕರ್ಮ ರೂಪಕೋಷದಲ್ಲಿ ಜಮೆಯಾಗುತ್ತದೆ. ಕೆಳಗಿನ ಲೌಕಿಕ ಉದಾಹರಣೆಯಿಂದ ಇದು ಇನ್ನಷ್ಟು ಸ್ಪಷ್ಟವಾಗುತ್ತದೆ. ಯಾವುದೇ ಬ್ಯಾಂಕಿನ ನಿರ್ದಿಷ್ಟ ವ್ಯಕ್ತಿಯ ಖಾತೆಗೆ ಯಾವ ಶಾಖೆಯಿಂದಲಾದರೂ ಜಮಾ ಮಾಡಿದ ಹಣ ಅದೇ ಖಾತೆಗೆ ಜಮಾ ಆಗುತ್ತದೆ. ವಿದೇಶೀ ಬ್ಯಾಂಕಿನ ಖಾತೆಗೆ ಅದೇಶದ ಚಲಾವಣೆಯ ಹಣವಾಗಿ ಪರಿವರ್ತಿತವಾಗಿ ಜಮಾ ಆಗುತ್ತದೆ. ಅಂತಹ ಖಾತೆ ಇಲ್ಲದೇ ಇದ್ದರೆ ಅಥವಾ ಆ ವ್ಯಕ್ತಿ ಇಲ್ಲದಿದ್ದರೆ ಜಮಾ ಮಾಡಿದ ವ್ಯಕ್ತಿಯ ಖಾತೆಗೆ ಪುನಃ ಜಮಾ ಆಗುತ್ತದೆ. ಮನಿ ಆರ್ಡರ್ ಮೂಲಕ ಕಳುಹಿಸಿದ ಹಣ ಅದೇ ಕಛೇರಿಯಲ್ಲೇ ಉಳಿದರೂ ಅದರ ಮೌಲ್ಯ ವಿಳಾಸದಾರರಿಗೆ ತಲುಪುತ್ತದೆ. ಅಥವಾ ಮನಿ ಆರ್ಡರ್ ಕಳುಹಿಸಿದವರಿಗೆ ಮರುಪಾವತಿಯಾಗುತ್ತದೆ. ಹಾಗೆಯೇ ಮೃತವ್ಯಕ್ತಿಯನ್ನು ಕುರಿತು ನಾವು ಮಾಡುವ ಪಿಂಡದಾನಾದಿ ಧಾರ್ಮಿಕ ಕ್ರಿಯೆಗಳ ಫಲವು ಆಯಾ ವ್ಯಕ್ತಿಯಿರಬಹುದಾದ ಯೋನಿಗೆ ಅನುಭವಿಸಲು ಸಾಧ್ಯವಾಗುವ ಅವಶ್ಯಕ ವಸ್ತುವಿನ ರೂಪದಲ್ಲಿ ಪರಿವರ್ತಿತವಾಗಿ ಪ್ರಾಪ್ತವಾಗುತ್ತದೆ.

**ಪುನರ್ಜನ್ಮ ಯಾಕೆ?: ಸೂರ್ಯಂ ಚಕ್ಷುರ್ಗಚ್ಛತು ವಾತಮಾತ್ಮಾ ದ್ಯಾಂ ಚ ಗಚ್ಛ ಪೃಥಿವೀಂ ಚ ಧರ್ಮಣಾ । ಆಪೋ ವಾ ಗಚ್ಛ ಯದಿ ತತ್ರತೇ ಹಿತಮೋಷಧೀಷು ಪ್ರತಿತಿಷ್ಠಾ ಶರೀರೈಃ ॥**

"ಪರಲೋಕಗತ ಆತ್ಮವು ಕರ್ಮಫಲಾನುಸಾರವಾಗಿ ಪ್ರಾಪ್ತವಾಗುವ ಸ್ವರ್ಗಾದಿ ಲೋಕಗಳನ್ನು ಕುರಿತು ಹೋಗಲಿ. ನೇತ್ರವು ಸೂರ್ಯನನ್ನು ಸೇರಲಿ. ಅನಂತರ ಜಲ ಮತ್ತು ಓಷಧಿ ಅಥವಾ ಸಸ್ಯಗಳ ಮಾಧ್ಯಮದಿಂದ ಆತ್ಮವು ಹೊಸ ಮಾತಾ ಪಿತರ ಶರೀರವನ್ನು ಪ್ರವೇಶಿಸಿ ಹೊಸ ಶರೀರದಲ್ಲಿ ನೆಲಸಲಿ" ಜನ್ಮಾಂತರದ ಬಗ್ಗೆ ಈ ಮಂತ್ರದಲ್ಲಿ ಸ್ಪಷ್ಟವಾಗಿ ಹೇಳಲಾಗಿದೆ. (ಋಗ್ವೇದ 10–1–16)

ಪುನರ್ಜನ್ಮದ ಸಮರ್ಥನೆಗಾಗಿ ಋಗ್ವೇದ ಯಜುರ್ವೇದ – ಎರಡರಲ್ಲೂ ಬರುವ ಇನ್ನೊಂದು ಮಂತ್ರ ಹೀಗಿದೆ – **ಪುನರ್ನಃ ಪಿತರೋ ಮನೋ ದದಾತು ದೈವ್ಯೋ ಜನಃ । ಜೀವಂ ವ್ರಾತಂ ಸಚೇಮಹಿ** ॥ "ನಾನು ಪುನಃ ಮಾತಾಪಿತರನ್ನು ಪಡೆಯುವಂತಾಗಲಿ. ದಿವ್ಯ ಜನವಾಗಿ ಜೀವರೂಪವನ್ನೂ ಪಡೆಯುವಂತಾಗಲಿ" (ಋಗ್ವೇದ 10–4–15)

**ಗೀತಾಚಾರ್ಯನ ಮಾತು–ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ । ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂ ತಪ॥** ಅರ್ಜುನ, ನಮ್ಮಿಬ್ಬರಿಗೂ ಅನೇಕ ಜನ್ಮಗಳು ಕಳೆದಿವೆ. ಅವುಗಳನ್ನು ನಾನು ಬಲ್ಲೆ, ನೀನರಿಯೇ.

**ಪೂರ್ವ ಜನ್ಮ ಸ್ಮೃತಿ:** ಶ್ರದ್ಧಾ ಪೂರ್ವಕ ತೀರ್ಥಾಟನೆ, ತೀರ್ಥಶ್ರಾದ್ಧ, ಬ್ರಾಹ್ಮಣರ ಆರಾಧನೆ, ಪುರಾಣ ಶ್ರವಣ, ಮಾತಾ ಪಿತೃಗಳ ಸೇವೆ, ಅತಿಥಿ ಸತ್ಕಾರ ಮೊದಲಾದವು



ಗಳಿಂದ ಕೆಲವು ವಿಶೇಷ ಸನ್ನಿವೇಶಗಳಲ್ಲಿ ಪೂರ್ವಜನ್ಮದ ಸ್ಮೃತಿಯುಂಟಾಗುತ್ತದೆಂದು ಹೇಳಲಾಗಿದೆ.

**ವೇದಾಭ್ಯಾಸೇನ ಸತತಂ ಶೌಚೇನ ತಪಸೈವ ಚ । ಅ ದ್ರೋಹೇಣ ಚ ಭೂತಾನಾಂ ಜಾತಿಂ ಸ್ಮರತಿ ಪೌರ್ವಿಕೀಮ್॥** "ಶುಚಿರ್ಭೂತರಾಗಿ ನಿರಂತರ ವೇದಾಧ್ಯಯನ, ತಪಸ್ಸು ಮತ್ತು ಇತರರಿಗೆ ದ್ರೋಹ ಬಗೆಯದಿರುವುದು ಇದರಿಂದಲೂ ಪೂರ್ವಜನ್ಮದ ಸ್ಮೃತಿ ಯುಂಟಾಗುತ್ತದೆ. "ಪುರಾಣ, ಮಹಾಭಾರತಾದಿ ಗ್ರಂಥಗಳಲ್ಲಿ ಪೂರ್ವ ಜನ್ಮಸ್ಮೃತಿಯ ಅನೇಕ ಉದಾಹರಣೆಗಳು ಸಿಗುತ್ತವೆ.

**ಜನ್ಮದ ಕಾರಣ:** ಸಮುದ್ರದ ದಂಡೆಯ ಮರಳ ರಾಶಿಯಲ್ಲಿ ಮಕ್ಕಳು ಮನೆಯೆಂದು ಹೆಸರಿಸಿ ಗೂಡು ಕಟ್ಟುತ್ತಾರೆ. ಸುತ್ತ ಎಲೆ–ಕಸಕಡ್ಡಿಗಳಿಂದ ಸಿಂಗರಿಸುತ್ತಾರೆ. ಅಡುಗೆ – ಊಟದ ಆಟ ಆಡುತ್ತಾರೆ. ಇದಕ್ಕೆಲ್ಲ ಮಕ್ಕಳ ಮನಸ್ಸಿನ ಸ್ವಯಂ ಪ್ರೇರಣೆ. ಈ ನಿರ್ಮಾಣ ಮತ್ತು ಮುಂದಿನ ಚಟುವಟಿಕೆಗಳಲ್ಲಿ ಯಾವ ಉದ್ದೇಶವೂ ಇರುವುದಿಲ್ಲ. ಸಾಗರದ ಅಲೆಗಳಿಂದ ಆ ನಿರ್ಮಾಣ ತಾನಾಗಿಯೇ ನಾಶವಾದಾಗಲೂ ಅಥವಾ ಆಟದ ನಂತರ ತಾವಾಗಿಯೇ ಹಾಳುಗೆಡುವಾಗಲೂ ಮಕ್ಕಳದು ಕೇವಲ ಕ್ರೀಡಾ ಮನೋಭಾವ. ಅದೇ ಕ್ರೀಡಾ ಭಾವನೆಯಿಂದಲೇ ಅಂತಹ ಚಟುವಟಿಕೆಗಳನ್ನು ಪುನರಾವರ್ತಿಸುತ್ತಾರೆ. ಹಾಗೆಯೇ **ಭಗವಂತನ ಸಂಕಲ್ಪ ಮಾತ್ರದಿಂದಲೇ ಆದಿ ಸೃಷ್ಟಿ. ಹೀಗೆ ಜನ್ಮಿಸಿದ ವ್ಯಕ್ತಿ ಕರ್ಮ ದಿಂದ ಬಂಧಿತನಾಗುತ್ತಾನೆ. ಕರ್ಮದ ಫಲ ಭೋಗಕ್ಕಾಗಿ ಪುನರ್ಜನ್ಮ**–ಇದೇ ಸೃಷ್ಟಿಯ ನಿರಂತರತೆ. ಬೀಜಾರೋಪಣದ್ದು. ಬೀಜಾರೋಪಣವಾದ ಕೂಡಲೇ – ಫಲ ಇಲ್ಲ. ಈಗ ನಾವು ಉಪಯೋಗಿಸುವ ಫಲ ಹಿಂದಿನ ಕರ್ಮ – ಬೀಜಾರೋಪಣದ್ದು, ಮಗು ಹುಟ್ಟಿದ ಕೂಡಲೇ ಅನುಭವಿಸುವ ಕಾಹಿಲೆ ಜನ್ಮಾತರದ ಫಲ. ಬುದ್ಧಿ ಬಂದ ಮೇಲೆ ಮಾಡಿದ ಕರ್ಮಫಲವನ್ನು ಮುಂದೆ ಅನುಭವಿಸಬೇಕು. **ಈ ಸೃಷ್ಟಿ ಲಯದ ಹಿಂದಿನ ಸೂತ್ರಧಾರ (ಕರ್ತೃ) ನಿಗೆ ಇದೊಂದು ಲೀಲಾ ವಿನೋದ.**

**ಗಹನಾ ಕರ್ಮಣೋಗತಿಃ** ರೈತನೊಬ್ಬ ಒಂದು ವರ್ಷ ಗೊಬ್ಬರದ ಬೇಸಾಯ ಮಾಡದೆಯೂ ಒಳ್ಳೆಯ ಫಸಲು ಪಡೆಯಬಹುದು. ಈ ವರ್ಷದ ಗೊಬ್ಬರದ ಬೇಸಾಯದ ಫಲವನ್ನು ಮುಂದಿನ ವರ್ಷ ಪಡೆಯಬಹುದು.

ತೆಂಗು–ಹುಣಸೇ ಮೊದಲಾದ ಮರಗಳು ಅನೇಕ ವರ್ಷಗಳ ನಂತರವೇ ಬಹುಕಾಲ ಫಸಲು ನೀಡುತ್ತವೆ. ಕಾರ್ಖಾನೆಯೊಂದು ಸ್ಥಾಪಿತವಾಗಿ ಕಾರ್ಯನಿರ್ವಹಿಸುತ್ತಿದ್ದರೂ ಅನೇಕ ವರ್ಷಗಳ ನಂತರವೇ ಪೂರ್ಣಪ್ರಮಾಣದ ಉತ್ಪನ್ನವನ್ನು ನೀಡುತ್ತದೆ. ಹಾಗೆಯೇ ಕರ್ಮದ ಫಲ ಕಾಲಾಂತರದಲ್ಲಿ, ಜನ್ಮಾಂತರದಲ್ಲಿ ದೊರಕುತ್ತದೆ. ಈ ಕರ್ಮಫಲ ಭೋಗಕ್ಕೆ ಪುನಃ ಪುನಃ ಹುಟ್ಟುತ್ತಲೇ ಇರಬೇಕು.

ಮಾಡಿದವನು ಮಾಡಿಸಿದವನು, ಪ್ರೇರಕ, ಅನುಮೋದಕ ಇವರೆಲ್ಲರಿಗೂ ಕರ್ಮಫಲ ದಲ್ಲಿ ಸಮಪಾಲು. ಅರಿತೋ ಅರಿಯದೆಯೋ ನಾವು ಮಾಡಿದ ಅಥವಾ ನಮಗರಿವಿಲ್ಲದೆ ಪರೋಕ್ಷವಾಗಿ ನಮ್ಮ ಪ್ರೇರಣೆಯಿಂದ ಬೇರೆಯವರು ಮಾಡಿದ ಕರ್ಮಫಲವನ್ನು

ಅನುಭವಿಸುವುದಕ್ಕಾಗಿ ಪುನರ್ಜನ್ಮಿಸ ಬೇಕಾಗುತ್ತದೆ. ಪ್ರಧಾನ ಸೇನಾಪತಿ–ರಾಷ್ಟ್ರಪತಿ ಸ್ವತಃ ಬಂದೂಕು ಚಲಾಯಿಸುವುದಿಲ್ಲ. ಅದರೂ ಸಾಮಾನ್ಯ ಸೈನಿಕನ ಸೋಲು–ಗೆಲುವಿನ ಹೊಣೆ ಅವರದ್ದೇ. ಹಾಗೆಯೇ ತಂದೆ–ತಾಯಿ, ಅಣ್ಣ–ತಮ್ಮ, ಮಕ್ಕಳು, ಪತಿ–ಪತ್ನಿ, ಸ್ವಾಮಿ–ಸೇವಕ, ದೇಶದ–ಶಾಸಕ, ಗುರು–ಶಿಷ್ಯ–ಇವರೆಲ್ಲರೂ ಪರಸ್ಪರರ ಅಥವಾ ಎಲ್ಲರ ಕರ್ಮಫಲಕ್ಕೆ ಭಾಗಿಗಳಾಗುವುದರಿಂದ ಅನುಭವಿಸುವುದಕ್ಕಾಗಿ ಮತ್ತೆ ಹುಟ್ಟಿ ಬರಬೇಕು.

ಕರ್ಮಮಾಡುವವನ ಅಧೀನದಲ್ಲಿ ಅದರ ಫಲವಿರುವುದಿಲ್ಲ (ಕರ್ಮಣ್ಯೇ ವಾಧಿಕಾರಸ್ತೇ ಮಾ ಫಲೇಷು ಕದಾಚನ). ಕಚೇರಿಯಲ್ಲಿ ಕೆಲಸ ಮಾಡುವ ವ್ಯಕ್ತಿಗೆ ಆ ಕಚೇರಿಯಾಗಲೀ, ಅತ ನಿರ್ವಹಿಸುವ ಕೆಲಸವಾಗಲಿ ನೇರವಾಗಿ ವೇತನ ನೀಡುವುದಿಲ್ಲ. ಕಾರ್ಯವನ್ನು ನಿಯಂತ್ರಿಸುವ ಅಧಿಕಾರಿ (ವ್ಯಕ್ತಿ) ವೇತನ ನಿಗದಿಪಡಿಸಿ ನೀಡುತ್ತಾನೆ. ಹಾಗೆಯೇ ಒಬ್ಬ ಮಾಡಿದ ಕರ್ಮದ ಸ್ವರೂಪವನ್ನು ಅನುಸರಿಸಿ **ನಿಯಾಮಕ** ನಿಗದಿತ ಫಲವನ್ನು ನೀಡುತ್ತಾನೆ, ಅದನ್ನು ಅನುಭವಿಸಲಿಕ್ಕಾಗಿ ಹುಟ್ಟಬೇಕು, ಕರ್ಮ ಮಾಡುತ್ತಲೇ ಇರಬೇಕು, ಫಲಾನುಭವಕ್ಕಾಗಿ ಹುಟ್ಟುತ್ತಲೇ ಇರಬೇಕು.

ಕರ್ಮದ ಫಲ ತತ್ಕ್ಷಣದಲ್ಲಿ ಸಿಗುವುದಿಲ್ಲ ಅಲ್ಲದೇ ಒಂದೇ ಸ್ವರೂಪದ ಅನೇಕ ಕರ್ಮಗಳ ಫಲಗಳ ಸ್ವರೂಪ ಭಿನ್ನವಾಗುವುದೂ ಉಂಟು. ಆದುರಿಂದ ಕರ್ಮಫಲದ ಸ್ವರೂಪ–ಕಾಲವನ್ನು ನಿರ್ಣಯಿಸುವ ಭಗವಂತನ ಸಂಕಲ್ಪದಂತೆ ಮರುಹುಟ್ಟು ನಿರ್ಣಯ ವಾಗುತ್ತದೆ. ಒಬ್ಬ ರೈತ ಹಿಂದಿನ ವರ್ಷ ಬೇಸಾಯ ಮಾಡಲಿಲ್ಲ ಈ ವರ್ಷ ಬೇಸಾಯ ಮಾಡುತ್ತಾನೆ. ಅದರೆ ಮನೆಯಲ್ಲಿ ಧಾನ್ಯವಿಲ್ಲದೆ ಉಪವಾಸವಿರಬೇಕಾಗುತ್ತದೆ. ಇನ್ನೊಬ್ಬ ರೈತ ಹಿಂದಿನ ವರ್ಷ ಚೆನ್ನಾಗಿ ಬೇಸಾಯ ಮಾಡಿ ಈ ವರ್ಷ ಬೇಸಾಯದ ಎತ್ತುಗಳಿಗೆ, ಉಪಕರಣಗಳಿಗೆ ವಿಶ್ರಾಂತಿ ನೀಡುತ್ತಾನೆ. ಅದರೆ ಆತನ ಪರಿವಾರದವರೆಲ್ಲರಿಗೆ ಮಾತ್ರ ವಲ್ಲದೆ ಇತರರಿಗೂ ತೃಪ್ತಿಯಾಗುವಷ್ಟು ಆಹಾರ ಸಂಗ್ರಹವಿರುತ್ತದೆ. ಹೀಗೆ ಬೇಸಾಯ ಮಾಡಿಯೂ ಉಪವಾಸ, ಆರಾಮವಾಗಿ ಕಾಲಕಳೆದರೂ ಮೃಷ್ಟಾನ್ನ ಭೋಜನ – ಇದೇ ಕರ್ಮಫಲದ ರಹಸ್ಯ. ಒಬ್ಬ ಕಳ್ಳನಿಗೆ, ಒಬ್ಬ ಸಾಮಾನ್ಯ ನಾಗರೀಕನಿಗೆ, ಕರ್ತವ್ಯನಿರತ ಪೋಲೀಸ್ ಅಧಿಕಾರಿಗೆ ಅಥವಾ ಒಬ್ಬ ನ್ಯಾಯಾಧೀಶನಿಗೆ–**ನೀಡುವ ಒಂದು ತಪರಾಕಿಯ ಪರಿಣಾಮ** ಭಿನ್ನವಾಗಿರುವುದಿಲ್ಲವೇ? ಒಬ್ಬ ಸಿರಿವಂತನಿಗೆ ಶಿಷ್ಟಾಚಾರಕ್ಕಾಗಿ ಬಡಿಸಿದ ಮೃಷ್ಟಾನ್ನದ ಫಲಕ್ಕಿಂತ ಒಬ್ಬ ಹಸಿದ ತಿರುಕನಿಗೆ ನೀಡಿದ ಒಂದು ಹಿಡಿ ಅನ್ನದ ಪುಣ್ಯದ ಫಲ ಅತ್ಯಂತ ಮಹತ್ವದ್ದಾಗಿರುತ್ತದೆ. ಹಾಗೆಯೇ ಒಂದೇ ಸ್ವರೂಪದ ಕರ್ಮದ ವಿಭಿನ್ನ ಕರ್ಮಫಲ ಭೋಗಕ್ಕಾಗಿ ವಿವಿಧ ಯೋನಿಯಲ್ಲಿ ಜನಿಸಬೇಕಾಗುತ್ತದೆ.

ನಮ್ಮ ಹತ್ತಿರ ಒಂದು ಹುಣಿಸೇ ಬೀಜವಿದೆಯೆಂದು ಭಾವಿಸೋಣ. ಅದನ್ನು ನೆಟ್ಟರೆ ಅದು ಬೆಳೆದು ಮರವಾಗುವುದು, ಹೂ ಬಿಡುವುದು, ಹೂವಿನಿಂದ ಕಾಯಿ ಮತ್ತು ಹಣ್ಣು –ಇವೆಲ್ಲವನ್ನೂ ಕಲ್ಪಿಸಿಕೊಳ್ಳಬಹುದು. ಆದರೆ ಈ ಕಲ್ಪನೆ ಸಾಕಾರವಾಗಬೇಕಾದರೆ ಅದನ್ನು ನೆಡಲು ಒಂದು ಜಾಗಬೇಕು. ಫಲವತ್ತಾದ ಮಣ್ಣು ಬೇಕು. ಗೊಬ್ಬರ ಹಾಕಬೇಕು, ನೀರೆರೆಯಬೇಕು, ಎಷ್ಟೋ ವರ್ಷ ಕಾಯಬೇಕು. ಅಂದರೆ ಆ **ಬೀಜದಲ್ಲಿ ಅದರ ಮೂಲ**



**ವಾದ ಮರ–ಹಣ್ಣು ಕಾಣುವುದಿಲ್ಲ.** ಹಾಗೆಯೇ ನಾವು ಅರಿತೋ ಅರಿಯದೆಯೋ ಮಾಡುವ ಒಳಿತು ಕೆಡಕುಗಳ ಫಲದ ಕಲ್ಪನೆಯಿದ್ದರೂ, ಇಲ್ಲದಿದ್ದರೂ, ಅದು ನಮಗೆ ಸಿಗುವುದು ಮಾತ್ರ ಕಾಲಾಂತರದಲ್ಲಿ, ಬೀಜದಿಂದ ಫಲ ಪಡೆಯುವುದು ಅದರ ರೂಪಾಂತರವಾದ ಮೇಲೆ, ಎಷ್ಟೋ ಕಾಲದ ನಂತರ, ಹಾಗೆಯೇ ಮಾಡಿದ ಪಾಪ–ಪುಣ್ಯಗಳ ಫಲವನ್ನು ನಾನಾ ರೂಪದಲ್ಲಿ ಅನುಭವಿಸಲಿಕ್ಕಾಗಿ, ಅನೇಕ ಜನ್ಮಗಳನ್ನು ತಳೆಯಬೇಕಾಗುತ್ತದೆ.

ನಾವು ನೆಟ್ಟ ಮಾವು ಹಲಸು ಮೊದಲಾದ ಮರಗಳ ಫಲಗಳನ್ನು ನಾವೂ ಅನುಭವಿಸ ಬಹುದು ಮತ್ತು ನಮ್ಮ ಮುಂದಿನ ಪೀಳಿಗೆ (ಮಕ್ಕಳು–ಮೊಮ್ಮಕ್ಕಳು, ಬಂಧುಗಳು ಸ್ನೇಹಿತರು) ಅನುಭವಿಸಬಹುದು. ಕೆಲವೊಮ್ಮೆ ನಮಗೆ ಅನುಭವಿಸುವ ಯೋಗವೇ ಬಾರದೇ, ಎಲ್ಲ ಫಲಗಳನ್ನೂ ಇತರರೇ ಅನುಭವಿಸುವ ಸಂದರ್ಭವೂ ಬರುವುದುಂಟು. ಇದು ಲೋಕಾನುಭವ. **ಪಾಪಂ ಕರ್ಮ ಕೃತಂ ಕಿಂಚಿತ್ ಅಪಿ ತಸ್ಮಿನ್ನದೃಶ್ಯತೇ । ನೃಪತೇ ತಸ್ಯ ಪುತ್ರೇಷು ಪೌತ್ರೇಷ್ವಪಿ ಚ ನಪ್ತೃಷು** ॥

ಮಹಾ ಭಾರತದ ಶಾಂತಿ ಪರ್ವದ ಈ ಉಕ್ತಿಯಂತೆ ನಾವು ಮಾಡಿದ ಪಾಪ – ಪುಣ್ಯಗಳ ಫಲವನ್ನು ನಾವೂ, ನಮ್ಮ ಮುಂದಿನ ಪೀಳಿಗೆಯೂ ಅಥವಾ ಮುಂದಿನ ಪೀಳಿಗೆ ಮಾತ್ರವೇ ಅದರೂ ಅನುಭವಿಸಬೇಕಾಗುತ್ತದೆ. ಅದಕ್ಕಾಗಿ ಜನ್ಮಾಂತರದ ಅವಸ್ಥೆ ಅನಿವಾರ್ಯವಾಗುತ್ತದೆ.

ಜೀವಾತ್ಮನ ಪುನರ್ಜನ್ಮಕ್ಕೆ ಎಂಟು ಕಾರಣಗಳು–(1) ಭಗವಂತನ ಇಚ್ಛೆ (2) ಜೀವಿಯ ಪ್ರತ್ಯಕ್ಷವಾದಾಗ (3) ಪುಣ್ಯ ಫಲ ಭೋಗಕ್ಕಾಗಿ (4) ಪಾಪದ ಫಲ ಅನುಭವಿಸುವುದಕ್ಕಾಗಿ (5) ಪ್ರತೀಕಾರಕ್ಕಾಗಿ (6) ಋಣ ತೀರಿಸಲು (ಪ್ರತ್ಯುಪಕಾರ ಮಾಡಲು) (7) ಅಕಾಲ ಮೃತ್ಯುವಾದಾಗ ಮತು ಅಪೂರ್ಣವಾದ ಸಾಧನೆಯನ್ನು ಪೂರ್ಣಗೊಳಿಸಲು.

(1) ಭಗವಂತನ ಇಚ್ಛಾಮಾತ್ರದಿಂದ ರಾಮ – ಕೃಷ್ಣರಂತೆ, ದುಷ್ಟ ಶಿಕ್ಷಣ–ಶಿಷ್ಟ ಪರಿಪಾಲನಾದಿ ನಿರ್ದಿಷ್ಟ ಉದ್ದೇಶದಿಂದ ಅವತರಿಸುವುದು.

(2) ಯಜ್ಞಾದಿ ಪುಣ್ಯಕಾರ್ಯದ ಫಲ ಭೋಗಕ್ಕಾಗಿ ಸ್ವರ್ಗ ಪ್ರಾಪ್ತಿಯಾಗುತ್ತದೆ. ಇಲ್ಲಿ ದೇವಯೋನಿ ಪ್ರಾಪ್ತವಾಗಿದ್ದರೂ ಕರ್ಮ ಮಾಡುವಂತಿಲ್ಲವಾದುದರಿಂದ 'ಭೋಗ ಯೋನಿ'ಯಂತೆಯೇ ಪರಿಗಣಿತವಾಗುತ್ತದೆ. ಕರ್ಮವಿಲ್ಲದೆ ಫಲವಿಲ್ಲ. ಅದ್ದರಿಂದ ಜ್ಯೋತಿಷ್ಟೋಮಾದಿ ಯಾಗ ಮತ್ತಿತರ ಪುಣ್ಯಕಾರ್ಯಗಳ ಫಲಸ್ವರೂಪವಾದ 'ಸ್ವರ್ಗಸುಖ' ವನ್ನನುಭವಿಸಿದ ನಂತರ ಕರ್ಮ (ಫಲ) ಕ್ಷಯವಾಗಿ ಪುನಃ ಕರ್ಮ ಮಾಡಲು ಲೋಕದಲ್ಲಿ ಜನ್ಮಿಸಬೇಕು ಇಂತಹ ಮನುಷ್ಯ ಯೋನಿಯನ್ನು 'ಕರ್ಮ ಯೋನಿ' ಯೆಂದು ಹೇಳುತ್ತಾರೆ.

(3) ಲೋಕಾಂತರದಲ್ಲಿ ಪಾಪದ ಫಲವನ್ನನುಭವಿಸಿದ ನಂತರ ಪುಣ್ಯ ಫಲವನ್ನನು ಭವಿಸಲು ಪುನಃ ಕರ್ಮಯೋನಿಯಲ್ಲಿ ಹುಟ್ಟಿ ಕರ್ಮಬಂಧನದಲ್ಲಿ ಸಿಲುಕಬೇಕು.

(4) **ಪುಣ್ಯಸ್ಯ ಫಲಮಿಚ್ಛಂತಿ ಪುಣ್ಯಂನೇಚ್ಛಂತಿ ಮಾನವಾಃ । ನ ಪಾಪ ಫಲಮಿಚ್ಛಂತಿ ಪಾಪಂ ಕುರ್ವಂತಿ ಯತ್ನತಃ ॥** ನಮಗೆ ಪುಣ್ಯದ ಫಲ ಬೇಕು. ಅದರೆ ಪುಣ್ಯ ಕಾರ್ಯದಲ್ಲಿ ಪ್ರವೃತ್ತಿ ಇರುವುದಿಲ್ಲ. ಪಾಪ ಕರ್ಮದಲ್ಲಿ ಪ್ರವೃತಿ ಸಹಜ. ಈ ಪಾಪ ಕರ್ಮದ ಫಲವನ್ನು ಅನುಭವಿಸಿ ಸವೆಸುವುದಕ್ಕಾಗಿ ಪುನಃ ಪುನಃ ಹುಟ್ಟುತ್ತಲೇ ಇರಬೇಕು.

(5) ಜೀವಿತಾವಧಿಯಲ್ಲಿನ ದ್ವೇಷಾಸೂಯೆ ಮೊದಲಾದ ಪೂರ್ಣಫಲವನ್ನು ಅನುಭವಿಸದೇ ಪ್ರತೀಕಾರ ಸಾಧನೆಗಾಗಿ ಪುನರ್ಜನ್ಮ.

(6) ಋಣ ತೀರಿಸಲು (ಪ್ರತ್ಯುಪಕಾರ ಮಾಡಲು). ಇದಕ್ಕೊಂದು ಉದಾಹರಣೆ, ಒಮ್ಮೆ ಎರಡು ನಾಯಿಗಳು ಒಟ್ಟಾಗಿ ಗಂಗಾ ಸ್ನಾನಕ್ಕೆ ಹೊರಟವು. ಮಾರ್ಗ ಮಧ್ಯದಲ್ಲಿ ಹಸಿದ ಒಂದು ನಾಯಿ ಒಬ್ಬ ಸೇಠನ ಮನೆಗೆ ನುಗ್ಗಿತು. ಅಷ್ಟರಲ್ಲಿ ಯಾವುದೇ ಹಾನಿಯಲ್ಲದಿದ್ದರೂ ಸೇಠನು ಆ ನಾಯಿಯನ್ನು ಬಡಿದು ಅರೆ ಜೀವ ಮಾಡಿದ. ಎರಡನೆ ನಾಯಿ ಒಬ್ಬ ಬ್ರಾಹ್ಮಣನ ಮನೆಯನ್ನು ಹೊಕ್ಕು ತಟ್ಟೆಯಲ್ಲಿದ್ದ ರೊಟ್ಟಿಯನ್ನು ತಿಂದು ಖುಷಿಯಿಂದ ಹೊರಗೆ ಬಂದಿತು. ಬ್ರಾಹ್ಮಣ ನೋಡಿಯೂ ಏನೂ ಮಾಡದೆ ಸುಮ್ಮನಿದ್ದ ಎರಡು ನಾಯಿಗಳು ಪರಸ್ಪರ ಅನುಭವವನ್ನು ವಿನಿಮಯ ಮಾಡಿಕೊಂಡು ಇದರ ಪ್ರತಿಫಲ ನೀಡಲು ಸಂಕಲ್ಪಿಸಿ ಕಾಶಿಯಲ್ಲಿ ಪ್ರಾಣ ತ್ಯಾಗ ಮಾಡಿದವು. ಮೊದಲನೆಯ ನಾಯಿ ಆ ಸೇಠನ ಮನೆಯಲ್ಲೇ ಹುಟ್ಟಿತು. ಹುಟ್ಟಿನಿಂದಲೇ ನಿತ್ಯ ರೋಗಿಯಾಗಿ ಸೇಠನಿಗೆ ಸಾಕಷ್ಟು ದ್ರವ್ಯ ಹಾನಿಯಾಗುವಂತೆ ಮಾಡಿತು. ದೊಡ್ಡವನಾದ ಮೇಲೆ ಸೇಠನಿಗೆ ಹೊಡಿದು ಬಡಿದು ಮಾಡುತ್ತ ಒಂದು ದಿನ ಬುರುಡೆಯೊಡೆದು ಹಾಕಿತು. ಎರಡನೆ ನಾಯಿ ಅದೇ ಬ್ರಾಹ್ಮಣನ ಮನೆಯಲ್ಲಿ ಹುಟ್ಟಿತು ಬ್ರಾಹ್ಮಣನ ಅದೃಷ್ಟ ಖುಲಾಯಿಸಿತು. ಅತನಿಂದ ಸಾಲ ಪಡೆದವರು ಮರುಪಾವತಿ ಮಾಡಿದರು. ಲಕ್ಷ್ಮೀ ಒಲಿದು ಶ್ರೀಮಂತ ನಾದ. ಮಗ ತಂದೆಯ ಆಜ್ಞಾಪಾಲಕನಾಗಿ ಎಲ್ಲಾ ರೀತಿಯ ಸುಖ ಸಂತೋಷ ನೀಡಿದ. ಬ್ರಾಹ್ಮಣನ ಕುಟುಂಬ ಸುಖ ಸಮೃದ್ಧಿಯಲ್ಲಿ ತೇಲಾಡುವಂತಾಯಿತು. ಹೀಗೆ ನಾಯಿಗಳು ಪುನರ್ಜನ್ಮ ತಳೆದು ತಾವು ಅನುಭವಿಸಿದುದಕ್ಕೆ ಪ್ರತಿ ಕರ್ತವ್ಯ ಮಾಡಿದವು.

(7) ಅಕಾಲಮೃತ್ಯುವಿನಿಂದ ಪ್ರೇತಯೋನಿ ಪ್ರಾಪ್ತವಾಗುತ್ತದೆ. ಇದು ಪರಪೀಡನೆಯಲ್ಲಿ ತೊಡಗುತ್ತದೆ. ಜನ್ಮಾಂತರದ ಸಂಬಂಧಿಗಳ ಜಪ-ಪೂಜೆಗಳಿಂದ ಪ್ರೇತಯೋನಿ ನಿವೃತ್ತಿ.

(8) ಅಪೂರ್ಣವಾದ ಸಾಧನೆಯ ಪೂರ್ತಿಗಾಗಿ-ಪ್ರಾರಬ್ಧ ಕರ್ಮದ ಪೂರ್ತಿಗಾಗಿ ಮರುಹುಟ್ಟು ಹೀಗೆ ಪುನರ್ಜನ್ಮಕ್ಕೆ 8 ಕಾರಣಗಳು.

**ಹಸದ್ಭಿಃ ಕ್ರಿಯತೇ ಕರ್ಮ ರುದದ್ಭಿಃ ಪರಿಪಚ್ಯತೇ । ಅವಶ್ಯ ಮೇವ ಭೋಕ್ತವ್ಯಂ ಕೃತಂ ಕರ್ಮ ಶುಭಾ ಶುಭಂ॥** ಮನುಷ್ಯ ನಗುತ್ತಾ ಸಂತೋಷದಿಂದ ಪಾಪಕಾರ್ಯದಲ್ಲಿ ಪ್ರವೃತ್ತನಾಗುತ್ತಾನೆ. ಆದರೆ ಆಳುತ್ತಾ ಅದರ ದುಷ್ಫಲವನ್ನು ಅನುಭವಿಸುತ್ತಾನೆ. "ಆದ್ದರಿಂದ ನಾವು ಆಧರ್ಮ ಮತ್ತು ಪಾಪಾಚರಣೆಯ ದುಷ್ಪರಿಣಾಮಗಳನ್ನು ಗಮನದಲ್ಲಿರಿಸಿ ಕೊಂಡು ಶಾಸ್ತ್ರ ವಿಹಿತವಾದ ಧರ್ಮಾಚರಣೆ ಮಾಡಬೇಕು ಪಾಪದ ಭಯದಿಂದ ಮಾತ್ರವೇ ಮನುಷ್ಯ ಧರ್ಮಾಚರಣೆ ಯಲ್ಲಿ ತೊಡಗುತ್ತಾನೆ'



**ಪಾಪಸ್ಯ ಹಿ ಭಯಾಲ್ಲೋಕೋ ರಾಮ ಧರ್ಮೇ ಪ್ರವರ್ತತೆ ॥**

**-ಯೋಗವಾಸಿಷ್ಠ!**

ಭೌತಿಕ ವಿಷಯಗಳ ಕ್ಷಣಭಂಗುರತೆ, ಪರಲೋಕ - ಪುನರ್ಜನ್ಮ ಹಾಗೂ ಆತ್ಮಜ್ಞಾನ ಗಳನ್ನು ಕುರಿತು ಚಿಂತಿಸುತ್ತಾ ಕರ್ಮ ಮಾಡಬೇಕು. ಎಡವುತ್ತಾ, ಬೀಳುತ್ತಾ ನಗುತ್ತಾ ಇರುವ ಮಗುವನ್ನು ಸ್ವಾವಲಂಬಿಯಾಗುವಂತೆ ತಾಯಿ ಕೈ ಹಿಡಿದು ನಡೆಸುತ್ತಾಳೆ. ಹಾಗೆಯೇ ಭವಸಾಗರದಲ್ಲಿ ಮುಳುಗಿ ಏಳುವ ನಮ್ಮನ್ನು ಪ್ರಕೃತಿ ಮಾತೆ ಮೋಕ್ಷ ಮಾರ್ಗ ದಲ್ಲಿ ಮುನ್ನಡೆಸುತ್ತಾಳೆ ಸನ್ಮಾರ್ಗದಲ್ಲಿ ನಡೆಯುವ ಪ್ರವೃತ್ತಿಯನ್ನು ಬೆಳೆಸಿಕೊಂಡರೆ, ಅಂಕುಡೊಂಕಾಗಿ ಹರಿಯುವ ನದಿ ಸಮುದ್ರವನ್ನು ಸೇರುವಂತೆ ನಾವೂ ಭವಬಂಧನದ ಅಡೆತಡೆಗಳನ್ನು ದಾಟಿ ಭಗವಂತನನ್ನು ಸೇರಬಹುದು. ಅದರೆ ಇದು ಮಾನವ ಸಹಜ ಪ್ರವೃತ್ತಿಗೆ ದುಃಸಾಧ್ಯ.

**ಜನ್ಮಾಂತರದ ರಹಸ್ಯ ಭೇದನ**-ಜನ್ಮಾಂತರದ ರಹಸ್ಯ ಭೇದನದಂತಹ ಅಧ್ಯಾತ್ಮಿಕ ಚಿಂತನೆಯಲ್ಲಿ ನಮ್ಮ ಪೂರ್ವಿಕರಷ್ಟು ಎತ್ತರಕ್ಕೆ ಜಗತ್ತಿನ ಯಾವ ಮಹಾನ್ ಚಿಂತಕರೂ ತಲುಪಿಲ್ಲ. ಆದರೂ ಅವರಿಗೆ ಈ ಬಗ್ಗೆ ತೀವ್ರ ಕೂತೂಹಲವಂತೂ ಇತ್ತು. ಹಾಗಾಗಿ ಅವರು ತಮ್ಮ ಕುತೂಹಲವನ್ನು ತಣಿಸಿಕೊಳ್ಳಲು ಭಾರತೀಯ ಚಿಂತನೆಯ ಮೂಲವನ್ನೇ ಅನುಸರಿಸುವುದು ಅನಿವಾರ್ಯವಾಯಿತು ಗ್ರಿಸಿನ ಪ್ರಸಿದ್ಧ ಗಣಿತ ಶಾಸ್ತ್ರಜ್ಞ ಪೈಥಗೋರಸ್ ಮತ್ತು ಸಾಕ್ರೆಟಿಸನ ಶಿಷ್ಯ ಪ್ಲೇಟೋ ಇಬ್ಬರೂ ಆಗ ಪ್ರಚಲಿತವಾಗಿದ್ದ Urphik ಎಂಬ ಧಾರ್ಮಿಕ ಮತಾವಲಂಬಿಗಳಾಗಿದ್ದರು. ಈ Urphik- ಮತದ ಮೂಲ ಸಿದ್ಧಾಂತಗಳಿಗೆ ನಮ್ಮ ಪ್ರಾಚೀನ ಆರ್ಯಮಹರ್ಷಿಗಳ ಚಿಂತನೆಗಳೇ ಮೂಲಾಧಾರ, ಪ್ಲೇಟೋ ಮೊದಲಾದ ದಾರ್ಶನಿಕರು ತಮ್ಮ ವಿಶಿಷ್ಟ ರಚನೆಗಳಲ್ಲಿ ಜನ್ಮಾಂತರವಾದಗಳನ್ನು ಸಮರ್ಥಿಸಿದ್ದಾರೆ. ಹಿಂದೂ ಮತ್ತು Urphik ಧರ್ಮ ಸಿದ್ಧಾಂತಗಳ ಸಾಮ್ಯವನ್ನು ಕುರಿತು ಈ ಹೇಳಿಕೆ ಪ್ರಚಲಿತವಿದೆ.

"There can not be any doubt that the religion urphik was fundamentally based on the Arya Philosophy and faith"

**ಇಸ್ಲಾಂ ಮತ್ತು ಪುನರ್ಜನ್ಮ:**

---------------

---------------

**ಜಾಂಕಿ ಮಾರ್ಗಮ್ ಹಮಚೂ ಜಾಂ ಖುಶ್ ಅಮದಸ್ತ್।**

**ಮರ್ಗಮನ ದರವಾಸ್ ಚಂಗ್ ಅನ್ದರ್ ಜದಸ್ತ್॥**

"ಮೃತ್ಯು ನನಗೆ ಜೀವನದಷ್ಟೇ ಪ್ರಿಯವಾಗಿದೆ. ನನ್ನ ಮೃತ್ಯುವಿನಲ್ಲಿ ಪ್ರತ್ಯೇಕಿಸಲಾಗದ ಪುನರ್ಜೀವನ ಅಡಗಿದೆ. ಅಂದರೆ ಮೃತ್ಯುವಿನ ನಂತರ ತತ್‌ಕ್ಷಣದಲ್ಲಿ ನನಗೆ ಪುನರ್ಜೀವನ ಪ್ರಾಪ್ತವಾಗುತ್ತದೆ."

ಶಾಹ್ ಮಹಮ್ಮದ್ ಖದೀಲಲ್ ಅಲಮ್‌ರವರ ಅನುವಾದಿತ ಲೇಖನದ ಸಾರಂಶದಲ್ಲಿ ಉಲ್ಲೇಖಿತವಾದ ಸೂಫೀದಾರ್ಶನಿಕ ಮೌಲಾನ ಜಲಾಲುದ್ದೀನ್‌ರ ಈ ಉಕ್ತಿಗಳಿಂದ ಇಸ್ಲಾಂ ಧರ್ಮದಲ್ಲಿ ಪುನರ್ಜನ್ಮದ ಕಲ್ಪನೆಯಿತ್ತೆಂದು ಸ್ಪಷ್ಟವಾಗುತ್ತದೆ (ಈಗಲೂ ಪ್ರಚಲಿತವಿರುವಂತೆ ಸಮಾಧಿಯಲ್ಲಿ ಧೂಪ, ಶರ್ಕರ ನೈವೇದ್ಯ, ಬಣ್ಣದ ಬಟ್ಟೆಯಿಂದ ಅಲಂಕಾರ, ಪ್ರಾರ್ಥನೆ, ವಾರ್ಷಿಕ ಜಾತ್ರೆ – ಮೊದಲಾದ ಆಚರಣೆಗಳು ಪುನರ್ಜನ್ಮದ ನಂಬಿಕೆಯನ್ನು ಸೂಚಿಸುವುದಿಲ್ಲವೇ?) ಅದರೆ **ಶರಿಯತ್** (ಇಸ್ಲಾಂ ಧರ್ಮದ ಶಾಸ್ತ್ರವಾಕ್ಯ)ನ ಕಟ್ಟು ನಿಟ್ಟಾದ ಶಾಸನದಂತೆ ಇಸ್ಲಾಮಿನ ಯಾವ ಪ್ರಚಾರಕರೂ ಜನ ಸಾಮಾನ್ಯರಿಗೆ ಇದನ್ನು ಪ್ರಚುರಪಡಿಸದಂತೆ ನಿರ್ಬಂಧಿಸಲಾಗಿದೆ. ಹಾಗಾಗಿ ಅಲ್ಲಲ್ಲಿ ಗುಪ್ತರೂಪದಲ್ಲಿ ಇದ್ದು ಪ್ರಚಾರದಲ್ಲಿದ್ದು ಕ್ರಮೇಣ ಈ ಪುನರ್ಜನ್ಮದ ಕಲ್ಪನೆ ಮರೆಯಾಯಿತು.

ಕ್ರೈಸ್ತ ಮತದಲ್ಲಿ "**ನಾಸ್ಟೀಸಿಸಮ್**" ಸಂಪ್ರದಾಯದವರು ಪುನರ್ಜನ್ಮ ಸಿದ್ಧಾಂತವನ್ನು ವ್ಯಾಪಕವಾಗಿ ನಂಬಿದ್ದರು. "**ಸಾಯ್ ಮೆನಿಸ್ಟ್**" "**ಬೆಸೀಲಿಯನ್**" "**ವೈಲೆಂಟೀನಿಯ ಮಾಶನಿಸ್ಟ್**" ಹಾಗೂ "**ಮೈನೀಚಿಯನ್**" ಸಂಪ್ರದಾಯದವರೂ ಪುನರ್ಜನ್ಮ ಸಿದ್ಧಾಂತದ ಮೇಲೆ ನಂಬಿಕೆಯನ್ನಿಟ್ಟಿದ್ದರು. ಅದರೆ ಉಳಿದ ಸಂಪ್ರದಾಯವಾದಿಗಳು ಇವರಿಗೆ ಕಿರುಕುಳ – ಕಷ್ಟ ನೀಡುತ್ತಿದ್ದರು. ಕ್ರಿ.ಶ. 6ನೇ ಶತಮಾನದಲ್ಲಿ ಚರ್ಚಿನ ಕೌನ್ಸಿಲ್‌ನಲ್ಲಿ "ಪುನರ್ಜನ್ಮ ಮೊದಲಾದ ಕೆಲವು ಸಿದ್ಧಾಂತಗಳನ್ನು ನಂಬುವುದು ಪಾಪ"ವೆಂದು ಘೋಷಿಸಲಾಯಿತು. ಜಸ್ಟೀನಿಯನ್ ಚಕ್ರವರ್ತಿ ರಾಜಾಜ್ಞೆಯ ಮೂಲಕ ಈ ಪುನರ್ಜನ್ಮ ಮೊದಲಾದ ಸಿದ್ಧಾಂತಗಳ ಮೇಲೆ ಸಂಪೂರ್ಣ ನಿರ್ಬಂಧ ಹೇರಿದ. ಹೀಗಾಗಿ ಕ್ರಿಶ್ಚಿಯನ್ ಧರ್ಮ ದಿಂದಲೂ ಈ ನಂಬಿಕೆ ಕಾಲಕ್ರಮೇಣ ಮರೆಯಾಯಿತು.

ಕ್ರಿಶ್ಚಿಯನ್ನರು ಜನ್ಮಾಂತರ ವಾದವನ್ನು ನೇರವಾಗಿ ಒಪ್ಪುವುದಿಲ್ಲ. ಆದರೆ "ಶರೀರ ತ್ಯಾಗದ ನಂತರ ಭಗವಂತನ ಸಮ್ಮುಖದಲ್ಲಿ ಜೀವಾತ್ಮದ ನ್ಯಾಯ ನಿರ್ಣಯವಾಗುತ್ತದೆ ಮತ್ತು ಜೀವಾತ್ಮವು ಸ್ವರ್ಗ ಅಥವಾ ನರಕಕ್ಕೆ ಕಳುಹಿಸಲ್ಪಡುತ್ತದೆ. ಸುಖದುಃಖವನ್ನು ಅನುಭವಿಸುವ ಶರೀರ ಶವಪೆಟ್ಟಿಗೆಯಲ್ಲಿ ಮಲಗಿರುತ್ತದೆ. ಆದರೆ ಜೀವ ಈ ಶರೀರದ ಮೂಲಕ ಮಾಡಿದ ಕರ್ಮಗಳ ಕಾರಣ ಸುಖ–ದುಃಖವನ್ನು ಸ್ವರ್ಗ–ನರಕಗಳಲ್ಲಿ ಅನುಭವಿಸಬೇಕಾಗುತ್ತದೆ"–ಮೊದಲಾದ ನಂಬಿಕೆಗಳಿಂದ ಕ್ರಿಶ್ಚಿಯನ್ನರ ಜನ್ಮಾಂತರ ವಾದಕ್ಕೆ ಪರ್ಯಾಯವಾಗಿ ಪುಷ್ಟಿ ದೊರಕುತ್ತದೆ.

ಲೋಕಾಂತರ ಸುಖ – ದುಃಖವನ್ನು ಅನುಭವಿಸುವ ಮೊದಲು ಸುಖ ದುಃಖಗಳಿಗೆ ಕಾರಣವಾದ ಕರ್ಮಕ್ಕೆ ಒಂದು ಜನ್ಮ ಅಗತ್ಯವಿತ್ತಲ್ಲ! ಇದೇ ತರ್ಕವನ್ನು ಅನುಸರಿಸಿ "ಈ ಜನ್ಮದಲ್ಲಿ ಅನುಭವಿಸುವ ಸುಖ–ದುಃಖಕ್ಕೆ ಕಾರಣವಾದುದು ಜನ್ಮಾಂತರದ ಕರ್ಮಫಲ" ಎಂಬುದಾಗಿ ಪುನರ್ಜನ್ಮವಾದ ಸಿದ್ಧವಾಗುತ್ತದೆ.

ಆಫ್ರಿಕಾ ಮತ್ತು ಅಮೇರಿಕಾ ಮೂಲ ನಿವಾಸಿಗಳಲ್ಲಿ ಪುನರ್ಜನ್ಮದ ಬಗೆಗಿನ ನಂಬಿಕೆಯ ಪ್ರಮಾಣಗಳು ಸಿಗುತ್ತವೆ. **ಮೌಲ್ಡೀ** ಎಂಬ ಪುರಾತತ್ತ್ವಜ್ಞರು ಕಟ್ಟಿಗೆ ಮತ್ತು ಕಲ್ಲಿನ ಮೇಲೆ



ರಚಿತವಾದ (ಕೆತ್ತನೆ) ಚಿತ್ರಗಳ ಆಧಾರದ ಮೇಲೆ "ಈ ಜನಾಂಗದಲ್ಲಿ ಮರಣಾನಂತರ ಆತ್ಮವು ಶರೀರದಿಂದ ಬೇರೆಯಾಗುತ್ತದೆ ಮತ್ತು ಪುನಃ ಅದೇ ಶರೀರವನ್ನು ಪ್ರವೇಶಿಸುತ್ತದೆ ಎಂಬ ನಂಬಿಕೆ ಸಾರ್ವಜನಿಕವಾಗಿತ್ತು. ಅದ್ದರಿಂದ ಮೃತ ಶರೀರದಲ್ಲಿ ಮಸಾಲೆ ತುಂಬಿಸಿ ಬಹುಕಾಲ ಸುರಕ್ಷಿತವಾಗಿರುವ ಸಂಪ್ರದಾಯವಿತ್ತು. ಅಲ್ಲದೇ ಇನ್ನೂ ಕೆಲವು ಜನಾಂಗ ದವರಲ್ಲಿ ಮೃತ್ಯುವಿನ ನಂತರ ಆತ್ಮ ಹೊಸ ಶರೀರವನ್ನೆ ಪ್ರವೇಶಿಸುತ್ತದೆಂದೂ ನಂಬುತ್ತಿದ್ದರು" ಎಂದು ಉಲ್ಲೇಖಿಸಿದ್ದಾರೆ. ಪುನರ್ಜನ್ಮದ ಸಿದ್ಧಾಂತವನ್ನು ಕೇವಲ ಕಾಲ್ಪನಿಕ, ಕೆಲವರ ನಂಬಿಕೆ, ಪೊಳ್ಳುವಾದ ಎಂದು ತೂರಿಬಿಡುವಂತಿಲ್ಲ. ಈ ಪುನರ್ಜನ್ಮದ ಸಿದ್ಧಾಂತವೇ ಆಧುನಿಕ ವೈಜ್ಞಾನಿಕ ಚಿಂತನೆಯೆಂಬ ಬಿರುಗಾಳಿ, ಸಾಮಾಜಿಕ ಪರಿವರ್ತನೆ ಯಂತಹ ಚಂಡಮಾರುತ, ಧಾರ್ಮಿಕ ವಿಪ್ಲವದಂತಹ ಭೀಕರ ಅಪಘಾತಗಳ ಹೊರತಾಗಿ ನಮ್ಮ ಹಿಂದೂ ಧರ್ಮದ ಯಥಾಸ್ಥಿತಿಯ ಉಳಿವಿಗೆ ಮೂಲಕಾರಣವಾಗಿದೆ.

ಮೋಕ್ಷ ಸಿದ್ಧಿಸಿದರೆ ಭಗವನ್ನಾಮ ಸಂಕೀರ್ತನೆ, ಭಗವಂತನ ಸಾನ್ನಿಧ್ಯದ ಆನಂದ ಸಿಗುವುದಿಲ್ಲ. ಆದ್ದರಿಂದ ಪುನಃ ಪುನಃ ಜನ್ಮ ತಳೆದರೆ ಭಗವಂತನನ್ನು ಆರಾಧಿಸಿ ಸಂತೋಷ ಪಡಬಹುದೆಂಬುದು ಪುನರ್ಜನ್ಮದ ಲಾಭ.

"ಆಧ್ಯಾತ್ಮಿಕ ದೃಷ್ಟಿಯಿಂದ ಈ ನಾಮರೂಪಾತ್ಮನಾದ ಪರಮಾತ್ಮನನ್ನೇ 'ಜನ್ಮಮರಣದ ಚಕ್ರ'ವೆಂದೂ ಅಥವಾ 'ಸಂಸಾರ'ವೆಂದೂ ಹೇಳುತ್ತಾರೆ. ಮತ್ತು ಈ ನಾಮರೂಪಗಳ ಆಧಾರ ಭೂತವಾದ ಶಕ್ತಿಯನ್ನು ಸಮಷ್ಟಿರೂಪದಿಂದ 'ಬ್ರಹ್ಮ' ಎಂದೂ ವ್ಯಷ್ಟಿರೂಪದಿಂದ 'ಜೀವಾತ್ಮ' ಎಂದೂ ಹೇಳುತ್ತಾರೆ. ವಾಸ್ತವಿಕವಾಗಿ ಹೇಳುವುದಾದರೆ ಈ ಆತ್ಮ ನಿತ್ಯ ಮತ್ತು ಸ್ಥಾಯಿ ಆಗಿರುವುದರಿಂದ ಜನಿಸುವುದೂ ಇಲ್ಲ ಮರಣಿಸುವುದೂ ಇಲ್ಲ. ಆದರೆ ಕರ್ಮಬಂಧನದಲ್ಲಿ ಸಿಲುಕುವುದರಿಂದ ಒಂದು ನಾಮರೂಪದ ನಾಶದ ನಂತರ ಅದಕ್ಕೆ ಇನ್ನೊಂದು ನಾಮರೂಪ ಪ್ರಾಪ್ತ ವಾಗುತ್ತದೆಂಬುದನ್ನು ಅಲ್ಲಗಳೆಯುವಂತಿಲ್ಲ. ಇಂದಿನ ಕರ್ಮಫಲವನ್ನು ನಾಳೆ, ನಾಳೆಯದನ್ನು ನಾಡಿದ್ದು ಇಷ್ಟೇ ಅಲ್ಲದೆ ಈ ಜನ್ಮದಲ್ಲಿ ಮಾಡಿದುದನ್ನು ಮುಂದಿನ ಜನ್ಮಗಳಲ್ಲಿ ಅನುಭವಿಸಬೇಕಾಗುತ್ತದೆ–ಹೀಗೆ ಈ ಭವಚಕ್ರ ಚಲಿಸುತ್ತಲೇ ಇರುತ್ತದೆ".

**–ಲೋಕಮಾನ್ಯ ತಿಲಕ್**

ರವೀಂದ್ರನಾಥ ಟಾಗೋರರಂತಹ ಆಧುನಿಕ ಚಿಂತಕರೂ ಪುನರ್ಜನ್ಮದ ನಂಬಿಕೆ ಯನ್ನು ಅಲ್ಲಗಳೆಯಲಿಲ್ಲ. ಅಂತೆಯೇ ಅನೇಕ ಪಾಶ್ಚಾತ್ಯ ಚಿಂತಕರೂ ಪುನರ್ಜನ್ಮವನ್ನು ಪುಷ್ಟೀಕರಿಸಿದ್ದಾರೆ. Prof. Huxleyಯವರು ಹೇಳುತ್ತಾರೆ– "ಸರಿಯಾಗಿ ವಿಚಾರ ಮಾಡದೆ ಅತುರದ ನಿಣಯ ತೆಗೆದುಕೊಳ್ಳುವ ವಿಚಾರವಂತರು ಮಾತ್ರವೇ ಪುನರ್ಜನ್ಮ ಸಿದ್ಧಂತವನ್ನು ಮೂರ್ಖತನದ ಸಂಗತಿಯೆಂದೇ ವಿರೋಧಿಸುತ್ತಾರೆ. ವಿಕಾಸವಾದ ಸಿದ್ಧಾಂತದಂತೆ ದೇಹಾಂತರವಾದದ ಸಿದ್ಧಾಂತವೂ ವಾಸ್ತವಿಕವೇ ಆಗಿದೆ".

"As you, life, I reckon you are the leaving of many deaths. No doubt, I have died myself ten thousand times " -Walt Wgitnecem

(ಎಲೈ ಆತ್ಮವೇ, ನೀನು ಅನೇಕ ಸಾವುಗಳಿಂದ ಬದುಕಿದ್ದೀಯೆಂದು ನಾನು ನಂಬುತ್ತೇನೆ. ನಾನು ಹತ್ತು ಸಾವಿರ ಬಾರಿ ಸತ್ತಿದ್ದೇನೆಂಬುದರಲ್ಲಿ ಅನುಮಾನವಿಲ್ಲ)

Imitation of Immortability ಯಲ್ಲಿ wordsworth ಹೀಗೆ ಹೇಳುತ್ತಾರೆ – "ನಮ್ಮೊಂದಿಗೆ, ನಮ್ಮ ಜೀವನದ ನಕ್ಷತ್ರದೊಂದಿಗೆ ಉದಯಿಸುವ ಆತ್ಮದ ಉದ್ಭವ ಬೇರೆಲ್ಲೋ ಇದೆ ಮತ್ತು ಇದು ಬಹುದೂರದಿಂದ ಬಂದಿದೆ.

ಹೀಗೆಯೇ Tennyson ಕೂಡ ತಮ್ಮ Two Voices ನಲ್ಲಿ ಪುನರ್ಜನ್ಮವನ್ನು ಪುಷ್ಟೀಕರಿಸುತ್ತಾರೆ.

"Death has no power the immortal soal to stay, that, when its present body turns to stay seeks a fresh home sand with unlessned might, Inspires another frame worth life and light " **-Dryden**

(ಅಮರವಾದ ಈ ಆತ್ಮವನ್ನು ವಧಿಸುವ ಸಾಮರ್ಥ್ಯ ಮೃತ್ಯುವಿಗಿಲ್ಲ. ಮೃತ್ಯು ಆತ್ಮದ ವರ್ತಮಾನ ಶರೀರವನ್ನು ನಾಶಪಡಿಸಲು ಹೊರಟಾಗ ಆತ್ಮ ಹೊಸ ನೆಲೆಯನ್ನು ಹುಡುಕುತ್ತದೆ. ಮತ್ತು ಇನ್ನೊಂದು ಶರೀರಕ್ಕೆ ಜೀವ ಮತ್ತು ಪ್ರಕಾಶವನ್ನು ನೀಡುತ್ತದೆ).

ಜನ್ನನ ಯಶೋಧರ ಚರಿತೆಯಲ್ಲಿನ ಅನೇಕ ಜನ್ಮಗಳ ವರ್ಣನೆಯಿಂದ ಜೈನ ಧರ್ಮದಲ್ಲಿ ಮತ್ತು ಜಾತಕ ಕಥೆಗಳಲ್ಲಿನ ಜನ್ಮಾಂತರ ವರ್ಣನೆಯಿಂದ ಬೌದ್ಧ ಧರ್ಮದಲ್ಲಿ ಪುನರ್ಜನ್ಮದ ಬಗೆಗಿನ ನಂಬಿಕೆ ಸ್ಪಷ್ಟವಾಗುತ್ತದೆ.

ನಮ್ಮ ಪ್ರಾಚೀನ ಸಾಹಿತ್ಯಗಳಲ್ಲೂ ಪುನರ್ಜನ್ಮದ ಉಲ್ಲೇಖವಿದೆ. ಅಭಿಜ್ಞಾನ ಶಾಕುಂತಲದ ಐದನೇ ಅಂಕದಲ್ಲಿ ಶಕುಂತಲೆಯನ್ನು ನೆನಪಿಸಿಕೊಂಡು ದುಷ್ಯಂತನ ಮಾತು–

**ರಮ್ಯಾಣಿ ವೀಕ್ಷ್ಯ ಮಧುರಾಂಶ್ಚನಿಶಮ್ಯ ಶಬ್ದಾನ್ ಪರ್ಯುತ್ಸುಕೋ ಭವತಿ ಯತ್ಸುಖಿತೋಽಪಿ ಜಂತುಃ॥**

**ತಚ್ಚೇತಿ ಸಾ ಸ್ಮರತಿ ನೂನಮ ಬೋಧಪೂರ್ವಭಾವಾಸ್ಥಿರಾಣಿ ಜನನಾಂತರ ಸೌಹೃದಾನಿ॥**

"ನೂನಂ ಚೇತ–ಸಾ ಅಬೋಧಪೂರ್ವಂ ಭಾವಸ್ಥಿರಾಣಿ ಜನನಾಂತರ ಸೌಹೃದಾನಿ ಸ್ಮರತಿ–ನಿಶ್ಚಯವಾಗಿ ಮನಸ್ಸುತಾನಾಗಿಯೇ (ಅಬುದ್ಧಿ ಪೂರ್ವಕಂ ಯಥಾತಥಾ)ವಾಸನಾ ರೂಪದ ಪೂರ್ವಜನ್ಮದ ಅನುಭವಗಳನ್ನು ಸ್ವಾಭಾವಿಕವಾಗಿಯೇ ನೆನಪಿಸಿಕೊಳ್ಳುತ್ತದೆ"

**ಮೃತ್ಯು ಸಂಜೀವಿನೀ ವಿದ್ಯೆ :** ಶ್ರೀಕೃಷ್ಣ ತನ್ನ ಗುರುಪುತ್ರ ಮತ್ತು ಬ್ರಾಹ್ಮಣ ಪುತ್ರರನ್ನು ಬದುಕಿಸಿದ ಬಗ್ಗೆ ಶ್ರೀ ಮದ್ಭಾಗವತದಲ್ಲಿ ವಿಸ್ತಾರವಾದ ವರ್ಣನೆಯಿದೆ. ಆದಿ ಶಂಕರರ ದೇಹಾಂತರ ಪ್ರವೇಶವನ್ನು ಹಿಂದೆಯೇ ಪ್ರಸ್ತಾಪಿಸಿದೆ. ಮನುಷ್ಯನ ಆಯಸ್ಸು ಕ್ಷೀಣಿಸಿ ಮರಣಾಸನ್ನಸ್ಥಿತಿಯಲ್ಲಿದ್ದಾಗ ಅಥವಾ ಪ್ರಾಣೋತ್ಕ್ರಮಣವಾದ ಮೇಲೂ ಸಹ ಆತನನ್ನು ಬದುಕಿಸುವ, ದೀರ್ಘ ಜೀವಿಯನ್ನಾಗಿಸುವ ಅಥರ್ವವೇದದ ಒಂದು ಮಂತ್ರ (3–11–2) ಹೀಗಿದೆ.

**ಯದಿಕ್ಷಿತಾಯು ರ್ಯದಿ ವಾ ಪರೇತೋ ಯದಿ ಮೃತ್ಯೋರಂತಿಕಂ ನೀತ ಏವ।**
**ತಮಾಹರಾಮಿ ನಿರ್ಋತೇರುಪಸ್ಥಾ ದಸ್ಪಾರ್ಶಮೇನಂ ಶತ ಶಾರದಾಯ॥**



"ಈ ವ್ಯಕ್ತಿಯು ಒಂದು ವೇಳೆ ಕ್ಷೀಣ ಆಯುಷ್ಯವುಳ್ಳವನಾಗಿದ್ದರೆ, ಮೂರ್ಛಿತನಾಗಿದ್ದರೆ ಅಥವಾ ಸಾವಿನ ಬಳಿಗೆ ಕೊಂಡೊಯ್ಯಲ್ಪಟ್ಟಿದ್ದರೆ, ಅಂಥವನನ್ನು ಮೃತ್ಯುದೇವತೆಯ ಸೆರಗಿನಿಂದ ಮರಳಿ ಕರೆತರುತ್ತೇನೆ. ಇವನನ್ನು ನೂರು ವರ್ಷ ಬದುಕುವ ಹಾಗೆ ಸ್ಪರ್ಶಿಸುತ್ತೇನೆ."

ಋಗ್ವೇದದ ಹತ್ತನೇ ಮಂಡಲದಲ್ಲಿ ಸುಬಂಧುವಿನ ಒಂದು ರೋಚಕ ಉಪಾಖ್ಯಾನ ವಿದೆ. 'ಅಸ್ಮಾತಿ' ರಾಜನು ರಾಕ್ಷಸರ ಮಾಯಾ ಜಾಲಕ್ಕೆ ಸಿಲುಕಿ ತನ್ನ ಕುಲಗುರುಗಳನ್ನು ಬಿಟ್ಟು 'ಕಿರಾತಾಕುಲೀ' ಎಂಬ ಮಾಯಾವಿ ರಾಕ್ಷಸನನ್ನು ತನ್ನ ಪುರೋಹಿತರನ್ನಾಗಿ ಮಾಡಿಕೊಂಡ ಇದರಿಂದ ಕುಪಿತರಾದ ಬಂಧು, ಸುಬಂಧು, ಶ್ರುತಬಂಧು, ವಿಪ್ರಬಂಧು ಎಂಬ ಆತನ ನಾಲ್ವರು ಪುರುರೋಹಿತರು ಆಭಿಚಾರಿಕ ಪ್ರಯೋಗದಿಂದ ರಾಜನಿಗೆ ಕೇಡುಕನ್ನುಂಟು ಮಾಡಲು ಯೋಚಿಸಿದರು. ಇದರ ಸೂಚನೆಯನ್ನರಿತ ರಾಜ ಹೊಸ ಪುರೋಹಿತರನ್ನು ಎಚ್ಚರಿಸಿದ. ಅವರು ಬಂಧು ಸಹೋದರರ ಪ್ರಯತ್ನವನ್ನು ನಿಷ್ಫಲ ಗೊಳಿಸಿ ರಾಜನ ಆಪತ್ತನ್ನು ನಿವಾರಿಸಿದ್ದಲ್ಲದೆ, ಅಜಾಗರೂಕತೆಯಿಂದ ನಿದ್ರಿಸುತ್ತಿದ್ದ ಸುಬಂಧುವಿನ ಪ್ರಾಣವನ್ನು ಅಪಹರಿಸಿದರು. ಉಳಿದ ಬಂಧು ಸಹೋದರತ್ರಯರು ಸೂಕ್ತದಲ್ಲಿ ಉಕ್ತವಾದ ಮಂತ್ರಗಳ ಅನುಷ್ಠಾನದಿಂದ ಸುಬಂಧುವಿನ ಜೀವವನ್ನು ಆಹ್ವಾನಿಸಿದರು. ಬದುಕಿದ ಸುಬಂಧುವನ್ನು ಎರಡೂ ಕೈಗಳಿಂದ ತಬ್ಬಿಕೊಂಡು ಬಂಧು ಸಹೋದರರು ಈ ಮಂತ್ರವನ್ನು ಜಪಿಸುತ್ತಾರೆ.

**ಅಯಂ ಮೇ ಹಸ್ತೋ ಭಗವಾನ್ ಅಯಂ ಮೇ ಭಗವತ್ತರಃ।**
**ಅಯಂ ಮೇ ವಿಶ್ವಭೇಷಜೋಽಯಂ ಶಿವಾಭಿಮರ್ಶನಃ॥ –ಋಗ್ವೇದ10–60–12**

"ನನ್ನ ಈ ಕೈ ಸೌಭಾಗ್ಯಶಾಲಿಯಾಗಿದೆ. ಈ (ಮತ್ತೊಂದು) ಕೈ ಅತ್ಯಂತ ಸೌಭಾಗ್ಯಶಾಲಿಯಾಗಿದೆ. ಇದು 'ವಿಶ್ವಭಿಷಕ್' (ಜಗತ್ತಿಗೆ ಔಷಧಪ್ರಾಯವಾಗಿದೆ) ಈ ಹಸ್ತಸ್ಪರ್ಶದಿಂದ ಮಂಗಳವಾಗುತ್ತದೆ". ಸತ್ತವರನ್ನು ಬದುಕಿಸುವ ಸಾಧ್ಯತೆಯನ್ನು ಸಾರಾಸ ಗಟಾಗಿ ನಿರಾಕರಿಸುವಂತಿಲ್ಲವೆಂದು ಇದರಿಂದ ಸ್ಪಷ್ಟವಾಗುತ್ತದೆ. ಹೃದಯ ಸ್ತಬ್ಧವಾದ ಮೇಲೂ ಕೆಲವೇ ನಿಮಿಷಗಳಷ್ಟು ಮಾತ್ರ ಬದುಕಿಸುವ ಸಾಧ್ಯತೆಯನ್ನು ವೈದ್ಯಕೀಯ ವಿಜ್ಞಾನ ದೃಢಪಡಿಸಿದೆಯೆಂದು ಪತ್ರಿಕಾ ಮಾಧ್ಯಮಗಳು ವರದಿ ಮಾಡಿವೆ.

**ಆಯನ್ತು ನಃ ಪಿತರಃ ಸೋಮ್ಯಾಸಃ ಅಗ್ನಿಷ್ವಾತ್ತಾಃ ಪಥಿಭಿಃ ದೇವಯಾನೈಃ।**
**ಅಸ್ಮಿನ್ ಯಜ್ಞೇ ಸ್ವಧಯಾ ಮದನ್ತಃ ಅಧಿಬ್ರುವನ್ತು। ತೇಽವನ್ತ್ವಸ್ಮಾನ್॥**

ಸ್ವಧಾಕಾರದಿಂದ ಪಿತೃಗಳನ್ನು ತೃಪ್ತಿಪಡಿಸುವ ವಿಚಾರ ಮಾಡಿದ ಕೂಡಲೆ ನಮ್ಮ ಕರೆಯಂತೆ ನಮ್ಮೆಡೆಗೆ ದೇವಯಾನದಿಂದ ಬರುತ್ತಾರೆ ಮತ್ತು ನಮಗೆ ಉತ್ತಮ ಉಪಾಯಗಳನ್ನು ತಿಳಿಸಿ ಪಿತೃ (ಪಾಂತಿ=ರಕ್ಷಂತಿ ಇತಿ ಪಿತರಃ ಅಂದರೆ ರಕ್ಷಿಸುವವರು) ಶಬ್ದ ಅನ್ವರ್ಥವಾಗುವಂತೆ ನಮ್ಮನ್ನು ರಕ್ಷಿಸುತ್ತಾರೆ. (ಯಜುರ್ವೇದ ಸಂ. 19–68)

ವಾಸ್ತವವಾಗಿ ಮೃತವ್ಯಕ್ತಿ ಆತ್ಮಕ್ಕೆ ಶಾಂತಿ ಕೋರುವ ಪ್ರಕ್ರಿಯೆ ಮಾನವ ಸಹಜ ಭಾವನೆ ಯಾಗಿದೆ. ಮುಸಲ್ಮಾನರು ಸಿದಿಗೆ ಮೆರವಣಿಗೆ ಮಾಡುತ್ತಾರೆ. ಸಮಾಧಿಯಲ್ಲಿ ದೀಪ

ಹಚ್ಚುತ್ತಾರೆ, ಸಕ್ಕರೆ ನಿವೇದನೆ ಮಾಡುತ್ತಾರೆ. ಸತ್ತವರ ಆತ್ಮಶಾಂತಿಗಾಗಿ ಕುರಾನಿನಲ್ಲಿ ಚರಮ ಶ್ಲೋಕ ಪಠಿಸುತ್ತಾರೆ. ರೋಮನ್ ಕೆಥೋಲಿಕ್ ಕ್ರೈಸ್ತರು ಗೋರಿಯ ಮೇಲೆ ಹೂ ಗುಚ್ಚ ಇಡುತ್ತಾರೆ. ಹಾಲಿನ ಬಾಟಲಿಯನ್ನು ಇಡುತ್ತಾರೆ. ಅವರ ಪವಿತ್ರ ಶಿಲುಬೆಯನ್ನು ಸಮಾಧಿಯ ಮೇಲೆ ನೆಡುತ್ತಾರೆ. ಇವೆಲ್ಲಾ ಚಟುವಟಿಕೆಗಳು ಮೃತ ವ್ಯಕ್ತಿಯ ಆತ್ಮಕ್ಕೆ ಶಾಂತಿ ಕೋರುವ ಪ್ರಕ್ರಿಯೆಯಲ್ಲದೆ ಮತ್ತೇನು? ಆರ್ಯ ಸಮಾಜದವರು ಆಜುಮೇರಿನಲ್ಲಿ ದಯಾನಂದ ಸರಸ್ವತಿಗಳ ಚಿತಾಸ್ಥಾನದಲ್ಲಿ ಅಖಂಡ ಜ್ಯೋತಿ ಬೆಳಗುತ್ತಾರೆ. ಇನ್ನು ಕೆಲವರು ಸಭೆ ಸೇರಿ ಎದ್ದುನಿಂತು ಮೃತರ ಆತ್ಮಕ್ಕೆ ಚಿರಶಾಂತಿ ಕೋರಿ ಮೌನ ಆಚರಿಸುತ್ತಾರೆ. ಶ್ರದ್ಧಾಂಜಲಿ ಅರ್ಪಿಸುತ್ತಾರೆ. ಈ ಎಲ್ಲಾ ಕ್ರಿಯೆಗಳೂ ಒಂದಲ್ಲ ಒಂದು ರೀತಿ ಮೃತ ಆತ್ಮದ ಪುನರ್ಜನ್ಮದ ನಂಬಿಕೆಯ ದ್ಯೋತಕವೇ ಆಗಿದೆ.

ಜನ್ಮಾಂತರ ಕರ್ಮಫಲ ಭೋಗಗಳನ್ನ ಸಾರುವ ಆಧ್ಯಾತ್ಮಕ ಜ್ಯೋತಿ ಬೆಳಗುತ್ತಿರುವುದು ಭಾರತದಲ್ಲಿ **'ಯಾವತ್ ಜೀವೇತ್ ಸುಖಂ ಜೀವೇತ್, ಋಣಂ ಕೃತ್ವಾಘೃತಂ ಪಿಬೇತ್'**–ಭಸ್ಮೀ ಭೂತವಾದ ದೇಹಕ್ಕೆ ಪುನರಾಗಮನವೆಲ್ಲಿಯದು? ಆದ್ದರಿಂದ ಜೀವಿತ ಕಾಲದಲ್ಲೇ ಎಲ್ಲಾ ವೈಭವಗಳನ್ನೂ ಸುಖ ಸಂಪತ್ತನ್ನೂ ಅನುಭವಿಸಬೇಕೆಂಬ ಚಾರ್ವಾಕ ಮತ ಪ್ರಚಾರವಾದುದೂ ಭಾರತದಲ್ಲೇ. ಸ್ವಾರಸ್ಯದ ಸಂಗತಿಯೆಂದರೆ ಜಗತ್ತಿನಲ್ಲಿ **ಆರ್ಥಿಕವಾಗಿಯೂ ವೈಚಾರಿಕವಾಗಿಯೂ ಅತ್ಯಂತ ಶ್ರೀಮಂತ ರಾಷ್ಟ್ರವಾದ ಅಮೇರಿಕಾದಂತಹ ದೇಶಗಳಲ್ಲೂ ಪುನರ್ಜನ್ಮದ ಬಗೆಗಿನ ನಂಬಿಕೆ ಬಲವಾಗುತ್ತಿದೆ.** 16–09–09ರ 'ವಿಜಯ ಕರ್ನಾಟಕ'ದಲ್ಲಿ ಪ್ರಕಟವಾದ ಎಂ.ಎಸ್.ರಾವ್‌ರವರ ಲೇಖನ ಓದುಗರಿಗೆ ನೆನಪಿಸುತ್ತೇನೆ.

'ಸನ್‌ಸೈಡ್', 'ಲವ್‌ಸೈನ್' ಮೊದಲಾದ ಅನೇಕ ಉತ್ಕೃಷ್ಟ ಕೃತಿಗಳ ಮೂಲಕ ಅತ್ಯಂತ ಜನ ಮನ್ನಣೆ ಪಡೆದ ಜಗತ್ತಿನ ಪ್ರಸಿದ್ಧ ಪ್ರತಿಭಾನ್ವಿತ ಲೇಖಕ, ಹೋರಾ–ಸಂಖ್ಯಾ ಹಸ್ತ ಸಾಮುದ್ರಿಕಾದಿ ಅನೇಕ ಶಾಸ್ತ್ರಕೋವಿದೆ. **ಶ್ರೀಮತಿ ಲಿಂಡಾ ಗುಡ್‌ಮ್ಯಾನ್** ಎಂಬ ಮಹಿಳೆ ಬಹಿರಂಗ ಹೇಳಿಕೆ ನೀಡಿ ಕ್ರೈಸ್ತ ಸಮುದಾಯವನ್ನು ಅಚ್ಚರಿಗೊಳಿಸಿದ್ದಾರೆ. ಆಕೆ ಕ್ರೈಸ್ತಮತೀಯಳು. ಕ್ರೈಸ್ತರಿಗೆ ಪುನರ್ಜನ್ಮದಲ್ಲಿ ನಂಬಿಕೆಯಿಲ್ಲ. "ಮಾನವ ಕೋಟಿಗೆ ಇರುವುದು ಒಂದೇ ಜನ್ಮ. ಸತ್ತಮೇಲೆ ಸ್ವರ್ಗ ಅಥವಾ ನರಕ ಮಾತ್ರ"ವೆಂದು ಕ್ರೈಸ್ತ ಮತೀಯರ ವಿಶ್ವಾಸ. ಆದರೆ ಈಕೆಗೆ ಪುನರ್ಜನ್ಮದಲ್ಲಿ ನಂಬಿಕೆಯಿದೆ. ಏಕೆಂದರೆ ಈಕೆ ಹಿಂದೂ ಧರ್ಮವನ್ನು ಆಳವಾಗಿ ಆಧ್ಯಯನ ಮಾಡಿದ್ದಾರೆ. ವೇದ–ಉಪನಿಷತ್ತು ಗೀತೆಗಳ ಅಧ್ಯಯನದಿಂದಾಗಿ ಹಿಂದೂ ಧರ್ಮವನ್ನು ಆಳವಾಗಿ ಆಧ್ಯಯನ ಮಾಡಿದ್ದಾರೆ. ವೇದ–ಉಪನಿಷತ್ತು–ಗೀತೆಗಳ ಅಧ್ಯಯನದಿಂದಾಗಿ ಹಿಂದೂ ಧರ್ಮದತ್ತ ಪೂರ್ಣ ಆಕರ್ಷಿತರಾಗಿದ್ದಾರೆ. ಇವರು ಏಳು ವರ್ಷದವರಾಗಿದ್ದಾಗಲೇ ಕೀಲೋಸ್‌ರವರ ಸಂಖ್ಯಾ ಭವಿಷ್ಯವನ್ನು ಅಧ್ಯಯನ ಮಾಡಿ ಪಾಂಡಿತ್ಯ ಪಡೆದುದು ಪೂರ್ವ ಜನ್ಮ ಸಂಸ್ಕಾರದ ಪ್ರಭಾವವೆಂದು ನಂಬಿದ್ದಾರೆ. ಪುನರ್ಜನ್ಮದ ಬಗ್ಗೆ ಈಕೆ ಬರೆದ ಲೇಖನಗಳನ್ನು ಮೊದಲಿಗೆ ಸುಳ್ಳೆಂದು ನಿಂದಿಸಿ ಅಪಹಾಸ್ಯಗೈದರು. ನಂತರ ಈಕೆಯ ಅಭಿಪ್ರಾಯ ಸಿದ್ಧಾಂತವನ್ನು ವಿಶ್ವದ ಪ್ರಸಿದ್ಧ ಲೇಖಕರು. ವೇದಾಂತಿಗಳು, ವಿಚಾರವಂತರು



ಸಮರ್ಥಿಸಿದಾಗ ಅಮೇರಿಕದ ಅನೇಕ ಪ್ರತಿಷ್ಠಿತ ದೈನಿಕ, ನಿಯತಕಾಲಿಕೆಗಳಲ್ಲಿ ಲೇಖನ–ವರದಿಗಳು ಅವಿರತವಾಗಿ ಬಂದುವು. ಇತ್ತೀಚೆಗೆ **ಲಿಸಾಮಿಲ್ಲರ್** ಎಂಬುವರು ಬರೆದ ಲೇಖನದಲ್ಲಿ ಅಮೇರಿಕನ್ನರು ನಿಧಾನವಾಗಿ ಹಿಂದೂ ಸಿದ್ಧಾಂತದತ್ತ ಆಕರ್ಷಿತರಾಗಿ, ಸಾಂಪ್ರದಾಯಿಕ ಕ್ರೈಸ್ತನ ನಂಬಿಕೆಗಳಿಂದ ದೂರವಾಗಿ ಹಿಂದೂಗಳಾಗುತ್ತಿದ್ದಾರೆ. ಅಲ್ಲದೆ ಸತ್ತ ನಂತರ ಹಿಂದುಗಳಂತೆ ಹೆಣವನ್ನು ಸುಡುತ್ತಿದ್ದಾರೆ ಎಂದು ಬರೆದಿದ್ದಾರೆ. ಅಮೇರಿಕದ ಪ್ರಸಿದ್ಧ ದೈನಿಕವೊಂದು ನಡೆಸಿದ ಸಮೀಕ್ಷೆಯಂತೆ ಶೇಕಡಾ 25 ರಷ್ಟು ಅಮೇರಿಕನ್ನರು ನಮಗೆ ಪುನರ್ಜನ್ಮದಲ್ಲಿ ವಿಶ್ವಾಸ ನಂಬಿಕೆಯಿದೆಯೆಂದು ಹೇಳಿಕೆ ನೀಡಿದ್ದರೆಂದು ಎಂ.ಎಸ್. ರಾವ್‌ರವರು ಬರೆಯುತ್ತಾರೆ.

**ಅವಶ್ಯಮನುಭೋಕ್ತವ್ಯಂ:** ಬೀಜದಲ್ಲಿನ ಫಲ ಕಾಲಗರ್ಭದಲ್ಲಿ ಅಡಗಿರುತ್ತದೆ. ಗೋಚರಿಸುವುದಿಲ್ಲ ಸರಿಯಾದ ಕ್ಷೇತ್ರದಲ್ಲಿ ಬಿತ್ತಲ್ಪಟ್ಟ ಬೀಜ ಮೊಳಕೆಯೊಡೆದು ಗಿಡವಾದ ಮೇಲೆ ಹೂ ಬಿಟ್ಟು ಫಲಭರಿತವಾಗಲು ಸಮಯ ಬೇಕು. ಹಾಗೆಯೇ ಮನುಷ್ಯ ಮಾಡಿದ ಪಾಪ–ಪುಣ್ಯ, ಒಳಿತು ಕೆಡುಕಿನ ಫಲ ಬೀಜರೂಪವಾಗಿ ತತ್‌ಕ್ಷಣದಲ್ಲಿ ಸಿದ್ಧವಾಗುತ್ತದೆ. **ದುಷ್ಕರ್ಮಗಳನ್ನಾಗಲೀ, ಸತ್ಕಾರ್ಯಗಳನ್ನಾಗಲೀ ನಿರಂತರವಾಗಿ ಹೆಚ್ಚು ಹೆಚ್ಚು ಮಾಡುತ್ತಾ ಹೋದಂತೆ** ಫಲವತ್ತಾದ ಹೊಲದಲ್ಲಿ ಬಿತ್ತಿದ ಬೀಜದಂತೆ ಹುಲುಸಾಗಿ ಬೆಳೆದು ಬೇಗನೆ ಫಲ ನೀಡುವಂತೆ ಕರ್ಮವೆಂಬ ಬೀಜವೂ **ಬೇಗ ಹೆಮ್ಮರವಾಗಿ ಬೆಳೆದು ಅಲ್ಪಕಾಲದಲ್ಲೇ ಫಲ ನೀಡಲು ಪ್ರಾರಂಭಿಸುತ್ತದೆ.** ಸತ್ಕರ್ಮ ದುಷ್ಕಾರ್ಯಗಳ ನಿರಂತರ ಆಚರಣೆ ಗಿಡಕ್ಕೆ ಗೊಬ್ಬರ ನೀರೆರೆದಂತೆ ಬೇಗ ಫಲ ನೀಡಲು ಕಾರಣವಾಗುತ್ತದೆ. ಹೀಗೆ ಕರ್ಮಫಲಗಳಿಗೆ ಕಾಲವೇ ಸಹಕಾರಿಯಾದ ಕಾರಣವಾಗಿದ್ದು, ಕಾಲ ಪಕ್ವವಾದಾಗ ಸುಖ ದುಃಖಗಳ ರೂಪದಲ್ಲಿ ಜನ್ಮಜನ್ಮಾಂತರದಲ್ಲಿ ಫಲಗಳು ಪ್ರಕಟವಾಗುತ್ತವೆ.

**ಮೃತಂ ಶರೀರಂ ಸಂತ್ಯಜ್ಯ ಕಾಷ್ಠಲೋಷ್ಠಸಮಂ ಕ್ಷಿತೌ । ವಿಮುಖಾ ಬಾಂಧವಾ ಯಾಂತಿ ಧರ್ಮಸ್ತಮನು ಗಚ್ಛತಿ ॥** ಶವವನ್ನು ನಿರುಪಯುಕ್ತ ಕಟ್ಟಿಗೆಯ ಚೂರಿನಂತೆ (ಸ್ಮಶಾನದಲ್ಲಿ) ತ್ಯಜಿಸಿ ಬಂಧುಗಳು ದೂರವಾಗುತ್ತಾರೆ. ಆದರೆ ಆ ಶರೀರದ ಆತ್ಮವನ್ನು ಧರ್ಮವು ಅನುಸರಿಸುತ್ತದೆ. **ಯಥಾಧೇನು ಸಹಸ್ರೇಷು ವತ್ಸೋ ವಿಂದತಿ ಮಾತರಂ। ತಥಾ ಪೂರ್ವಕೃತಂ ಕರ್ಮ ಕರ್ತಾರಮನು ಗಚ್ಛತಿ ॥** (ಶಾಂತಿಪರ್ವ). ಸಹಸ್ರಾರು ಹಸುಗಳ ನಡುವೆಯೂ ಕರುವು ತನ್ನ ತಾಯಿಯನ್ನು ಗುರುತಿಸಿ ಹೋಗುವಂತೆ ಮನುಷ್ಯನ ಕರ್ಮವು ಜನ್ಮಾಂತರದಲ್ಲಿ ಅತನನ್ನು ಅನುಸರಿಸಿ ನಿಶ್ಚಿತ ಫಲವನ್ನು ಅನುಸರಿಸುವಂತೆ ಮಾಡುತ್ತದೆ.

**ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಈಶ್ವರ ಸಂಕಲ್ಪ ಮತ್ತು ಕರ್ಮ ವಿಪಾಕ ಕಾರಣ** – ಸೂತ ಸಂಹಿತೆಯಲ್ಲಿ ಬ್ರಾಹ್ಮಣರಿಗೆ ಈಶ್ವರನ ಉಪದೇಶ (ಕಿಷ್ಕಿಂಧಾಕಾಂಡ–ಸರ್ಗ 25)

**ಸ್ವಭಾವಾ ದೇವ ಸಂಭೂತಂ ಸಮಸ್ತಮಿತಿ ಕೇಚನ ।**
**ತನ್ನಸಿದ್ಧ್ಯತಿ ವಿಪ್ರೇಂದ್ರಾಃ ದೇಶಕಾಲಾದ್ಯಪೇಕ್ಷಣಾತ್ ॥**
**ಮತ್ತಃ ಕರ್ಮಾನುರೂಪೇಣ ಜಗಜ್ಜನ್ಮಾದಿ ಜಾಯತೇ ।**

**ಏಷಸ್ವಭಾವೋ ವಿಪ್ರೇಂದ್ರಾಃ ಇತಿ ವೇದಾರ್ಥ ನಿರ್ಣಯಃ ॥**
**ನ ಮಯಾ ಕೇವಲೇನತು ನ ಚ ಕೇವಲ ಕರ್ಮಣಾ ।**
**ಪ್ರಾಣಿನಾಂ ಕರ್ಮಪಾಕೇನ ಮಯಾ ಚ ಮುನಿ ಸತ್ತಮಾಃ ।**
**ಜಗತಃ ಸಂಭವೋ ನಾಶಃ ಸ್ಥಿತಿ ಶ್ಚ ಭವತಿದ್ವಿಜಾಃ ।**

ಸ್ವಭಾವ ಮಾತ್ರದಿಂದಲೇ ಎಲ್ಲವೂ ಹುಟ್ಟುವುದೆಂಬುದು ಕೆಲವರ ಅಭಿಮತ. ಅದರೆ ಸ್ವಭಾವ ಮಾತ್ರದಿಂದಲೇ ಎಲ್ಲವೂ ಸಿದ್ಧಿಸುವುದಿಲ್ಲ. ದೇಶಕಾಲಾಪೇಕ್ಷೆಯಿಂದ ಕರ್ಮಕ್ಕನು ಗುಣವಾಗಿ ಜಗತ್ತು, ಪ್ರಾಣಿಗಳೇ ಮೊದಲಾದುವು ನನ್ನಿಂದ ಹುಟ್ಟುತ್ತವೆ. ಕರ್ಮಾನು ರೂಪವಾಗಿ ಹುಟ್ಟುವುದಕ್ಕೆ 'ಸ್ವಭಾವ' ಎಂದು ಹೆಸರು ವೇದಾರ್ಥಗಳೂ ಹೀಗೆಯೇ ನಿರ್ಣಯಿಸಿವೆ. ಕೇವಲ ನನ್ನೊಬ್ಬನಿಂದಲೂ ಜಗತ್ತಿನ ಸೃಷ್ಟಿಯು ಸಾಧ್ಯವಾಗುವುದಿಲ್ಲ. **ಪ್ರಾಣಿಗಳ ಕರ್ಮವಿಪಾಕದಿಂದಲೂ ಮತ್ತು ನನ್ನ ಪ್ರಭಾವದಿಂದಲೂ ಈ ಜಗತ್ತಿನ ಸೃಷ್ಟಿ – ಸ್ಥಿತಿ ಮತ್ತು ವಿನಾಶಗಳುಂಟಾಗುತ್ತವೆ. ಅಂದರೆ ಕರ್ಮವಿಪಾಕಕ್ಕನು ಗುಣವಾಗಿ ಈಶ್ವರ ಸಂಕಲ್ಪದಿಂದ ಹುಟ್ಟು – ಮರು ಹುಟ್ಟು ಸಂಭವಿಸುತ್ತದೆ. "ಅಕಾಲೇ ದುರ್ಲಭೋ ಮೃತ್ಯುಃ ಸ್ತ್ರಿಯಾ ವಾ ಪುರುಷಸ್ಯ ವಾ ॥** ಸ್ತ್ರೀಯರಿಗಾಗಲೀ, ಪುರುಷರಿಗಾಗಲೀ ಅಕಾಲದಲ್ಲಿ ಮೃತ್ಯು ಸಂಭವಿಸುವುದಿಲ್ಲ. ಕರ್ಮವಿಪಾಕಕ್ಕನುಗುಣವಾಗಿ ಈಶ್ವರ ಸಂಕಲ್ಪಿತ ಕಾಲದಲ್ಲಿ ಮಾತ್ರವೇ ಸಂಭವಿಸುತ್ತವೆ. ಮರಣ–ಕಾಲಧರ್ಮ ಕಾಲೇನ ಅವಶ್ಯಂ ಪ್ರಾಪ್ತವ್ಯಃ ಧರ್ಮಃ ॥

**ಶಯಾನಂ ಚಾನುಶೇತೇ ಹಿ ತಿಷ್ಠಂತ ಚಾನುತಿಷ್ಠತಿ । ಅನುಧಾವತಿ ಧಾವಂತಂ ಕರ್ಮ ಪೂರ್ವಂ ಕೃತಂ ನರಂ ॥** ಹಿಂದಿನ ಜನ್ಮದಲ್ಲಿ ಮಾಡಿದ ಕರ್ಮವು ಮಲಗಿರುವ ಮನುಷ್ಯನ ಜೊತೆಯಲ್ಲಿ ಮಲಗಿರುತ್ತದೆ. ನಿಂತಿರುವ ಮನುಷ್ಯನ ಜೊತೆಯಲ್ಲಿ ನಿಂತಿರುತ್ತದೆ. ಓಡಿ ಹೋಗುವವನ ಜೊತೆಯಲ್ಲಿ ಓಡುತ್ತಲೂ ಇರುತ್ತದೆ. ಯಾವುದೇ ಸ್ಥಿತಿಯಲ್ಲಿದ್ದರೂ ಪೂರ್ವಜನ್ಮದ ಕರ್ಮಫಲ ಅವನನ್ನು ಬಿಡದೆ ಅನುಸರಿಸುತ್ತಲೇ ಇರುತ್ತದೆ.

ಸರ್ವೇಕ್ಷಯಾಂತಾಃ ನಿಚಯಾಃ ಪತನಾಂತಾಃ ಸಮುಚ್ಛ್ರಯಾಃ। ಸಂಯೋಗಾ ವಿಪ್ರಯೋಗಾಂತಾಃ ಮರಣಾಂತಂ ಹಿ ಜೀವಿತಮ್ ॥ (ವಾಲ್ಮೀಕಿ ರಾಮಾಯಣ). ನಾವು ಎಷ್ಟೇ ಸಂಪತ್ತನ್ನು ಗಳಿಸಿದರೂ ಅದು ಕಾಲಾನುಕಾಲಕ್ಕೆ ನಾಶವಾಗುತ್ತದೆ. "ಅತ್ಯುನ್ನತಿಃ ಪತನ ಹೇತುಃ" ಎಂಬ ಗಾದೆಯಂತೆ ಮೇಲೇರಿದವನು ಕೆಳಗೆ ಇಳಿಯಲೇ ಬೇಕಾಗುತ್ತದೆ. ಅಥವಾ ಬಿದ್ದೇ ಬೀಳುತ್ತಾನೆ. ಬದುಕೊಂದು ಯಾತ್ರೆ. ಈ ಪ್ರಯಾಣದ ಅವಧಿಯಲ್ಲಿ ಪರಸ್ಪರ ಕಲೆತ ಬಂಧು–ಮಿತ್ರರು ಗಮ್ಯಸ್ಥಾನ ತಲುಪಿದ ಕೂಡಲೇ ವಾಹನದಿಂದ ಇಳಿದು ಬೇರೆ ಬೇರೆ ದಾರಿ ಹಿಡಿಯುವಂತೆ ಬದುಕಿನ ಯಾತ್ರೆಯ ಸಂಗಾತಿಗಳು ಶಾಶ್ವತವಾಗಿ ಬೇರೆಯಾಗುತ್ತಾರೆ. ಹಾಗೆಯೇ ಗರ್ಭದಿಂದ ಹೊರಬಂದ ಕೂಸು ಬೇಳೆದು ಎಂದಾದ ರೊಂದು ದಿನ ಸಾಯಲೇ ಬೇಕು. ಹೀಗೆ ಗಳಿಕೆಯಲ್ಲಿ ವ್ಯಯ ಸೇರುವಿಕೆಯಲ್ಲಿ ವಿಯೋಗ, ಜನನದಲ್ಲಿ ಮರಣ–ಅನಿವಾರ್ಯವೆಂಬುದು ಪ್ರಕೃತಿ ನಿಯಮ (ಇದಕ್ಕಾಗಿ ದುಃಖಿಸುವು ದರಲ್ಲಿ ಅರ್ಥವಿಲ್ಲ).



**ಮನುಷ್ಯ** ಅಖಂಡ ಬ್ರಹ್ಮಚರ್ಯವನ್ನು ಪಾಲಿಸಿದರೆ ಆತನ ಆತನ ಪ್ರಾಣ ಶಕ್ತಿ ಅತ್ಯಂತ ಪ್ರಬಲವಾಗಿದ್ದು ಮೃತ್ಯು ಸಮಯದಲ್ಲಿ ಪ್ರಾಣಗಳು ಕಪಾಲವನ್ನು ಒಡೆದು ಕೊಂಡು ಶರೀರದಿಂದ ಹೊರಟು ಸೂರ್ಯಮಂಡಲವನ್ನು ಭೇಧಿಸಿ ಬ್ರಹ್ಮಾಂಡದ ಪರಿಧಿಯನ್ನು ದಾಟಿ ಹೋಗುತ್ತವೆ. ಇದೇ ಮುಕ್ತಿ ಎಂದು ಶಾಸ್ತ್ರಗಳು ಹೇಳುತ್ತವೆ (ಸಂನ್ಯಾಸಿಗಳ ಸಮಾಧಿ ಮಾಡುವಾಗ ತಲೆಯ ಮೇಲೆ ತೆಂಗಿನ ಕಾಯಿಯನ್ನು ಒಡೆಯುವುದು ಇದನ್ನು ಸಂಕೇತಿಸುತ್ತದೆ). ಅದರೆ ಸಂತಾನವನ್ನು ಉತ್ಪಾದಿಸುವ ಗೃಹಸ್ಥರಲ್ಲಿ ಈ ಪ್ರಾಣ ಶಕ್ತಿ ಕ್ಷೀಣಿಸುತ್ತದೆಯಾದುದರಿಂದ ಪ್ರಾಣಗಳು ನವದ್ವಾರಗಳಲ್ಲಿ ಯಾವುದಾದರೂಂದು ದ್ವಾರದಿಂದ ಹೊರಬರುತ್ತವೆ. ದಹನ ಕ್ರಿಯೆಯಲ್ಲಿ ಮಗ ಕಪಾಲ ಕ್ರಿಯೆಯನ್ನು ನಡೆಸುವಾಗ "ನನ್ನಂತಹ ಮಗನನ್ನು ಉತ್ಪಾದಿಸದೆ ಅಖಂಡ ಬ್ರಹ್ಮಚರ್ಯೆ ಯನ್ನು ಪಾಲಿಸಿದ್ದಿದ್ದರೆ ಅಂತಹ ಬ್ರಹ್ಮಚರ್ಯದ ಪ್ರಭಾವದಿಂದ ನಿಮ್ಮ ಕಪಾಲ ಭೇದಿಸಿ ಮೃತ್ಯು ಸಂಭವಿಸುತ್ತಿತ್ತು. ನೀವು ಮುಕ್ತಿ ಪಡೆಯುತ್ತಿದ್ದಿರಿ. ಅದರೆ ನನ್ನನ್ನು ಪಡೆದು ಮುಕ್ತಿಯಿಂದ ವಂಚಿತರಾದಿರಿ. ಆದ್ದರಿಂದ ಶ್ರಾದ್ಧಾದಿ ಕರ್ಮಾನುಷ್ಠಾನದ ಮೂಲಕ ನಿಮಗೆ ಮುಕ್ತಿ ದೊರೆಕಿಸುವುದು ನನ್ನ ಕರ್ತವ್ಯವಾಗಿದೆ" ಎಂದು ಮೃತ ತಂದೆಯನ್ನು ಕುರಿತು ಪ್ರತಿಜ್ಞೆಗೈಯುತ್ತಾನೆ. ಸಂನ್ಯಾಸಿಗಳ ಪಾರ್ಥಿವ ಶರೀರವನ್ನು ಕುರಿತು ಆಚರಿಸುವ ಔರ್ಧ್ವ ದೈಹಿಕ ಕ್ರಿಯೆಗೂ ವ್ಯತ್ಯಾಸವಿರಲು ಕಾರಣವೇನೆಂದರೆ ಸಂನ್ಯಾಸಿಗಳ ಜೀವ ಸ್ವತಃ ಮುಕ್ತಿ ಹೊಂದುತ್ತದೆ. ಅದರೆ ಗೃಹಸ್ಥನ ಜೀವಕ್ಕೆ ಸಂಸ್ಕಾರದ ಮೂಲಕ ಮೋಕ್ಷ ದೊರಕಿಸಬೇಕು.

**ಜೀವತೋ ವಾಕ್ಯಕರಣಾತ್ ಕ್ಷಯಾಹೇ ಭೂರಿಭೋಜನಾತ್ ।**
**ಗಯಾಯಾಂ ಪಿಂಡದಾನಾಚ್ಚ ತ್ರಿ ಭಿಃ ಪುತ್ರಸ್ಯ ಪುತ್ರತಾ ॥ (ದೇವಿ ಭಾಗವತ 6–4–15)**

ತಂದೆ ಬದುಕಿದ್ದಾಗ ಆತನ ಆಜ್ಞೆಯನ್ನು ಪಾಲಿಸುವುದು (ಆತನ ಅಭಿಲಾಷೆಯನ್ನು ಪೂರೈಸುವುದು), ಔರ್ಧ್ವ ದೈಹಿಕ–ಶ್ರಾದ್ಧಾದಿಗಳಲ್ಲಿ ಭೂರಿಭೋಜನಾದಿಗಳಿಂದ ಆಪ್ತೇಷ್ಟ ರನ್ನು ತೃಪ್ತಿ ಪಡಿಸುವುದು, ಗಯಾ ಶ್ರಾದ್ಧದಿಂದ ಮುಕ್ತಿ ದೊರಕಿಸುವುದು. ಈ ಮೂರು ಕರ್ತವ್ಯಗಳಿಂದ ಪುತ್ರತ್ವ ಸಾರ್ಥಕವಾಗುತ್ತದೆ.

**ಅನಚ್ಛಯೇ ತುರಗಾತು ಜೀವಮೇ ಜದ್ ಧ್ರುವಂ ಮಧ್ಯ ಅಪಸ್ತ್ಯಾನಾಮ್ ।**
**ಜೀವೋ ಮೃತಸ್ಯ ಚರತಿ ಸ್ವಧಾಭಿ ರಮರ್ತ್ಯೋ ಮರ್ತ್ಯೇನಾ ಸಯೋನಿಃ ॥**

**(ಋಗ್ವೇದ 1–22–7)**

ಈ ಋಗ್ವೇದ ಮಂತ್ರದ ಉತ್ತರಾರ್ಧಕ್ಕೆ ಸಾಯಣಾಚಾರ್ಯರ ಭಾಷ್ಯ ಹೀಗಿದೆ. ಮೃತಸ್ಯ – ಶರೀರ ಸಂಬಂಧೀ ಜೀವಃ; ಮರ್ತ್ಯೇನ – ಮರಣ ಧರ್ಮಕೇನ ಶರೀರೇಣ ಸಯೋನಿಃ–ಪೂರ್ವಂ ಸಮಾನೋತ್ಪತ್ತಿ ಸ್ಥಾನಃ । ಯದ್ಯಪಿ ಜೀವಸ್ಯ ನ ಜನ್ಮಾಸ್ತಿ, ತಥಾಪಿ ವಪುಷಃ ತತ್ಸದ್ಭಾವಾತ್ ತತ್ಸಂಬಂಧೇನ ಉಪಚಾರ್ಯತೆ । ತದೇವ ಆಹ–ಅಮರ್ತ್ಯಃ– ಅಮರಣ ಸ್ವಭಾವಃ । ಜೀವಾಪೇತಂ ವಾವ ಕಿಲೇದಂ ಮ್ರಿಯತೇ, ನಜೀವೋ ಮ್ರಿಯತೇ (ಛಾಂದೋಗ್ಯೋಪನಿಷತ್ 6–11–3) ಇತಿಶ್ರುತೇಃ। ಉಕ್ತಸ್ವಭಾವೋ ಜೀವಃ **ಸ್ವಧಾಭಿಃ ಚರತಿ**–ಪುತ್ರಕೃತ್ಯೈಃಸ್ವಧಾಕಾರಪೂರ್ವಕ ದತ್ತ್ಯೈಃಅನ್ನೈಃ, ಚರತಿ–ವರ್ತತೇ ಇತ್ಯರ್ಥಃ ॥

**ವಾಸ್ತವವಾಗಿ ಅಮರಣ ಸ್ವಭಾವದ ಜೀವ ಪುತ್ರನಿಂದ (ಸ್ವಧಾಕಾರ ಪೂರ್ವಕ) ನೀಡಲ್ಪಟ್ಟ ಶ್ರಾದ್ಧಾನ್ನದಿಂದ ತೃಪ್ತವಾಗುತ್ತದೆ.**

ಒಂದು ಮಡಕೆಯೊಳಗಿರಿಸಿದ ದೀಪದ ಪ್ರಕಾಶನ ಶಕ್ತಿ ಸೀಮಿತವಾಗಿರುತ್ತದೆ. ಆದರೆ ಮಡಕೆಯ ಹೊರಗಡೆಯಲ್ಲಿಟ್ಟರೆ ಅದೇ ದೀಪದ ಶಕ್ತಿ ಅಧಿಕವಾಗಿರುತ್ತದೆ. ಅಂತೆಯೇ ಸ್ಥೂಲ ಶರೀರದಿಂದ ಹೊಬಂದು ಪಾರಲೌಕಿಕ–ದಿವ್ಯ –ಸೂಕ್ಷ್ಮಶರೀರವನ್ನು ಪ್ರವೇಶಿಸಿದ ಜೀವಕ್ಕೆ ಸ್ಥೂಲ ಶರೀರದೊಳಗಿನ ಸ್ಥಿತಿಗಿಂದ ಹೆಚ್ಚಿನ ಶಕ್ತಿಯಿರುತ್ತದೆಂದು ಹೇಳಲಾಗುತ್ತದೆ. ಆದುದರಿಂದ ನಮಗಿಂತಲೂ ಪಿತೃಗಳು ಹೆಚ್ಚು ಶಕ್ತಿ ಸಂಪನ್ನರಾಗಿದ್ದು ನಮ್ಮನ್ನು ಅನುಗ್ರಹಿಸಲು ಸಮರ್ಥರಗಿರುತ್ತಾರೆ. ಪಾಂತಿ–ರಕ್ಷಂತಿ ಇತಿ ಪಿತರಃ–ಪಿತೃ ಶಬ್ದಕ್ಕೆ ರಕ್ಷಿಸುವವರು ಎಂದೇ ಅರ್ಥ.

ಚಂದ್ರಮಂಡಲ ಭೂಲೋಕಕ್ಕೆ ಅತ್ಯಂತ ಸಮೀಪದಲ್ಲಿದೆ. ಪಿತೃಗಳು ಚಂದ್ರಲೋಕಕ್ಕೆ ಆಕರ್ಷಿತರಾಗಿ ಅಲ್ಲಿ ನೆಲಸುತ್ತಾರೆ. ಮೃತ ತಿಥಿಗಳಲ್ಲಿ ಪಿತೃಗಳು ಅದೇ ಮಾರ್ಗದಲ್ಲಿರುವುದರಿಂದ ಪ್ರತಿವರ್ಷ ಅಂತಹ ತಿಥಿಗಳಲ್ಲಿ ಅವರು ಭೂಮಿಗೆ ಸಮೀಪವರ್ತಿಗಳಾಗಿದ್ದು ಅಂದು ಪುತ್ರಾದಿಗಳು ಅರ್ಪಿಸಿದ ಆಹಾರವನ್ನು ಸ್ವೀಕರಿಸುವ ನಿರೀಕ್ಷೆಯಲ್ಲಿರುತ್ತಾರೆ. ಮಹಾಲಯ ಅಮಾವಾಸ್ಯೆಯಂದು ಚಂದ್ರ ಬೇರೆ ಬೇರೆ ಮಾಸಗಳಿಗಿಂತಲೂ ಭೂಮಿಗೆ ಅತ್ಯಂತ ಸಮೀಪವಾಗಿರುತ್ತಾನೆ. ಅದ್ದರಿಂದ ಅಂದು ಅವನ ಆಕರ್ಷಣ ಶಕ್ತಿಯ ಪ್ರಭಾವ ಭೂಮಿ ಮತ್ತು ಅದರ ಮೇಲಿರುವ ದೇಹಧಾರಿಗಳ ಮೇಲೆ ವಿಶೇಷವಾಗಿ ಬೀಳುತ್ತದೆ. ಆ ದಿನ ಪಿತೃಗಳನ್ನುದ್ದೇಶಿಸಿ ಮಾಡುವ ಮಹಾಲಯ ಶ್ರಾದ್ಧ, ತಿಲ ತರ್ಪಣಾದಿಗಳಿಗೆ ವಿಶೇಷ ಮಹತ್ವವಿರುವುದಕ್ಕೆ ಇದೇ ಕಾರಣ.

**ಸಾವಿರಾರು ಮೈಲಿಗಳ ದೂರದ ಅಂತರಿಕ್ಷದಲ್ಲಿ ನಿರಾಧಾರವಾಗಿ ತೇಲುವ ಬಾಹ್ಯಾಕಾಶ ನೌಕೆಯನ್ನು ಯಾವುದೋ ಮೂಲೆಯ ನಿಯಂತ್ರಣ ಕೊಠಡಿಯೊಂದರಲ್ಲಿ ಕುಳಿತು ಯಂತ್ರಗಳ ಮೇಲೆ ಬೆರಳಾಡಿಸಿ ನಿಯಂತ್ರಿಸುವುದು ಮತ್ತು ಕೆಟ್ಟ ಯಂತ್ರದ ಭಾಗವನ್ನು ದುರಸ್ತಿಗೊಳಿಸುವುದು ಕೆಲವು ದಶಕಗಳ ಹಿಂದೆ ನಂಬಲಾಗದ ಆಶ್ಚರ್ಯವಾಗಿತ್ತು. ಈಗ ಅದು ಕಣ್ಣೆದುರಿನ ಸತ್ಯ. ಒಂದು ಸಣ್ಣ ಸಂಚಾರಿ ದೂರವಾಣಿ (Mobile Phone)ಯಲ್ಲಿ ಅಚ್ಚಿಸಿದ ಅಕ್ಷರಗಳು ನಿರ್ದಿಷ್ಟ ಸಂಖ್ಯೆಯ ಮತ್ತೊಂದು ಮೊಬೈಲ್‌ನಲ್ಲಿ ತತ್‌ಕ್ಷಣ ಯಥಾವ ತ್ತಾಗಿ ಮೂಡುವುದು ಒಂದು ಕಾಲದಲ್ಲಿ ಕಲ್ಪನೆಗೂ ನಿಲುಕದ ಅದ್ಭುತ. ಆದರೆ ಈಗ ಅದು ಕುತೂಹಲವಾಗಿ ಉಳಿದಿಲ್ಲ. ಹಾಗೆಯೇ ಮೃತ ವ್ಯಕ್ತಿಯ ಆತ್ಮವನ್ನು ಕುರಿತು ಆ ವ್ಯಕ್ತಿಯ ರಕ್ತ ಸಂಬಂಧೀ ಅಥವಾ ಆತನ ಆರ್ಥಿಕ ಸಂಪತ್ತನ್ನು ಅನುಭವಿಸುವ ವ್ಯಕ್ತಿ, ನಾಮ ಗೋತ್ರೋಚ್ಚಾರಣೆಯ ಮೂಲಕ ನೀಡುವ ನಿರ್ದಿಷ್ಟ ಆಹಾರದ ರಾಸಾಯನಿಕ ಸತ್ವ ರೂಪಾಂತರಗೊಂಡು ವಾಸನಾ ಬಲದಿಂದ ಆ ಆತ್ಮಕ್ಕೆ ತಲುಪುತ್ತದೆಂಬ ಮತ್ತು ಸಸ್ವರವೇದ ಮಂತ್ರೋಚ್ಚಾರಣೆಯ ಧ್ವನಿ ತರಂಗಗಳ ಮೂಲಕ ನೀಡುವ ತಿಲತರ್ಪಣಾದಿಗಳೂ ತಲುಪುತ್ತವೆಂಬ ನಂಬಿಕೆಯನ್ನು ಸುಲಭವಾಗಿ ಅಲ್ಲಗಳೆಯುವಂತಿಲ್ಲ.**



**ಕಸ್ಯ ನೂನಂ ಕತಮ ಸ್ಯಾಮೃತಾನಾಂ ಮನಾಮಹೆ ಚಾರು ದೇವಸ್ಯ ನಾಮ ।**
**ಕೋ ನೋ ಮಹ್ಯಾ ಅದಿತಯೇ ಪುನರ್ದಾತ್ ಪಿತರಂ ಚ ದೃಶೇಯಂ ಮಾತರಂ ಚ ॥**

**(ಋ. ಮಂ 1. ಸೂ.24 ಮಂತ್ರ1)**

**ಕಃ ದೇವಃ** ಯಾವ ಆನಂದ ಸ್ವರೂಪನಾದ ಭಗವಂತನು ನಃ (ಮೋಕ್ಷಾನಂದ ಪ್ರಾಪ್ತಿಯ ನಂತರವೂ) ನಮಗೆ **ಮಹ್ಯಾ ಅದಿತಯೇ ಪುನಃ ದಾತ್** ಅತ್ಯಂತ ಶ್ರೇಷ್ಠವಾದ, ಅಖಂಡವಾದ ಭೂಮಂಡಲದಲ್ಲಿ ಪುನರ್ಜನ್ಮ ನೀಡುತ್ತಾನೆಯೋ ಅದರಿಂದ ನಾವು ಪುನಃ **ಪಿತರಂ ಚ ಮಾತರಂ ಚ ದೃಶೇಯಂ** ತಂದೆ ತಾಯಿಗಳನ್ನು ನೋಡಬಹುದೋ ಅಂತಹ **ಕತಮಸ್ಯ ಅಮೃತಾನಾಂ ದೇವಸ್ಯ ಚಾರುನಾಮ ನೂನಂ ಮನಾಮಹೇ** ಉತ್ಪತ್ತಿ ವಿನಾಶರಹಿತವಾದ ಮೋಕ್ಷಾನಂದವನ್ನು ಪಡೆದ ಜೀವಾತ್ಮಕ ಹಾಗೂ ಜಗತ್ತಿನ ನಿತ್ಯ ಸ್ವರೂಪದ ಮಧ್ಯದಲ್ಲಿ ವ್ಯಾಪಿಸಿರುವ ಯಾವ ಪರಮಾತ್ಮನ ಅತಿ ಸುಂದರವಾದ ಸ್ವರೂಪವನ್ನು ನಿಶ್ಚಯವಾಗಿಯೂ ಅರಿತುಕೊಳ್ಳೋಣ.

ಮೋಕ್ಷ ಪ್ರಾಪ್ತಿಯ ನಂತರವೂ ಅವಿನಾಶಿನಿಯಾದ ಪೃಥ್ವಿಯ ಮಧ್ಯದಲ್ಲಿ ಪುನರ್ಜನ್ಮವನ್ನು ನೀಡಿ ಮಾತಾಪಿತರರನ್ನು ನೋಡುವಂತೆ ಮಾಡುವಂತಹ ಪ್ರಕೃತಿ ಜೀವಾತ್ಮ ಪರಮಾತ್ಮ ಮಧ್ಯದಲ್ಲಿ ಏಕಮೇವಾದ್ವಿತೀಯನಾದ ಅನಂತಾನಂದ ಸ್ವರೂಪನಾದ ಯಾವ ದೇವರನ್ನು ಅರಿತುಕೊಳ್ಳಬೇಕು. ಎಂಬ ಪ್ರಶ್ನೆಯಲ್ಲಿ **ಮೋಕ್ಷಾನಂತರವೂ ಪುನರ್ಜನ್ಮವಿದೆಯೆಂಬುದು ಈ ಮಂತ್ರದಿಂದ ಸ್ಪಷ್ಟವಾಗುತ್ತದೆ.** ಮುಂದಿನ ಮಂತ್ರದಲ್ಲಿ ಇದಕ್ಕೆ ಉತ್ತರವಿದೆ.

**ವಯಂ ಅಗ್ನೇಃ । ಅಮೃತಾನಾಂ ಪ್ರಥಮಸ್ಯ । ದೇವಸ್ಯ । ಚಾರು ನಾಮ ಮನಾಮಹೆ । ಸಃ । ನಃ । ಮಹ್ಯೈ ಅದಿತಯೇ ಪುನಃದಾತ್ । ಪಿತರಂ ಚ ಮಾತರಂ ಚ ದೃಶೇಯಂ ।**

"ನಾವೆಲ್ಲರೂ ಜ್ಞಾನ ಸ್ವರೂಪಿಯೂ ಸರ್ವಜ್ಞನೂ ಆದ, ಅವಿನಾಶಿಯಾದ ಹಾಗೂ ಮೋಕ್ಷಪ್ರಾಪ್ತ ಜೀವಾತ್ಮರ ಮಧ್ಯದಲ್ಲಿ ಸರ್ವ ಪ್ರಥಮನೂ ಆದ್ವಿತೀಯನೂ ಆದ, ಚರಾಚರ ಜಗತ್ತನ್ನು ಬೆಳಗುವ ಭಗವಂತನ, ಸುಂದರವಾದ ಗುಣಗಳನ್ನು ಅರಿತುಕೊಳ್ಳೋಣ, ಅವನೇ ನಮಗೆ **ಮಹಿಮಾನ್ವಿತ ಭೂಮಿಯಲ್ಲಿ ಪುನರ್ಜನ್ಮ ನೀಡುತ್ತಾನೆ.** ಇದರಿಂದಾಗಿ ನಾವು ಪುನಃ ತಂದೆ ತಾಯಿಯನ್ನು ನೋಡುತ್ತೇವೆ."

ನಾವೆಲ್ಲರೂ ಅನಾದ್ಯಂತನಾದ, ಎಲ್ಲರ ಪಾಪ ಪುಣ್ಯಾನುಗುಣ ಫಲಕ್ಕನುಸಾರವಾಗಿ ಪುನರ್ಜನ್ಮ ನೀಡುವ ಭಗವಂತನ ಸ್ವರೂಪವನ್ನರಿತು ಉಪಾಸನೆ ಮಾಡಬೇಕು. ಅವನ ಸಂಕಲ್ಪದಂತೆ ಪುನರ್ಜನ್ಮ ಲಭಿಸುವ ತಂದೆ ತಾಯಿಗಳನ್ನು ಬಂಧು ಬಾಂಧವರನ್ನು ನೋಡಬಹುದು. **ಸಕಲ ಜೀವಿಯೂ ಪುನರ್ಜನ್ಮಕ್ಕೆ ಅರ್ಹರಾಗುತ್ತಾರೆಂದು ಈ ಮುಂದಿನ ಮಂತ್ರಗಳ ಭಾವಾರ್ಥದಿಂದ ಸ್ಪಷ್ಟವಾಗುತ್ತದೆ.**

**ಪುನಸ್ತ್ವಾದಿತ್ಯಾ ರುದ್ರಾ ವಸವಃ ಪುನರ್ಬ್ರಹ್ಮಾ ವಸು ನೀತಿರಗ್ನೇ ।**
**ಪುನಸ್ತ್ವಾಬ್ರಹ್ಮಣ ಸ್ಪತಿರಾ ಧಾತ್ ಧಿರ್ಘಾಯುತ್ವಾಯ ಶತಶಾರದಾಯ ॥**

(ಅಥರ್ವವೇದ ಕಾಂಡ 12, ಸೂಕ್ತ 2 ಮಂತ್ರ 6)

**ಯತ್ವಾಕ್ರುದ್ಧಾಃ ಪ್ರಚಕ್ರುರ್ಮನ್ಯುನಾ ಪುರುಷೇಮೃತೇ । ಸಂಕಲ್ಪ ಮಗ್ನೆ ತತ್ ತ್ವಯಾ ಪುನಸ್ತ್ವೋದ್ದೀಪಯಾಮಸಿ ॥** ಎಲೈ ಅಗ್ನಿಯೇ ಪುರುಷನು ಮೃತನಾದಾಗ ದುಃಖ ಹಾಗೂ ಕ್ರೋಧಾವೇಶದಲ್ಲಿ ನಿನ್ನನ್ನು ತೆಗಳಿದರೂ ಅದನ್ನು ಪರಿಗಣಿಸದೆ ಮೃತ ದೇಹವನ್ನು ದಹಿಸುವ ನಿನ್ನ ಕಾರ್ಯವನ್ನು ನಿರ್ವಹಿಸುತ್ತಿ. ಆಗ ನಾವು ನಿನ್ನನ್ನು ಉದ್ದೀಪನಗೊಳಿಸು ತ್ತೇವೆ ಎಂಬ (ಹಿಂದಿನ 5ನೇ) ಮಂತ್ರದ ಭಾವಾರ್ಥದೊಂದಿಗೆ ಈ 6 ನೇ ಮಂತ್ರದ ಅರ್ಥವನ್ನು ಹೊಂದಿಸಬೇಕು.

**ಅಗ್ನೇ** – ಎಲೈ ಅಗ್ನಿಯೇ, **ಅದಿತ್ಯಾ ರುದ್ರಾ ವಸವಃ** – ಅದಿತ್ಯರು, ರುದ್ರರು, ವಸುಗಳು, **ವಸುನೀತಿ :** –ಧನಪತಿಯು, **ಪುನಃ**–ಮತ್ತು **ಬ್ರಹ್ಮಾ**–ವೇದ ಪುರುಷ, ಬ್ರಹ್ಮಣ ಸ್ಪೃತಿಯು, **ಶತಶಾರದಾಯ ಧೀರ್ಘಾಯುತ್ವಾಯ ತ್ವಾ ಪುನಃ ಆಧಾತ್**–ನೂರು ವರ್ಷಗಳ ದೀರ್ಘಾಯುಷ್ಯಕ್ಕಾಗಿ ನಿನ್ನನ್ನು ಪುನಃ ಸ್ಥಾಪಿಸುತ್ತಾರೆ. (ವಸುರುದ್ರಾದಿತ್ಯ ಬ್ರಹ್ಮಣಸ್ಪತಿಗಳು ನಿನ್ನನ್ನು ಉದ್ದೀಪಿಸಿ ಮೃತ ಶರೀರದಿಂದ ಹೊರಟ ಜೀವನು ಪುನಃ ಶರೀರ ಧಾರಣೆ ಮಾಡಿ ಧೀರ್ಘಾಯುಷಿಯಾಗಿ ಬಾಳುವಂತೆ ವಿಶ್ವಾಸದಿಂದ ಹರಸುತ್ತಾರೆ).

**ಪೂರ್ವಾಪರಂ ಚರತೋ ಮಾಯಯೈ ಶಿಶೂ ಕ್ರಿಡಂ ತೌ ಪರಿಯಾ ತೋಽರ್ಣವಮ್ ।**
**ವಿಶ್ವಾನ್ಯೋ ಭುವನಾವಿಚಷ್ಟ ಋತುಂ ರನ್ಯೋ ವಿದ ಧ ಜ್ಜಾಯ ಸೇ ನವಃ ।**
(ಅಥರ್ವವೇದ ಕಾಂಡ 14, ಸೂಕ್ತ1 ಮಂತ್ರ 23 )

ತಮ್ಮ ಅದ್ಭುತ ಸಾಮರ್ಥ್ಯದಿಂದ ಸಮುದ್ರಗಳನ್ನೆಲ್ಲ ಸುತ್ತು ಬಳಸಿಕೊಂಡು ಮುಂದೆ ಸಾಗುವ ಈ ಶಿಶುಗಳಿಬ್ಬರೂ ಪೂರ್ವದಿಂದ ಪಶ್ಚಿಮಕ್ಕೆ ಸಂಚರಿಸುತ್ತಾರೆ. ಅವರಲ್ಲೊಬ್ಬ ಜಗತ್ತೆಲ್ಲವನ್ನೂ ನೋಡುತ್ತಾ ಸಮಸ್ತ ಭುವನಗಳನ್ನು ಬೆಳಗುತ್ತಾನೆ. ಇನ್ನೊಬ್ಬನು ಋತುಗಳನ್ನನುಸರಿಸುತ್ತಾ ಹೊಸಹೊಸದಾಗಿ ಹುಟ್ಟಿ ಆಕಾರ ಪಡೆಯುತ್ತಾನೆ. ಉಕ್ತವಾದ ಶಿಶುಗಳು ಆನಾದಿಯಾದ ಪರಮಾತ್ಮ ಮತ್ತು ಜೀವಾತ್ಮರು. ಜೀವಾತ್ಮನು ಪುನಃ ಪುನಃ ಜನಿಸುತ್ತಾನೆಂದು ಸ್ಪಷ್ಟವಾಗಿ ಸಾರುವುದೇ ಈ ಮಂತ್ರದ ಆಧ್ಯಾತ್ಮಿಕ ಸ್ವಾರಸ್ಯ.

**ಯೇ ನಃ ಪಿತರೋ ಯೇ ಪಿತಾಮಹಾ ಯ ಆ ವಿವಿಶು ರುರ್ವಂತರಿಕ್ಷಮ್ ।**
**ತೇಭ್ಯಃ ಸ್ವರಾಡಸು ನೀತಿರ್ನೋ ಅದ್ಯ ಯಥಾ ವಶಂ ತನ್ವಃ ಕಲ್ಪಯಾತಿ॥**
(ಅಥರ್ವವೇದ ಕಾಂಡ 18, ಸೂಕ್ತ 3 ಮಂತ್ರ 59)

ಯಾರು ನಮ್ಮ ತಂದೆ ತಾತ ಮೊದಲಾದವರಿದ್ದಾರೆಯೋ, ಯಾರು ಸದ್ಗತಿಯನ್ನು ಪಡೆದಿದ್ದಾರೆಯೋ, ಯಾರು ಪ್ರಾಣ ಚೈತನ್ಯವನ್ನು ಮುನ್ನಡೆಸುವವರಿದ್ದಾರೆಯೋ ಅಂತಹ ವರ **ಕರ್ಮಫಲಾನುಸಾರವಾಗಿ** ಸ್ವಯಂಪ್ರಕಾಶನಾದ ಪರಮಾತ್ಮನು ಶರೀರ ಗಳನ್ನು ರೂಪಿಸುತ್ತಾನೆ. ಅಂದರೆ **ಪುನರ್ಜನ್ಮ ನೀಡುತ್ತಾನೆ.**

**ಶಯನಂ ಚಾನು ಶೇತೇ ಹಿ ತಿಷ್ಠಂತಂ ಚಾನುತಿಷ್ಠತಿ ।**
**ಅನುಧಾವತಿ ಧಾವಂತಂ ಕರ್ಮಪೂರ್ವಕೃತಂ ನರಮ್ ॥** (ಮಹಾಭಾರತ)

ಮನುಷ್ಯ ಮಾಡಿದ ಪಾಪ ಪುಣ್ಯ ರೂಪವಾದ ಕರ್ಮದ ಫಲವನ್ನು ಅನುಭವಿಸಿ ಕ್ಷಯವಾಗುವ ತನಕ ಅವನು ಮಲಗಿದಾಗಲೂ, ನಿಂತಾಗಲೂ, ಓಡುವಾಗಲೂ



ಅತನನ್ನು ಬಿಡದೆ ಜನ್ಮಾಂತರಗಳಲ್ಲೂ, ಅನುಸರಿಸುತ್ತಲೇ ಇರುತ್ತದೆ. ಅದುದರಿಂದ ಕರ್ಮಫಲ ಭೋಗಕ್ಕಾಗಿ ಜನ್ಮಾಂತರಗಳು ಆನಿವಾರ್ಯ.

ವಾಲ್ಮೀಕಿ ರಾಮಾಯಣದಲ್ಲಿ ಮರಣಾನಂತರ ದಿವ್ಯ ರೂಪಧಾರಣೆಯ ಕಲ್ಪನೆ : ದನು ಪುತ್ರನಾದ ಕಂಬಂಧನ ಶರೀರಕ್ಕೆ ರಾಮಲಕ್ಷ್ಮಣರು ಅಗ್ನಿಸಂಸ್ಕಾರ ಮಾಡಿದ ನಂತರ ಅಗ್ನಿಯು ಅತನ ಶರೀರವನ್ನು ಸುಡತೊಡಗಿತು. ಕಬಂಧನ ಶರೀರ ಸಂಪೂರ್ಣ ಭಸ್ಮವಾದ ನಂತರ ಮಹಾಬಲನಾದ ಕಬಂಧನು ದಿವ್ಯ ರೂಪವನ್ನು ಧರಿಸಿ ಚಿತೆಯನ್ನು ಪಕ್ಕಕ್ಕೆ ಸರಿಸಿ ಧೂಮರಹಿತನಾದ ಅಗ್ನಿಯಂತೆ ಮೇಲೆದ್ದು ಬಂದನು. ಅವನು ಶುಭ್ರವಾದ ವಸ್ತ್ರವನ್ನೂ, ದಿವ್ಯಾಭರಣಗಳನ್ನೂ ಧರಿಸಿದ್ದನು ಆ ಸಮಯದಲ್ಲಿ ಕಾಂತಿಯುಕ್ತನಾಗಿದ್ದನು

**ಅಹತ ವಸ್ತ್ರ–**

**ಅಹತ ವಸ್ತ್ರ**–ದೇವ ಪಿತೃಕಾರ್ಯಗಳಲ್ಲಿ ಅಹತ ವಸ್ತ್ರ ಮತ್ತು ದರ್ಭೆಗೆ ಬಹಳ ಮಹತ್ವ ವಿರುವುದರಿಂದ ಇವೆರಡರ ಬಗ್ಗೆ ಸಾಂದರ್ಭಿಕವಾಗಿ ಪ್ರಸ್ತಾಪಿಸಲಾಗಿದೆ

**ಈಷದ್ಧೌತಂ ನವಂ ಶ್ವೇತಂ ಸದಶಂ ಯನ್ನಧಾರಿತಮ್ ।**
**ಅ ಹತಂ ತದ್ವಿಜಾನೀಯಾತ್ ದೈವ್ಯೇ ಪಿತ್ರೇ ಚ ಕರ್ಮಣಿ ॥**

ಸ್ವಲ್ಪ ಒಗೆದಿರುವ ಹೊಸದಾದ ಅಂಚುಗಳುಳ್ಳ, ಬೇರೆಯವರಿಂದ ಧರಿಸಲ್ಪಡದ ಬಿಳಿಯ ವಸ್ತವು 'ಅಹತ ವಸ್ತ್ರ'ವೆನಿಸಿಕೊಳ್ಳುತ್ತದೆ. ಇದು ದೇವ–ಪಿತೃ ಕರ್ಮಗಳಲ್ಲಿ ಪ್ರಶಸ್ತ. ಆದರೆ ಪ್ರೇತ–ಪಿತೃಕಾರ್ಯಗಳಲ್ಲಿ ಮಾತ್ರ ಹೆಚ್ಚಾಗಿ ಬಳಸುವುದು ರೂಢಿಯಲ್ಲಿದೆ. ಆದರೆ ಕೆಲವರು ದೇವಕಾರ್ಯದಲ್ಲೂ, ಪಿತೃಕಾರ್ಯದಲ್ಲೂ ಒದ್ದೆ ಬಟ್ಟೆಯುಡುವುದಿಲ್ಲ. ಅನಿವಾರ್ಯತೆಯಲ್ಲಿ **'ಸಪ್ತವಾತ ಹತಾಃಶುದ್ಧಾಃ'** ಎಂಬ ಅಯೋರ್ಕ್ತಿಯಂತೆ ಏಳುಬಾರಿ ಕೊಡವಿ ಧರಿಸುತ್ತಾರೆ.

**ಶ್ರೌತ್ರ–ಸ್ಮಾರ್ತ ಕರ್ಮಗಳಲ್ಲಿ ದರ್ಭೆಗೆ ವಿಶೇಷ ಮಹತ್ವವಿದೆ. ಅಥರ್ವವೇದದ ಹತ್ತೊಂಬತ್ತನೇ ಕಾಂಡದ ಮೂವತ್ತ ಮೂರನೆ ಸೂಕ್ತದ ಮಂತ್ರ–ಭೃಗು ಋಷಿ । ಜಗತಿ ಛಂಧಃ। ದರ್ಭಃ ದೇವತಾ॥ ಸಹಸ್ರಾರ್ಘಃ, ಶತಕಾಂಡಃ ಪಯಸ್ವಾನಪಾಮಗ್ನಿರ್ವೀರುಧಾಂ ರಾಜಸೂಯಮ್। ಸನೋ–ಯಂ ದರ್ಭಃ ಪರಿಪಾತು ವಿಶ್ವತೋ ದೇವೋ ಮಣಿರಾಯುಷಾ ಸಂ ಸೃಜಾತಿ ॥**

**ಸಃ–ಅಯಂ ದರ್ಭಃ** – ಈ ಅವಿದ್ಯಾಕಾರಕ (ಜ್ಞಾನರೂಪಿ) ದೇವತಾ ಸ್ವರೂಪವಾದ ದರ್ಭೆಯು; **ಸಹಸ್ರಾರ್ಘಃ**–ಸಾವಿರಾರು ಜನರಿಂದ ಪೂಜನೀಯವಾದ ಅಮೂಲ್ಯ ರತ್ನದಂತೆ; ಶತಕಾಂಡಃ–ನೂರಾರು ಜನರಿಂದ ಬಯಸಲ್ಪಡುವುದು. **ಪಯಸ್ವಾನ್**–ಆನಂದರಸಭರಿತವಾದುದು; **ಅಪಾಮಗ್ನಿಃ**–ಜಲಸಂಬಂಧಿ ವಿದ್ಯುದಗ್ನಿಯಂತೆ ಜಾಜ್ವಲ್ಯಮಾನವಾದುದು; **ವೀರುಧಾಂ ರಾಜಸೂಯಂ**–ರೋಗ ನಿರೋಧಕ ಔಷಧಗಳ ರಾಜ; ನಃ ಆಯುಷಾ ಸಂ ಸೃಜಾತಿ ವಿಶ್ವತಃ ಪರಿಪಾತು – ನಮಗೆ ಧೀರ್ಘಾಯುಸ್ಸನ್ನು ನೀಡಿ ಎಲ್ಲೆಡೆಗಳಿಂದಲೂ ಪರಿಪಾಲಿಸಲಿ.

ಮುಂದಿನ ಮಂತ್ರದಲ್ಲೂ ಧರ್ಭ ಆರೋಹ ಎಂಬುದಕ್ಕೆ ಹೇ ರಾಗದ್ವೇಷಕವಿದಾರಕ ಪರಮಾತ್ಮ! ನೀನು ನನ್ನಲ್ಲಿ ಪ್ರಾದುರ್ಭೂತನಾಗು ಎಂದು ವ್ಯಾಖ್ಯಾನಿಸಲಾಗಿದೆ (ಅಥರ್ವವೇದ ಭಾಷ್ಯ). ಅಂದರೆ ದರ್ಭೆಯನ್ನು ದೇವರು ಎಂದು ಸ್ಪಷ್ಟವಾಗಿ ಹೇಳಿದಂತಾಯಿತು.

**ಯಥಾವಜ್ರಂ ಹರೇಃ ಪಾಣೌ ತಥಾ ವಿಪ್ರಕರೇ ಕುಶಾಃ ॥**

ಲಂಕೆಯಲ್ಲಿ ಹನುಮಂತ ನೊಡಿದ ಕೆಲವು ವ್ರತಿಗಳು ಕೈಯಲ್ಲಿ ಆಯುಧಗಳ ರೂಪದಲ್ಲಿ ದರ್ಭೆಗಳನ್ನು ಮುಷ್ಟಿಯಲ್ಲಿ ಹಿಡಿದಿದ್ದರು. ಅಂದರೆ ಮಂತ್ರಜ್ಞರಾದ ಬ್ರಾಹ್ಮಣನ ಕೈಯಲ್ಲಿರುವ ದರ್ಭೆಯು ವಜ್ರಾಯುಧಕ್ಕೆ ಸಮಾನ (ಶ್ರೀರಾಮಚಂದ್ರ ಹುಲ್ಲನ್ನು ಅಭಿಮಂತ್ರಿಸಿ ಅಸ್ತ್ರದಂತೆ ಪ್ರಯೋಗಿಸಿದ ವೃತ್ತಾಂತವನ್ನೂ ಇಲ್ಲಿ ನೆನಪಿಸಿಕೊಳ್ಳಬಹುದು) ವಿನತೆಯ ದಾಸ್ಯಮುಕ್ತಿಗಾಗಿ ಗರುಡ ಅಮೃತ ಕಲಶವನ್ನು ತಂದು ದರ್ಭೆಯ ರಾಶಿಯ ಮೇಲಿಟ್ಟ. ಕದ್ರುವಿನ ಮಕ್ಕಳಾದ ಸರ್ಪಗಳು ಅಮೃತಪಾನಕ್ಕಾಗಿ ಶುಚಿರ್ಭೂತರಾಗಿ ಬರಲು ಹೊರಟು ಹೋದವು. ಸ್ನಾನ ಮಾಡಿ ಮಂಗಲಾಚರಣೆ ಮುಗಿಸಿ ಬರುವಷ್ಟರಲ್ಲಿ ಇಂದ್ರ ಅಮೃತವನ್ನು ಅಪಹರಿಸಿದ್ದ. ಅಮೃತ ಸ್ಪರ್ಶದಿಂದಾಗಿ ದರ್ಭೆಗೆ ಅಮೃತತ್ವ ಪಾಪ್ತಿಯಾಗಿದೆ ಯೆಂದೇ ಭಾವಿಸಿ ಸರ್ಪಗಳು ದರ್ಭೆಯನ್ನು ನೆಕ್ಕಿ ನಾಲಿಗೆಯನ್ನು ಸೀಳಾಗಿಸಿಕೊಂಡವು.

**ಅಭವಂಶ್ಚಾಮೃತ ಸ್ಪರ್ಶಾತ್ ದರ್ಭಾಸ್ತೇ–ಥಪವಿತ್ರಿಣಃ ॥**

(ಮಹಾಭಾರತ ಆದಿಪರ್ವ)

ಹೀಗೆ ಅತ್ಯಲ್ಪಕಾಲದ ಅಮೃತ ಸಂಪರ್ಕದಿಂದಲೇ ದರ್ಭೆಗಳು ನಿತ್ಯ ಪವಿತ್ರವೆನಿಸಿ "ಪವಿತ್ರೀ" ಎಂಬ ಅನ್ವರ್ಥನಾಮವನ್ನು ಪಡೆದವು. ಆಸನಗಳಲ್ಲಿ ದರ್ಭಾಸನ ಶ್ರೇಷ್ಠ "ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕು. ದರ್ಭೇಷ್ವಾ ಸೀನೋದರ್ಭಾನ್ ಧಾರಯ ಮಾಣಃ" ಕರ್ಮಾರಂಭದಲ್ಲಿ ದರ್ಭಪವಿತ್ರ ಪಾಣಿಯಾಗಿ ಸಸ್ವರ ಮಂತ್ರೋಚ್ಚಾರಣೆ ಮತ್ತು ಪ್ರಾಣಾಯಾಮಾದಿ ಯೋಗಾನುಷ್ಠಾನದಿಂದ ಶರೀರದಲ್ಲಿ ಉಂಟಾಗುವ ಸೂಕ್ಷ್ಮ ವಿದ್ಯುತ್ತರಂಗ ರೂಪದ ಶಕ್ತಿ ನೆಲಕ್ಕೆ ತಾಕಿ ಅಪವ್ಯಯವಾಗದಂತೆ ವಿದ್ಯುದವಾಹಕವಾಗಿಯೂ ದರ್ಭೆಗೆ ವೈಜ್ಞಾನಿಕ ಮಹತ್ವವಿದೆ.

ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ದಕ್ಷಿಣ ಮಧ್ಯ ಏಷ್ಯಾದಲ್ಲಿ ಅಲ್‌ಬಿರುನಿ ಎಂಬ ಅರೆಬಿಕ್ ಜ್ಯೋತಿಷ ವಿದ್ವಾಂಸನಿದ್ದ. ಶಾಲೆಗೆ ಹೋಗದ ರೈನಾ ಎಂಬ ಮುಸ್ಲಿಂ ಹುಡುಗಿಗೋಸ್ಕರ ನಕ್ಷತ್ರಗಳ ಅಧ್ಯಯನಕ್ಕಾಗಿ ಖಗೋಳಶಾಸ್ತದ ಅಪೂರ್ವ ಕೃತಿಯೊಂದನ್ನು ರಚಿಸಿದ್ದ. ಈ ಆಲ್‌ಬಿರೂನಿ ಭಾರತೀಯ ತತ್ವಶಾಸ್ತ್ರಗಳ ರಹಸ್ಯವೂ ಗ್ರೀಕ್ ಮತ್ತು ಸೂಫಿ ಸಿದ್ಧಾಂತಗಳ ರಹಸ್ಯಾರ್ಥವೂ ಒಂದೇ ಎಂಬುದನ್ನು ಆಳವಾದ ಅಧ್ಯಯನದಿಂದ ನಿರೂಪಿಸಿದ್ದಾನೆ. ಪುನರ್ಜನ್ಮದ ಬಗ್ಗೆ ಈತನ ಅನಿಸಿಕೆ ಕುತೂಹಲಕಾರಿಯಾಗಿದೆ. ಜಾಗೃತಿಯ ಅತ್ಯುನ್ನತ ಸ್ಥಿತಿಯನ್ನು ತಲುಪುವ ತನಕ ಆತ್ಮ ತತ್‌ಕ್ಷಣದಲ್ಲಿ (at once) ಎಲ್ಲವನ್ನೂ ಅನುಭವಿಸಲು (ಸಹಿಸಲು) ಸಮರ್ಥವಾಗುವುದಿಲ್ಲ. ಆದ್ದರಿಂದ ಪೂರ್ಣ



ಅನುಭವ ಪಡೆಯುವವರೆಗೆ ಅಂಶಿಕ (piecemeal) ವಾಗಿ (ಸ್ವಲ್ಪ ಸ್ವಲ್ಪವಾಗಿ) ಜಗತ್ತಿನ ಒಂದೊಂದೇ ತುಣುಕನ್ನು ಅನುಭವಿಸುತ್ತಾ ಹೋಗಬೇಕಾಗುತ್ತದೆ. ಗಣನೀಯ ಪ್ರಮಾಣದಲ್ಲಿ ಅನುಭವಿಸಬೇಕಾದಾಗ ಅನುಭವದ ಪ್ರಕ್ರಿಯೆ ನಿಧಾನವಾಗಿ ಬಹುಕಾಲ ತಗಲುತ್ತದೆ. ಆದ್ದರಿಂದ ದೈವಿಕ ಶರೀರದ (immortal body) ಆತ್ಮಗಳು ಅವರವರ ಜನ್ಮಾಂತರದ ಒಳಿತು ಕೆಡುಕಿನ ಆಚರಣೆಗೆ ತಕ್ಕ ಫಲವನ್ನು ಅನುಭವಿಸುತ್ತಾ (mortal body) ಮೃತಶರೀರದಲ್ಲಿದ್ದು ಅಲೆದಾಡುತ್ತಿರುತ್ತವೆ.

ನಿಜವಾಗಿಯೂ ಒಳಿತು ಯಾವುದು ಎಂಬುದನ್ನರಿತು ಸಾಧ್ಯವಾದಷ್ಟು ಅಂತಹ ಒಳಿತನ್ನು ಸಾಧಿಸುವುದೇ ಪುನರ್ಜನ್ಮದಲ್ಲಿ ದಿವ್ಯಸ್ಥಿತಿಯನ್ನು ಅನುಭವಿಸುವುದರ ಉದ್ದೇಶವಾಗಿದೆ. ಕೆಟ್ಟದ್ದನನ್ನು ಅರಿತು ಅದರಿಂದ ಸಂಪೂರ್ಣ ದೂರವಿರಲಿಕ್ಕಾಗಿ ಬದುಕಿನಲ್ಲಿ ಬದುಕಿನ ನರಕಯಾತನೆಯನ್ನು ಅನುಭವಿಸಬೇಕಾಗುತ್ತದೆ. ಪುನರ್ಜನ್ಮದ ಪ್ರಕ್ರಿಯೆ ಅತ್ಯಂತ ಕೆಳಮಟ್ಟದ ಸಸ್ಯ, ತಿರ್ಯಗ್ಜಂತುಗಳಿಂದ ಪ್ರಾರಂಭವಾಗಿ ಕ್ರಮೇಣ ಮೇಲ್ಮಟ್ಟದ ಪ್ರಜ್ಞಾವಂತ ಹಂತಕ್ಕೆ ಏರುತ್ತದೆ. ಜೀವವು ಹೊಸ ಲೋಕವನ್ನು ಹುಡುಕುವ ಅಪೇಕ್ಷೆಯನ್ನು ಅಥವಾ ಪ್ರಯತ್ನವನ್ನು ಬಿಟ್ಟಾಗ ಪುನರ್ಜನ್ಮದ ಪ್ರಕ್ರಿಯೆ ನಿಲ್ಲುತ್ತದೆ. ಹಾಗೆಯೇ ತನ್ನ ಸ್ವಂತ ಅಸ್ತಿತ್ವದ ಉದಾತ್ತ ಸ್ವಭಾವದ ಒಳನೋಟದ ಅರಿವನ್ನು ಪಡೆದು ತನ್ನಷ್ಟಕ್ಕೆ ತಾನು ತೃಪ್ತಿಗೊಂಡು ವಿರಮಿಸುತ್ತದೆ. ಈ ಹಂತದಲ್ಲಿ ಜೀವ ಭೌತಿಕ ಸ್ವರೂಪದಿಂದ ದೂರ ಉಳಿಯುತ್ತದೆ ಮತ್ತು ಭೌತಿಕ ಶರೀರದೊಂದಿಗಿನ ಅದರ ಕೊಂಡಿ ಕಳಚುತ್ತದೆ. ತನ್ನ ಅನೇಕ ಯಾತ್ರೆಯಲ್ಲಿ ಗಳಿಸಿದ ಅರಿವಿನೊಂದಿಗೆ ತನ್ನ ಮೂಲ ಸ್ಥಾನಕ್ಕೆ ಮರಳುತ್ತದೆ (ಮೋಕ್ಷ ಹೊಂದುತ್ತದೆ?)

**ಕ್ರೀಶ್ಚಿಯನ್ ಧರ್ಮಗ್ರಂಥ :** Mathew 11 : 2-15, 17 : 10-13 ಮತ್ತು Mark 9 : 9-13 ರಲ್ಲಿ ಉಲ್ಲೇಖಿಸಿರುವಂತೆ ಜಾನ್ ಎಂಬ ಪ್ರವಾದಿ ಹಿಂದಿನ ಜನ್ಮದಲ್ಲಿ ಪ್ರವಾದಿ ಇಲಿಜಾ ಆಗಿದ್ದುದಾಗಿ ಹೇಳಲಾಗಿದೆ. ಆಗಿನ ಪ್ರಸಿದ್ಧ ಚರ್ಚುಗಳು ಫಾದರುಗಳೂ ಸೇರಿದಂತೆ ಅಸಂಖ್ಯಾತರಾದ ಮೂಲ ಕ್ರಿಶ್ಚಿಯನರೂ ಪುನರ್ಜನ್ಮ ಸ್ವಾಭಾವಿಕವೆಂದು ಒಪ್ಪಿದ್ದರು. ಆದರೆ ಕಾನ್ಸ್ಟಂಟಿನೋಪಲ್‌ನಲ್ಲಿ 533ರಲ್ಲಿ ನಡೆದ ಕ್ರಿಶ್ಚಿಯನ್ ಮಹಾಸಭೆಯಲ್ಲಿ ವಿದ್ಯುಕ್ತವಾಗಿ ಈ ಪುನರ್ಜನ್ಮ ಸಿದ್ಧಾಂತವನ್ನು ನಿಷೇಧಿಸಲಾಯಿತು. ಹೀಗೆ ಪುನರ್ಜನ್ಮದ ಬಗೆಗಿನ ಅವರ ನಂಬಿಕೆ ಪೂರ್ಣ ಮಾಯವಾಯಿತು. ಆದರೆ ಹಿಂದುಗಳಲ್ಲಿ ನಂಬಿಕೆಯ ಬೇರು ದೃಢವಾಗಿದೆ. ಇದಕ್ಕೆ ಕಾರಣ ನಮ್ಮ ಪ್ರಾಚೀನ ಪರಂಪರೆ. ಹಿಂದೆ ಚಿನ್ನ–ಬೆಳ್ಳಿ – ಆಭರಣ ಮೊದಲಾದ ಹೇರಳ ಸಂಪತ್ತನ್ನು ಮುಂದಿನ ತಲೆಮಾರಿಗೆ ಅಪದ್ಧನವೆಂದು ರಹಸ್ಯವಾಗಿ ನೆಲದಲ್ಲಿ ಹುಗಿದಿಡುತ್ತಿದ್ದರು (ಈಗ ನೂತನ ಗೃಹಪ್ರವೇಶದಲ್ಲಿ ಸಾಂಕೇತಿಕವಾಗಿ ನೆಲದಡಿಯಲ್ಲಿ ನಿಧಿಯ ರೂಪದಲ್ಲಿ ಪಂಚರತ್ನಗಳನ್ನಿರಿಸುವ ರೂಢಿಯಿದೆ) ಮುಂದಿನ ಪೀಳಿಗೆಯವರಿಗೆ ಅಂತಹ ನಿಧಿಯ ಬಗ್ಗೆ ಸಾಮಾನ್ಯರು ಹೇಳಿದರೆ ನಂಬಿಕೆ ಬರುತ್ತಿರಲಿಲ್ಲ. ಸಮರ್ಥನಾದ ಗುರು ಮಾರ್ಗದರ್ಶಿ ಆ ನಿರ್ದಿಷ್ಟ ಜಾಗವನ್ನು ಅಗೆದು ನಿಧಿಯನ್ನು ತೋರಿಸಿದರೆ ಮಾತ್ರ ನಂಬಿಕೆ ಬರುತ್ತಿತ್ತು. ಹಾಗೆಯೇ ಮಂತ್ರದ್ರಷ್ಟಾರರಾದ

ಪ್ರಾಚೀನ ಮಹರ್ಷಿಗಳು, ವೇದವ್ಯಾಸರಂತಹ ಮಹಾಮಹಿಮರು, ಆದಿ ಶಂಕರರಂತಹ ಅವತಾರ ಪುರುಷರು ಮಾನವನ ಬದುಕಿನ ರಹಸ್ಯವನ್ನು ಕೆದಕಿ ವೇದ–ಉಪನಿಷತ್ತು–ಶಾಸ್ತ್ರ–ಪುರಾಣ–ಮಹಾಭಾಷ್ಯಾದಿ ಅಪೂರ್ವ ಗ್ರಂಥರಾಶಿಗಳ ದೃಷ್ಟಾಂತಗಳ ಮೂಲಕ ನಂಬಿಕೆಯೆಂಬ ಜ್ಞಾನದ ನಿಧಿಯನ್ನು ತೋರಿಸಿದ್ದಾರೆ. ಅದನ್ನು ಭಾರತೀಯರಾದ ನಾವೆಲ್ಲರೂ ಗುರುವಾಕ್ಯವೆಂದು ಅನುಲ್ಲಂಘ್ಯ ಶಾಸನವೆಂದು ನಂಬಿ ಆಚರಿಸುತ್ತೇವೆ.

ಮಳೆಯ ನೀರು ಕೆರೆಯಲ್ಲಿ ಸಂಗ್ರಹವಾದಾಗ ಅದು 'ಕೆರೆಯ ನೀರು; ಪ್ರವಾಹವಾಗಿ ಅದು ನದಿಯಲ್ಲಿ ಹರಿಯುವಾಗ ಅದು 'ನದೀ ನೀರು', ಸಮುದ್ರಕ್ಕೆ ಸೇರಿದ ಮೇಲೆ ಅದು ಸಮುದ್ರದಲ್ಲೇ ಲೀನವಾಗುತ್ತದೆ. ಪುನಃ ಆವಿಯಾದಾಗ ಅದು 'ಮೋಡ'. ಅದೇ ಸುರಿಸಿದ ನೀರು ನದೀ ನೀರು, ಮತ್ತೆ ಸಮುದ್ರದಲ್ಲಿ ಲೀನ. ಅಂದರೆ ಕೆರೆ ನೀರು, ನದೀ ನೀರು, ಮೋಡ ಎಂದು ಮುಂತಾಗಿ ಪ್ರತ್ಯೇಕ ಸ್ಥಿತಿಯಲ್ಲಿ ಪ್ರತ್ಯೇಕ ಅಸ್ತಿತ್ವ. ಸಮುದ್ರದಲ್ಲಿ ಲೀನವಾದ ಮೇಲೆ ಪ್ರತ್ಯೇಕತೆ ಗೋಚರವಾಗುವುದಿಲ್ಲ. ಜೀವಾತ್ಮವೂ ಹಾಗೆಯೇ. ಪ್ರತ್ಯೇಕ ಪರಿಸ್ಥಿತಿಯಲ್ಲಿ ಪ್ರತ್ಯೇಕವಾಗಿದ್ದು ಬೇರೆ ಬೇರೆಯಾಗಿ ವ್ಯವಹರಿಸಲ್ಪಡುತ್ತದೆ. ಭಗವಂತನಲ್ಲಿ ಲೀನವಾಗಿ ಬಹುಕಾಲ ಇದ್ದು, ಕರ್ಮಫಲ ಭೋಗಕ್ಕಾಗಿ ಮತ್ತೆ ಬೇರೆ ಬೇರೆಯಾಗಿ ಮರಳುತ್ತದೆ. ಬೇರೆ ಬೇರೆ ಬೇರೆ ರೂಪ ತಳೆಯುತ್ತದೆ.

ನಮ್ಮ ಒಳಿತು ಕೆಡುಕಿನ ಭಾವನೆಗಳು, ವಿವಿಧ ಚಿಂತನೆಗಳು ಮನಸ್ಸಿನಲ್ಲಿ ಗುಪ್ತವಾಗಿ ಅಚ್ಚಾಗುತ್ತಾ ಹೋಗುತ್ತವೆ. ಇದೇ ಮುಂದೆ ನಮಗೆ 'ಕರ್ಮ'ವಾಗಿ ಅಂಟಿಕೊಳ್ಳುತ್ತದೆ. ಪ್ರತಿಕ್ಷಣ ಮೂಡುತ್ತಿರುವ ಇಂತಹ ಅಸಂಖ್ಯ ಚಿತ್ರಗಳು ಜೀವಿಗಳ ಪ್ರಭಾವಲಯದ ಮೇಲೆ ಪರಿಣಾಮ ಬೀರುತ್ತವೆ. ಇಂತಹ ಪ್ರಭಾವಲಯದ ಭಾವಚಿತ್ರವನ್ನು ತೆಗೆಯುವ ಸಾಧನವು ಇತ್ತೀಚೆಗೆ ವಿಜ್ಞಾನಿಗಳಿಂದ ಸಂಶೋಧಿಸಲ್ಪಟ್ಟಿದೆ. ಜೀವಿಗಳು ಇಂತಹ ಪ್ರಭಾವಲಯದಲ್ಲಿರುವ ಮಾನಸಿಕ ಸ್ಥಿತಿಯನ್ನು ಆಧರಿಸಿ ತಮ್ಮ ಶತ್ರುಗಳನ್ನು ಗುರುತಿಸುತ್ತವೆ. ಪಶುಗಳು ತಮ್ಮ ಸ್ವಜಾತೀಯ ಅಥವಾ ವಿಜಾತೀಯ ಪ್ರಾಣಿಗಳನ್ನು ಸೌಮ್ಯವಾಗಿ ಸಮೀಪಿಸುವುದನ್ನು ಅಥವಾ ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಅಟ್ಟಿಸಿಕೊಂಡು ಹೋಗುವುದನ್ನು ಕಾಣುತ್ತೇವೆ. ಮನುಷ್ಯರಿಗೂ ಕೆಲವರನ್ನು ಕಂಡ ಕೂಡಲೇ ಕೋಪ–ಅಸಹನೆ, ಪ್ರೀತಿ, ಹೀಗೆ ಯಾವುದೋ ಒಂದು ವಿಧವಾದ ಮಾನಸಿಕ ವಿಕಾರವಾಗುವುದು ಅನೇಕರಿಗೆ ಅನುಭವ ವಿರಬಹುದು. ಯಾರನ್ನಾದರೂ ಕಂಡೊಡನೆಯೇ ಸ್ವಾಭಾವಿಕವಾಗಿ ಅಸಹನೆಯೋ, ಆತ್ಮೀಯತೆಯೋ ಮನಸ್ಸಿನಲ್ಲಿ ಉಂಟಾಗುತ್ತದೆ. ತನ್ನನ್ನು ಹಿಂಸಿಸುವ ಮನಸ್ಸಿನ ವ್ಯಕ್ತಿಯ ಪ್ರಭಾವಲಯವನ್ನು ಗುರುತಿಸಿದ ಸರ್ಪ ಹೆಡೆಯೆತ್ತಿ ಬುಸುಗುಡುತ್ತದೆ. ಅಂತೆಯೇ ಕೈಮುಗಿದು ನಮಸ್ಕರಿಸುವ ವ್ಯಕ್ತಿಯಿಂದ ತಾನಾಗಿ ದೂರ ಸರಿಯುತ್ತದೆ.

ನಮ್ಮ ಮನಸ್ಸಿನ ಆಳದಲ್ಲಿ ಮೂಡುವ ಭಾವಾನಾತರಂಗಗಳ ಗುಪ್ತ ಚಿತ್ತಗಳೇ ನಮ್ಮ ಮುಂದಿನ ಗತಿಯನ್ನು ನಿರ್ಧರಿಸುತ್ತವೆ. ಈ ಚಿತ್ರಗಳ ದಾಖಲೆಗಳನ್ನು ಗುರುತಿಸುವ ಶಕ್ತಿಯನ್ನು ನಮ್ಮ ಹಿರಿಯರು "**ಚಿತ್ರ–ಗುಪ್ತ**" ಎಂದು ಕರೆದರು. ಈ ಚಿತ್ರಗುಪ್ತನೇ ನಮ್ಮ ಎಲ್ಲಾ ಒಳಿತು ಕೆಡುಕುಗಳ ದಾಖಲೆಗಳನ್ನು ಕ್ರೋಢೀಕರಿಸಿ ಯಮನಿಗೆ ಒಪ್ಪಿಸುತ್ತಾನೆ.



ಯಮನನ್ನು "**ಕಾಲ–ಯಮ**" ಎನ್ನುತ್ತಾರೆ 'ಕಾಲ' ಅಂದರೆ 'ಸಮಯ', ಜೀವಿಯ ದೇಹತ್ಯಾಗದ ನಂತರ ಆ ದೇಹದಿಂದ ಬೇರ್ಪಟ್ಟ ಆತ್ಮದೊಂದಿಗೆ ಈ ಗುಪ್ತ ಚಿತ್ರ ತರಂಗಗಳು–ಅಂದರೆ ಚಿತ್ರಗುಪ್ತನ ವರದಿಯ ದಾಖಲೆ ಕಾಲದ / ಸಮಯದ ಮುಂದಿನ ಪದರವನ್ನು ಸೇರಿಕೊಳ್ಳುತ್ತದೆ. (ಆಯಾ ಜೀವಿಗೆ ಸಂಬಂಧಿಸಿದ ಯಮನ ಕಡತ (File) ನಲ್ಲಿ ದಾಖಲಿಸಲ್ಪಡುತ್ತದೆ). ಕಾಲದ/ಯಮನಸಿದ್ಧಾಂತಕ್ಕನುಗುಣವಾಗಿ ಫಲ (ಜನ್ಮಾಂತರ ಕರ್ಮಫಲ ಸ್ವರೂಪ) ನಿರ್ಣಯವಾಗುತ್ತದೆ. ಕನಸಿನಲ್ಲಿ ಇಂದ್ರಿಯಗಳ ಚಟುವಟಿಕೆಯಿಲ್ಲದೆಯೂ ಇಂದ್ರಿಯಾನುಭವವಾಗುವುದಷ್ಟೇ! ಕನಸಿನಲ್ಲಿ ಎಲ್ಲೆಲ್ಲೂ ನಡೆದಾಡುತ್ತೇವೆ. ಏನೇನೋ ಮಾತನಾಡುತ್ತೇವೆ, ಯಾವುದನ್ನೋ ನೋಡುತ್ತೇವೆ. ಹೀಗೆ ಇಂದ್ರಿಯಗಳ ಬಳಕೆ ಇಲ್ಲದೆಯೂ ಇಂದ್ರಿಯಗಳ ಚಟುವಟಿಕೆಯನ್ನು ಅನುಭವಿಸುತ್ತೇವೆ. ಅಂತೆಯೇ ದೇಹವಿಲ್ಲದೆಯೂ ಆತ್ಮ ಸುಖ–ದುಃಖವನ್ನು ಅನುಭವಿಸುತ್ತದೆ. ಗುಪ್ತ ಚಿತ್ರದಾಖಲೆಯನ್ನು ಹೊಂದಿದ ಆತ್ಮ ಕಾಲನ ಸಿದ್ಧಾಂತಕ್ಕನುಸಾರವಾಗಿ ಸ್ವರ್ಗ ಅಥವಾ ನರಕದಲ್ಲಿದ್ದೂ (ಸುಖ–ಕಷ್ಟವನ್ನನುಭವಿಸಿ) ಮತ್ತೊಂದು ದೇಹಧಾರಿಯಾಗಿ ಜನ್ಮ ತಳೆಯುತ್ತದೆ. ಎಂಬುದು ಶಾಸ್ತ್ರೀಯ ದೃಷ್ಟಿ, ಹೀಗೆ ಮರುಜನ್ಮ ಪಡೆದ ಆತ್ಮದ ಜತೆಗೆ ಅಂಟಿಕೊಂಡಿರುವ ಜನ್ಮಾಂತರದ ಒಳಿತು ಕೆಡಕುಗಳ ಗುಪ್ತದಾಖಲೆಗಳು ಬರಿದಾಗುವ ತನಕ (ಕರ್ಮಕ್ಷಯವಾಗುವ ತನಕ) ಅದು ಸ್ವತಂತ್ರವಾಗುವುದಿಲ್ಲ. ಅಂದರೆ ಮೋಕ್ಷ ಸಿಗುವುದಿಲ್ಲ.

ಹೆಚ್ಚಿನ ಸನ್ನಿವೇಶಗಳಲ್ಲಿ ಪುನರ್ಜನ್ಮವನ್ನು ನಂಬುವುದು ಸಾಧ್ಯವಾಗದು. ಏಕೆಂದರೆ ಅಂತಹ ಉದಾಹರಣೆಗಳು ಒಂದೋ ಊಹೆಯ ಸಂಗತಿ ಅಥವಾ ಕರ್ಣಾಕರ್ಣಿಯಾಗಿ ಕೇಳಿದ ಕಿಂವದಂತಿ (ಈಗಿನ ನೋಡುಗರನ್ನು, ಓದುಗರನ್ನು, ಕೇಳುಗರನ್ನು, ಆಕರ್ಷಿಸುವ ಸಲುವಾಗಿ ಮಾಧ್ಯಮಗಳು ಅಸಂಬದ್ಧ ಸಂಗತಿಗಳನ್ನು ಅತಿರಂಜಕವಾಗಿ ವರ್ಣಿಸಿ ಸಮಾಜವನ್ನು ಗೊಂದಲದ ಗೂಡಿನಲ್ಲಿ ಬೀಳಿಸುತ್ತಿರುವುದು ಎಲ್ಲರಿಗೂ ಗೊತ್ತಿದೆ). ಆದರೆ ಮಹಾತ್ಮ ಗಾಂಧೀಜಿಯಂತಹವರ ಮೇಲೂ ಪ್ರಭಾವ ಬೀರಿದ ಒಂದು ಸಂಶೋಧನಾತ್ಮಕ ಸಂಗತಿಯನ್ನು ನೂರಕ್ಕೆ ನೂರು ನಂಬದಿರಲಾಗದು. ಸ್ವೀಡನ್ನಿನ ಪತ್ರಕರ್ತ Sture Lonnerstrandರವರು ಅನೇಕ ವಾರಗಳವರೆಗೆ ಶಾಂತಿದೇವಿ ಎಂಬುವವರ ಜೊತೆಯಲ್ಲಿ ಇದ್ದು "I have lived before : The True Story of Reincarnation of Shanti Devi" ಎಂಬ ಸಂಶೋಧನಾತ್ಮಕ ಕೃತಿಯನ್ನು ರಚಿಸಿದ್ದಾರೆ. ಸುಮಾರು 1930ರಲ್ಲಿ ದೆಹಲಿಯಲ್ಲಿ ವಾಸಿಸುವ **ಶಾಂತಿದೇವಿ** ಎಂಬ ಹುಡುಗಿ ನಾಲ್ಕು ವರ್ಷದ ತನಕ ಮಾತತು ಬಾರದವಳಂತಿದ್ದು, ಇದ್ದಕ್ಕಿದ್ದಂತೆ "ಇದು ನನ್ನ ಮನೆಯಲ್ಲ ನನ್ನ ಗಂಡ ಮತ್ತು ಮಗ ಮಥುರೆಯಲ್ಲಿದ್ದಾರೆ, ನಾನಲ್ಲಿಗೆ ಹೋಗಲೇಬೇಕು" ಎಂದು ಹಟ ಮಾಡತೊಡಗಿದಳು. ಕುತೂಹಲ ತಡೆಯಲಾರದ ಈಕೆಯ ಶಾಲೆಯ ಮಾಸ್ತರರು ಈಕೆ ನೀಡಿದ ಮಾಹಿತಿಯಂತೆ ಮಥುರೆಗೆ ಅಂಚೆ ಮೂಲಕ ಪತ್ರ ಬರೆದರು. ಆಶ್ಚರ್ಯವೆಂಬಂತೆ ಶಾಂತಿದೇವಿಯ ಪೂರ್ವಜನ್ಮದ ಗಂಡನಿಂದ ಬಂದ ಉತ್ತರದಲ್ಲಿ ಕೆಲವು ವರ್ಷಗಳ ಹಿಂದೆ **ಲುಗ್ಡಿದೇವಿ** ಎಂಬ ತನ್ನ ಪತ್ನಿ ಮರಣಿಸಿದುದಾಗಿ ವಿವರಿಸಲಾಗಿತ್ತು. ಶಾಂತಿ ದೇವಿ

ಯಾವುದೇ ಇತರೆ ಮೂಲಗಳಿಂದಾಗಲೀ, ಯಾವುದೇ ಪ್ರಚೋದನೆಯಿಂದಾಗಲೀ ವಿಷಯವನ್ನು ಸಂಗ್ರಹಿಸಿ ನಿರೂಪಿಸುತ್ತಿಲ್ಲ ವೆಂದು ಖಚಿತ ಪಡಿಸಿಕೊಂಡ ಸಂಶೋಧಕರ ತಂಡವೊಂದು ಆಕೆಯೊಂದಿಗೆ ಸುತ್ತಾಡಿ, ಅವಳು ಹೇಳಿದ ಸಂಬಂಧಗಳನ್ನು ವಿಚಾರಿಸಿ, ಅವಳು ಸಂಕೇತಿಸಿದ ಎಲ್ಲಾ ಗುರುತುಗಳು, ವಿವರಣೆಗಳೂ, ಕೆಲವು ವರ್ಷಗಳ ಹಿಂದೆ ಇದ್ದಂತೆ ನೂರಕ್ಕೆ ನೂರು ನಿಜವೆಂದು ಖಚಿತಪಡಿಸಿಕೊಂಡರು. ಈಕೆ ವಿವರಿಸಿದ ಸಂಗತಿಗಳಲ್ಲಿ ಬೇರೆ ಯಾರಿಗೂ ತಿಳಿಯದಂತಹ ಈಕೆಯ ಕೌಟುಂಬಿಕ ರಹಸ್ಯಗಳೂ ಇದ್ದು, ನಿಜವಾಗಿದ್ದವು. ಲುಗ್ಡೀದೇವಿ ಮತ್ತು ಶಾಂತಿದೇವಿ ನಡುವಿನ ಸ್ಥಿತ್ಯಂತರ ಅವಧಿಯ ಅನುಭವ ವಿವರಣೆಗಳೆಲ್ಲವೂ ಸತ್ಯವಾಗಿದ್ದವು. ಇಂತಹ ಸನ್ನಿವೇಶಗಳಲ್ಲಿನ ಪುನರ್ಜನ್ಮ ವನ್ನು ನಂಬಲೇ ಬೇಕಾಗುತ್ತದೆ. ಅಭಿಮನ್ಯುವಿಗೆ ಗರ್ಭವಸ್ಥೆಯಲ್ಲಿದ್ದಾಗ ಕೃಷ್ಣ ಉಪದೇಶಿಸಿದ 'ಚಕ್ರವ್ಯೂಹ'ದ ವಿವರಣೆಯ ನೆನಪು, ಪ್ರಹ್ಲಾದನಿಗೆ ಗರ್ಭಾವಸ್ಥೆಯಲ್ಲಿದ್ದಾಗ ನಾರದರು ಮಾಡಿದ ಭಗವನ್ನಾಮದ ಉಪದೇಶ ಸ್ಮರಣೆ, ಜನ್ಮಾಂತರವನ್ನು ಕುರಿತಾಗಿ ನಂಬಲೇಬೇಕಾದ ಸತ್ಯ. 'ಯೋಗ ವಾಸಿಷ್ಠ'ದಲ್ಲಿ ವಿವರಿಸಿರುವಂತೆ ನಮ್ಮ ಅಂತರಿಕ ಚೈತನ್ಯವು ದೇಶಕಾಲದ ವ್ಯಾಪ್ತಿಗೆ ಹೊರತಾಗಿರುವುದರಿಂದ ಪುನರ್ಜನ್ಮಎಲ್ಲಿ, ಯಾವಾಗ, ಹೇಗೆ ಸಂಭವಿಸುತ್ತದೆಂಬುದನ್ನು ನನ್ನ ಸೀಮಿತ ಜ್ಞಾನದಿಂದ ಪೂರ್ಣ ವಿವರಿಸಲಾಗದು.

**ಪೂರ್ವ ಜನ್ಮದ ನೆನಪು ಯಾಕೆ ಬರುವುದಿಲ್ಲ?**

**'ಶಾರೀರ ನಾಶವಾಗುತ್ತದೆ, ಆತ್ಮ ಅವಿನಾಶಿ'** ಎಂಬಲ್ಲಿಂದ ಪಾಶ್ಚಾತ್ಯ ಚಿಂತನೆ ಮುಂದುವರಿಯುವುದಿಲ್ಲ. ಆದರೆ ಭಾರತೀಯ ಚಿಂತನೆಯ ಪ್ರವಾಹ ನಿರಂತರ ಹರಿಯುತ್ತಲೇ ಇರುತ್ತದೆ. ನಮಗೆ ಚಿಂತನೆಯ, ಜನ್ಮಾಂತರದ ಸಂಗತಿಗಳ ಸ್ಮರಣೆ ಇರುವುದಿಲ್ಲ. ಆದರೂ ನಾವು ಯಾರಾದರೂ ಅಪರಿಚಿತ ವ್ಯಕ್ತಿಗಳೊಂದಿಗೋ, ಯಾವುದಾದರೂ ಪ್ರಾಣಿಗಳೊಂದಿಗೆ ಅಥವಾ ನಿರ್ದಿಷ್ಟ ಸ್ಥಳದ ಕಡೆಗೋ ಸ್ವಭಾವಿಕವೆಂಬಂತೆ, ನಮಗರಿವಿಲ್ಲದಂತೆಯೇ ಅಪರೂಪಕ್ಕೊಮ್ಮೆ ಆಕರ್ಷಿತರಾಗುವುದುಂಟು. ಇದೇ ಜನ್ಮಾಂತರದ ಅಸ್ಪಷ್ಟವಾದ ನೆನಪಿನ ಪ್ರತಿಫಲನ. ಪುನರ್ಜನ್ಮದಲ್ಲಿ ಗರ್ಭದಿಂದ ಹೊರಬಂದ ಶಿಶುವಿನ ಪ್ರಥಮ ಶ್ವಾಸದಿಂದ ಸೂಕ್ಷ್ಮಶರೀರದ ಮಿದುಳು ಅದುರುವುದರಿಂದಲೇ (ಅಂದರೆ ಒಂದು ವಿಧವಾದ ಕ್ಷೋಭೆಗೊಳಗಾಗುವುದರಿಂದ) **ವೈಷ್ಣವ ಶಕ್ತಿ.*** ಜಾಗೃತವಾಗಿ ಹಿಂದಿನ ಜನ್ಮದ ನೆನಪುಗಳು ಅಳಿಸಿ ಹೋಗುತ್ತವೆ. (ನೆನಪಿನ ಕೋಶಗಳು ನಾಶವಾಗುತ್ತವೆ). ಶಾಂತಿದೇವಿಯಂತಹ ಅಪರೂಪದ ಸನ್ನಿವೇಶದಲ್ಲಿ ಇದು ಅಪವಾದ. ಕೆಲವೊಮ್ಮೆ ಈ ಜನ್ಮದ ನೆನಪೂ ಅಳಿಸಿಹೋಗುತ್ತದೆ. ನಮಗೆ 3–4 ವರ್ಷದ ಒಳಗಿನ ಬಾಲ್ಯದ (ಶೈಶವದ) ನೆನಪು ಮಸುಕಾಗಿರುವುದಕ್ಕೂ ಇದೇ ಕಾರಣ, ಕಂಪ್ಯೂಟರಿನ ಪ್ರಧಾನ ಮಿದುಳಿನಲ್ಲಿ ಸಂಗ್ರಹವಾದ ವಿವರ (data)ಕೆಲವೊಮ್ಮೆ ಪೂರ್ತಿ download ಆಗುವುದಿಲ್ಲ. ಅಥವಾ hang up ಅಗುವುದಷ್ಟೇ! ಹಾಗೆಯೇ ಪೂರ್ವಜನ್ಮದ ಸೂಕ್ಷ್ಮ ಶರೀರದ ಮಿದುಳಿನಲ್ಲಿ ಸಂಗ್ರಹವಾದ ನೆನಪಿನ ಸರಣಿ ಈ ಜನ್ಮದ ಮಿದುಳಿಗೆ ವರ್ಗಾವಣೆ (transmission) ಆಗದಿರುವುದರಿಂದ ನಮಗೆ ಜನ್ಮಾಂತರದ ನೆನಪಿನ ಶಕ್ತಿ



ಇರುವುದಿಲ್ಲ. ಲುಗ್ಡೀದೇವಿ ಮರಣ ಕಾಲದಲ್ಲಿ ಸಂಪೂರ್ಣಜಾಗ್ರತಾವಸ್ಥೆ ಯಲ್ಲೇ ಇದ್ದು ಮನಸ್ಸು ಭಗವಂತನಲ್ಲೇ ಲೀನವಾಗಿದ್ದುದರಿಂದ ಅವಳ ಮಿದುಳಿನ ನೆನಪಿನ ಕೋಶ ಯಥಾಸ್ಥಿತಿಯಲ್ಲಿ ಶಾಂತಿದೇವಿಯ ಮಿದುಳಿಗೆ ವರ್ಗಾವಣೆಯಾದುದ ರಿಂದ ಹಿಂದಿನ ಜನ್ಮದ ಪೂರ್ತಿಸ್ಮರಣೆ ಜಾಗೃತವಾಗಿತ್ತೆಂದು ಆಕೆಯೇ ಸಂಶೋಧಕರಿಗೆ ತಿಳಿಸಿದ್ದಾಳೆ. ಶಾಂತಿದೇವಿಯ ಜೀವನದಂತಹ ಅನೇಕ ವರದಿಗಳು ಆಗಾಗ ಮಾಧ್ಯಮಗಳಲ್ಲಿ ಪ್ರಕಟವಾಗುತ್ತಲೇ ಇರುತ್ತವೆ.

ಇಂತಹ ಸಂಗತಿಗಳನ್ನು ನಂಬುವವರೂ ಉಂಟು, ನಂಬದವರೂ ಇದ್ದಾರೆ. ಹಿಂದೂ ಸನಾತನಿಗಳಾದ ನಮಗೆ ಇಂತಹವುಗಳಲ್ಲಿ ಕುತೂಹಲ ಜಾಸ್ತಿ. ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯರೂ ಈ ವಿಚಾರದಲ್ಲಿ ಹೆಚ್ಚು ಹೆಚ್ಚು ಆಸಕ್ತರಾಗುತ್ತಿರುವುದು ಆಶ್ಚರ್ಯದ ಸಂಗತಿ. ಇಂಗ್ಲೆಂಡಿನಲ್ಲಿ Living It ಚಾನೆಲ್‌ನಲ್ಲಿ Sixth Sense T.V. Show -ಆತ್ಮಗಳ ಬಗ್ಗೆ ನಿರ್ದಿಷ್ಟ ಅವಧಿಯಲ್ಲಿ ಪ್ರಸಾರವಾಗುತ್ತದೆ. ಸ್ಟುಡಿಯೋದಲ್ಲಿ ಅನಾಹೂತರಾಗಿ ಬಂದ ಪ್ರೇಕ್ಷಕರೇ ಸೂಚಿಸುವ ವ್ಯಕ್ತಿಯ ಬಗ್ಗೆ (ಅಂದರೆ ಕಾರ್ಯಕ್ರಮ ನಡೆಸುವ ವ್ಯಕ್ತಿಗೂ ಸೂಚಿತ ವ್ಯಕ್ತಿಗೂ ಖಚಿತವಾಗಿ ಎಂದೂ ಯಾವುದೇ ಸಂಪರ್ಕ ಇರುವುದಿಲ್ಲ) ಕಾರ್ಯಕ್ರಮ ನಡೆಸುವ ವ್ಯಕ್ತಿ. ಪೂರ್ವಜನ್ಮದ ಆತ್ಮಗಳ ವಿವರಣೆ ನೀಡುತ್ತಾನೆ. ಆತ ನೀಡುವ ಅಷ್ಟೂ ವಿವರಗಳು ನೂರಕ್ಕೆ ನೂರು ಸರಿಯಾಗಿರುತ್ತದೆ. ಕಾರ್ಯಕ್ರಮ ನಡೆಸುವ ವ್ಯಕ್ತಿಯಲ್ಲಿರುವ ಅಂತಹ ಶಕ್ತಿ ಯಾವುದು?

ಆತನ ವಿವರಣೆಯ ಒಂದು Sample : 35 ವರ್ಷದ ಮಹಿಳೆಯ ಹತ್ತಿರ "ನಿಮ್ಮ ಅಜ್ಜಿಯ ಹೆಸರು.............ಅಂದರೆ ಅವರು ನಿಮ್ಮ ನಿಜವಾದ ಅಜ್ಜಿ ಅಲ್ಲ, ನೆರಮನೆಯವರು. ನೀವು 13ನೇ ವರ್ಷದವರಗಿದ್ದಾಗ ಆಟವಾಡುತ್ತ ಅವರ ಬಲಗಣ್ಣಿಗೆ ಬೆರಳು ತಾಕಿಸಿ ಅವರ ಕಣ್ಣು ಕುರುಡಾಯಿತು. ಅವರು ಸಾಯುವಾಗ ಕೋಮದಲ್ಲಿದ್ದರು. ನೀವು ಅವರ ಕಾಲ ಬಳಿ ಕುಳಿತಿದ್ದಾಗ ಒಮ್ಮೆ ಎಚ್ಚರಗೊಂಡು ಕೂಡಲೇ ಸತ್ತರು ......ಇತ್ಯಾದಿ.

ಒಮ್ಮೊಮ್ಮೆ ನೀವು ಸುಮ್ಮನೆ ಕುಳಿತಿದ್ದಾಗ, ನಿಮ್ಮ ಅಜ್ಜಿ ಉಪಯೋಗಿಸುತ್ತಿದ್ದ ಬ್ರ್ಯಾಂಡಿನ ಸೆಂಟಿನ ಸುವಾಸನೆ ಅನುಭವಿಸುತ್ತೀರಿ. ಅಗ ಅಜ್ಜಿಯ ಆತ್ಮ ನಿಮ್ಮ ಸನಿಹದಲ್ಲಿ ಬಂದಿರುತ್ತದೆ.

ನಿಮ್ಮ ಅಜ್ಜಿಗೆ ಸ್ತನದ ಕ್ಯಾನ್ಸರ್ ಆಗಿತ್ತು.

ನಿಮ್ಮ ಅಜ್ಜನ ಹೆಸರು....... ನಿಮ್ಮ ಅಜ್ಜ ನಿಮ್ಮನ್ನು ಬಾಲ್ಯದಲ್ಲಿ ತಲೆಕೆಳಗಾಗಿ ನಿಲ್ಲಿಸುತಿದ್ದರು. ನಿಮ್ಮ ಅಜ್ಜನಿಗೆ ತಲೆಯ ನಡುವೆ ಒಂದು ಇಂಚಿನಷ್ಟು ಮಾತ್ರ ಕೂದಲಿತ್ತು. ನೀವು ಅವರ ಹೆಗಲ ಮೇಲೆ ಕುಳಿತು ಎಳೆದಾಡುತ್ತಿದ್ದಿರಿ.

ನೀವು ಮಗನ ಫೋಟೋವನ್ನು ದಿನಕ್ಕೊಂದು ಜಾಗದಲ್ಲಿ ಇರಿಸುತ್ತೀರಿ. ನೀವು

---

**ಪುನರ್ಜನ್ಮದ ಸಮಯದಲ್ಲಿ ಆತ್ಮವನ್ನು ಮರಗಟ್ಟಿಸುತ್ತ. ಇದರಿಂದಾಗಿ ಆತ್ಮ ತನ್ನ ಹಿಂದಿನದ ಜನ್ಮದ ಜಾಗೃತ ನೆನಪನ್ನು ಕಳೆದುಕೊಳ್ಳುತ್ತದೆ.**

ಕೆಂಪು ಗುಲಾಬಿಯನ್ನು ಮುಖಕ್ಕೆ ತಾಕಿಸಿ ಮುತ್ತಿಡುತ್ತೀರಿ .........ಹೀಗೆ. ನಿರೂಪಕನ ಮತಿನಲ್ಲಿ 35 ವರ್ಷದ ಆ ಮಹಿಳೆಗೆ ಕಣ್ಣಾರೆ ಕಂಡಷ್ಟು ನೂರಕ್ಕೆ ನೂರು ಸತ್ಯ ಗೋಚರಿಸುತ್ತದೆ. ಭಾವೋದ್ವೇಗದಿಂದ ಆಕೆ ತನ್ನ ಪ್ರತಿಕ್ರಿಯೆಯನ್ನು ಪ್ರಕಟಿಸಲಾರದೆ ಮೂಕವಿಸ್ಮಿತ ಳಾಗುತ್ತಾಳೆ.

ಧಾರವಾಹಿಯಂತೆ ಬರುವ ಪ್ರತಿಯೊಂದು ಕಂತಿನಲ್ಲೂ ಬೇರೆ ಬೇರೆ ವ್ಯಕ್ತಿ ಬಗ್ಗೆ ನಿರೂಪಿಸಲಾಗುತ್ತದೆ. ಇದು ಅತ್ಯಂತ ಜನಪ್ರಿಯ ಚಾನೆಲ್. ಪ್ರಸಾರವಾಗುವ ನಿರ್ದಿಷ್ಟ ಕಾಲಾವಧಿಯಲ್ಲಿ ನೋಡಲಾಗದ ಉದ್ಯೋಗಿಗಳು 'ರೆಕಾರ್ಡಿಂಗ್' ಮಾಡಿಸಿಟ್ಟು ಯಥಾವಕಾಶ ನೋಡುತ್ತಾರೆ. (ಇದು ಲೇಖಕನ ಅನುಭವದ ನಿರೂಪಣೆ) ನಮ್ಮಲ್ಲಿ ಕತ್ತೆಯನ್ನು ಕುದುರೆಯೆಂದು ನಂಬುವ ಅಪರೂಪದ ಮುಗ್ಧರಿದ್ದಾರೆ. ಅದರೆ ಪಾಶ್ಚಾತ್ಯ ರಾಷ್ಟ್ರದ ಬುದ್ಧಿ ಜೀವಿಗಳ ನಡುವೆಯೂ ಇಂತಹ ವಿಚಾರಗಳನ್ನು ನಂಬುವ ಕುತೂಹಲಿಗಳಿದ್ದಾರೆಂಬುದು ಆಶ್ಚರ್ಯದ ಸಂಗತಿ! ಇರಲಿ. ಸ್ವಯಂ ಪ್ರಕಾಶ ಸೆಪ್ಟೆಂಬರ್ 2009ರ 16ನೇ ಪುಟದಲ್ಲಿನ ಸಂಪಾದಕರ ಟಿಪ್ಪಣಿಯೊಂದಿಗೆ ಜುಲೈ 2011ರ ಸಂಪಾದಕರ ಟಿಪ್ಪಣಿಯನ್ನು ಪ್ರಕಟಿಸಬೇಕು.

ನಾಲ್ಕು ಭಾಷೆಯನ್ನು ಬಲ್ಲ ಪೌರೋಹಿತ್ಯ ವೃತ್ತಿಯ ಅನುಭವವಿರುವ ಈ ಲೇಖಕರು ಕಾಲೇಜು ಪ್ರಾಶುಂಪಾಲರೂ ಆಗಿದ್ದು ನಿವೃತ್ತರಾಗಿರುವವರು. ಹುಟ್ಟು–ಸಾವು–ಮರುಹುಟ್ಟುಮುಂತಾಗಿ ಈ ದಿನಗಳಲ್ಲಿ ತುಂಬ ವಿವಾದಾತ್ಮಕವೂ, ಸಕಾಲಿಕವೂ ಆದ ವಿಯವನ್ನೆತ್ತಿಕೊಂಡು ಸಾಕಷ್ಟು ಚಿಂತನೆಯ ಹಿನ್ನಲೆಯುಳ್ಳ ದೀರ್ಘ ಲೇಖನವನ್ನು ಸಿದ್ಧಪಡಿಸಿ ಧಾರವಾಹಿಯಾಗಿ ಪ್ರಕಟಿಸಲು ನೀಡುವುದಕ್ಕಾಗಿ ಅವರಿಗೆ ಅಭಿನಂದನೆಗಳು ಸಲ್ಲುತ್ತವೆ.

ಹುಟ್ಟು–ಸಾವು ಮರುಹುಟ್ಟು ಧಾರವಾಹಿ ಲೇಖನ ಇಲ್ಲಿಗೆ ಮುಗಿದಿದೆ. ಈ ಲೇಖನದಲ್ಲಿ ಪ್ರತಿಪಾದಿತವಾದ ವಿಷಯಗಳ ಬಗ್ಗೆ ತಥಾಕಥಿತ ಬುದ್ಧಜೀವಿ(?)ಗಳೆಂದು ಕೊಳ್ಳುವವರು ಪದೇ ಪದೇ ಗೊಂದಲವೆಬ್ಬಿಸುತ್ತ ಇವನ್ನೆಲ್ಲ ಮೂಢನಂಬಿಕೆ ಎಂದು ತಿರಸ್ಕರಿಸುತ್ತಲೇ ಇದ್ದಾರೆ. ಆದರೆ ಬಹುಶ್ರಮಪಟ್ಟು ಆಧಾರಗಳನ್ನು ಕಲೆಹಾಕಿ ವೈಜ್ಞಾನಿಕ ಸಮರ್ಥನೆಯೊಂದಿಗೆ ನಮ್ಮ ಓದುಗರಿಗಾಗಿ ಈ ಉತ್ತಮ ಲೇಖನ ಬರೆದು ಕೊಟ್ಟಿರುವ ವಿದ್ವಾಂಸ **ಶ್ರೀ ಎಸ್.ವಿ. ಅಡಿಗರಿಗೆ** ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

# ಗೋ ಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ

**'ಸಮಸ್ತ** ಪ್ರಜೆಗಳಿಗೆ ಒಳಿತಾಗಲಿ, ರಾಜರು (ಆಡಳಿತಗಾರರು) ನ್ಯಾಯಮಾರ್ಗದಿಂದ ಆಡಳಿತ ನಡೆಸಲಿ, ಹಸುಗಳಿಗೆ, ಬ್ರಾಹ್ಮಣರಿಗೆ ಯಾವಾಗಲೂ ಒಳಿತಾಗಲಿ, ತನ್ಮೂಲಕ ಜಗತ್ತಿನಲ್ಲಿ ಸುಖ ಶಾಂತಿ ನೆಲಸಲಿ" ಎಂಬುದು ಹಿರಿಯರ ಆಶಯವಾಗಿತ್ತು. ಹಸುಗಳ–ಬ್ರಾಹ್ಮಣರ ಒಳಿತಿನಿಂದ ಜಗತ್ಕಲ್ಯಾಣ ಹೇಗೆ? ಬ್ರಾಹ್ಮಣರು ಸ್ವಾರ್ಥ ಸಾಧನೆಗಾಗಿ ಮತ್ತು ತಮ್ಮ ಹಿರಿಮೆಯನ್ನು ಸ್ಥಾಪಿಸುವುದಕ್ಕಾಗಿ ಇಂತಹ ಉಕ್ತಿಯನ್ನು ಉದ್ಗರಿಸುತ್ತಿದ್ದರೆ ?

ಹಸುವಿನ ಬಗ್ಗೆ ಪ್ರಾಚೀನಕಾಲದಿಂದಲೂ ವಿಶೇಷ ಗೌರವವಿತ್ತು. ಅದಕ್ಕೆ ಭಾವನಾತ್ಮಕ ಮತ್ತು ವೈಜ್ಞಾನಿಕ ಕಾರಣಗಳೂ ಇದ್ದವು. ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ – ಇವು ಪಂಚ ಗವ್ಯಗಳು. ಹಸುವಿನ ಹಾಲು, ಮೊಸರು, ಬೆಣ್ಣೆ, ತುಪ್ಪ, ಮಜ್ಜಿಗೆ ಇವೇ ಪ್ರಾಚೀನ ಕಾಲದಲ್ಲಿ ಆಶ್ರಮವಾಸಿಗಳೆಲ್ಲರಿಗೂ ನಿತ್ಯಾಹಾರವಾಗಿತ್ತು. ಇದರಿಂದಾಗಿ ಇವರೆಲ್ಲರೂ ನಿರೋಗಿಗಳಾಗಿಯೂ, ದೀರ್ಘಾಯುಷಿಗಳಾಗಿಯೂ, ಶಕ್ತಿವಂತರಾಗಿಯೂ, ಜ್ಞಾನಿಗಳಾಗಿಯೂ, ಇರುತ್ತಿದ್ದರು. ಹಾಲಿನ ಉತ್ಪನ್ನಗಳಲ್ಲಿ ರೋಗ ನಿರೋಧಕ ಶಕ್ತಿಯಿದೆಯೆಂದು ಆಯುರ್ವೇದ ವೈದ್ಯರು ಹೇಳುತ್ತಾರೆ, ಶ್ರೌತ – ಸ್ಮಾರ್ತ ಅನುಷ್ಠಾನಗಳಲ್ಲೂ, ವ್ರತಾಚರಣೆಗಳಲ್ಲೂ, ನಿತ್ಯನೈಮಿತ್ತಿಕ ಧಾರ್ಮಿಕ ಕಾರ್ಯಕ್ರಮ ಗಳಲ್ಲೂ, ಹಾಲು ಮತ್ತು ಅದರ ಉತ್ಪನ್ನಗಳ ಸಾರ್ವತ್ರಿಕ ಉಪಯೋಗ ಎಲ್ಲರಿಗೂ ತಿಳಿದಿದೆ.

ಹಿಂದೆ ವೈದ್ಯಕೀಯ ಕ್ಷೇತ್ರದಲ್ಲಿ ಅಧುನಿಕ ಔಷಧಗಳ ಬಳಕೆಯಿರಲಿಲ್ಲ. ಲಭ್ಯತೆಯೂ ಇರಲಿಲ್ಲ ಹಾಗಾಗಿ ದಿನಕ್ಕೆರಡು ಬಾರಿಯಂತೆ ನಾಲ್ಕಾರು ದಿನ ಬಿಸಿಬಿಸಿ ಗೋಮಯ ಲೇಪದಿಂದ ಮೈತುಂಬಾ ಇದ್ದ ಕಜ್ಜಿಗುಣವಾದುದು ಲೇಖಕನ ಬಾಲ್ಯದ ಸ್ವಂತ ಅನುಭವ.

ಗೋಮೂತ್ರ ಗೋಮಯಗಳು ಕ್ರಿಮಿನಾಶಕಗಳಾಗಿ ಈಗೀಗ ಹೆಚ್ಚು ಪ್ರಚಾರಕ್ಕೆ ಬರುತ್ತಿದ್ದರೂ, ಪ್ರಾಚೀನಕಾಲದಿಂದಲೂ ಅದೇ ಉದ್ದೇಶದಲ್ಲಿ ಬಳಸಲ್ಪಡುತ್ತಿದ್ದದು ಯಾರಿಗೆ ಗೊತ್ತಿಲ್ಲ? ಮನೆಯ ಒಳಗೆ ದಿನಕ್ಕೆ ಮೂರು ನಾಲ್ಕುಬಾರಿ ಮತ್ತು ಅಂಗಳ ಹಾಗೂ ಸುತ್ತಮುತ್ತ ದಿನಕ್ಕೆರಡು ಭಾರಿಯಾದರೂ ಸಗಣಿಯಿಂದ ಸಾರಿಸುತ್ತಿದ್ದುದರಿಂದ ಸೊಳ್ಳೆ – ನೊಣಗಳ ಬಾಧೆ ಇರುತ್ತಿರಲಿಲ್ಲ. ಬೆರಣಿಯನ್ನು ಸುಟ್ಟು ಆಡುಸೋಗೆ, ಲಕ್ಕಿ ಸೊಪ್ಪಿನ ಹೊಗೆ ಹಾಕಿ ವೈರಾಣುಗಳನ್ನು ದೂರ ಮಾಡುತ್ತಿದ್ದುದು ಈಗಲೂ ಹಲವರ ಅನಭವದಲ್ಲಿದೆ.

ಒಂದು ಕಾಲದಲ್ಲಿ ಗೋಸಮೃದ್ಧಿ ಶ್ರೀಮಂತಿಕೆಯ ದ್ಯೋತಕವಾಗಿತ್ತು. ಅಶ್ವಮೇಧಾದಿ ಮಹಾ ಯಾಗಗಳಲ್ಲಿ ಋತ್ವಿಜರಿಗೆ ಹೇರಳವಾಗಿ (ದ್ವಾದಶ ಶತಂಗಾವೋ ದಕ್ಷಿಣಾ) ಅಂದರೆ ಸಾವಿರದ ಇನ್ನೂರು ಹಸುಗಳನ್ನೇ ದಕ್ಷಿಣೆಯಾಗಿ ನೀಡಲಾಗುತಿತ್ತು. ದ್ರವ್ಯದ ಬದಲಿಗೆ ಹಸುಗಳೇ ವಿನಿಯಮದ ಮಾಧ್ಯಮವಾಗಿದ್ದ ಕಾಲವು ಒಂದಿತ್ತು. ಹಸುಗಳ



ಅಂಬಾರವದ ಮತ್ತು ಗಂಜಲ ಸೆಗಣಿಯಿಂದಾಗಿ ಆಶ್ರಮದ ಪರಿಸರ ಅತ್ಯಂತ ಪವಿತ್ರವಾಗಿರುತ್ತಿತ್ತು. ಅಂತಹ ಆಶ್ರಮದಲ್ಲಿ ವಾಸಿಸುವ ಸಾವಿರಾರು ಶಿಷ್ಯರಿಗೆ ಮತ್ತು ಇತರೆ ಆಶ್ರಮ ವಾಸಿಗಳಿಗೆ ಹಾಲಿನ ಉತ್ಪನ್ನ ಹೇರಳವಾಗಿ ದೊರಕಿ ಎಲ್ಲರೂ ಆರೋಗ್ಯ ದೃಢ ಕಾಯರಾಗಿ ದೀರ್ಘಾಯುಷಿಗಳಾಗಿ ಇರುತ್ತಿದ್ದರು. ಅಸಂಖ್ಯ ಆಶ್ರಮವಾಸಿಗಳಿಗೆ ಬೇಕಾಗುವ ಹಣ್ಣು ಹಂಪಲುಗಳನ್ನು ಆಹಾರ ಧಾನ್ಯಗಳನ್ನು ಧಾರಳವಾಗಿ ಬೆಳೆಸಲು ನೈಸರ್ಗಿಕ (ಸಾವಯುವ) ಗೊಬ್ಬರವಾಗಿ ಗಂಜಲ–ಸೆಗಣಿಗಳ ಉಪಯೋಗ ವಾಗುತ್ತಿತ್ತು. ಜತೆಗೆ ಹಸುಗಳಿಗೆ ಬೇಕಾಗುವ ಹಸಿರೂ ತಾನಾಗಿ ಸಂಮೃದ್ಧವಾಗಿ ಬೆಳೆಯುತಿತ್ತು. ಹಸುಗಳೇ ಆಶ್ರಮವಾಸಿಗಳ ಸುಖ ಜೀವನ ಶಾಂತಿ ಸಂಮೃದ್ಧಿಗೆ ಕಾರಣ ವಾಗಿದ್ದವು. ಪ್ರಾಚೀನ ಮಹಾಕಾವ್ಯಗಳಲ್ಲಿ ಇಂತಹ ಆಶ್ರಮಗಳ ಸುಂದರವಾದ ವರ್ಣನೆ ಗಳಿವೆ.

ಹೊಟ್ಟೆ ತುಂಬಾ ಹುಲ್ಲನ್ನು ಮೆಯ್ದು, ಕೆಚ್ಚಲಲ್ಲಿ ಹಾಲನ್ನು ತುಂಬಿಕೊಂಡು, ಸಂಜೆ ಬಾಲವನ್ನೆತ್ತಿ ಅಂಬಾಃ ಎಂದು ಕೂಗುತ್ತಾ ಸಂತೋಷದಿಂದ ನೆಗೆಯುತ್ತಾ, ಕಾಲುಗಳಿಂದ ಧೂಳನ್ನೆಬ್ಬಿಸುತ್ತಾ ಹಸುಗಳು ಕರುವನ್ನು ಸಮೀಪಿಸುವ ಸಮಯವನ್ನು ಗೋಧೂಳಿ ಮುಹೂರ್ತವೆನ್ನುತ್ತಾರೆ. ವಿವಾಹಾದಿ ಶುಭಕಾರ್ಯಗಳಿಗೆ 'ಗೋಧೂಳಿ ಲಗ್ನ' ಅತ್ಯಂತ ಶುಭವೆಂದು ಜ್ಯೋತಿಷಿಗಳು ಹೇಳುತ್ತಾರೆ. ಸಂತಾನ ಹೀನತೆಗೆ 'ಪಂಚಗವ್ಯ ಘೃತ' ಎಂಬ ಒಂದು ದಿವ್ಯೌಷಧ ಪ್ರಾಚೀನ ಗ್ರಂಥವೊಂದರಲ್ಲಿ ಉಲ್ಲೇಖಿಸಲ್ಪಟ್ಟಿದೆ. ವಿವಿಧ ವರ್ಣ ಲಕ್ಷಣಗಳುಳ್ಳ ಬೇರೆ ಬೇರೆ ಹಸುವಿನ ಉತ್ಪನ್ನಗಳಲ್ಲಿ ಪ್ರತ್ಯೇಕ ಗುಣ ವೈಶಿಷ್ಟ್ಯಗಳನ್ನು ಹೇಳಲಾಗುತ್ತಿದೆ. ನಿರ್ದಿಷ್ಟ ಲಕ್ಷಣಗಳ ಹಸುಗಳ ಪಂಚಗವ್ಯದ ನಿಶ್ಚಿತ ಅನುಪಾತದಲ್ಲಿ ಕ್ಷೀರಂ ಸಪ್ತ ಪಲಂ=ನಾಲ್ಕು ಕರ್ಷಗಳು, ಒಂದು ಕರ್ಷ=1/400 ತೊಲ, ದಧಿತ್ರಿಪಲಂ, ಗೋಮುತ್ರಂ ಏಕಪಲಂ, ಅಂಗುಷ್ಠಾರ್ಥಮಿತಂ ಗೋಮಯಂ (ಕುಶೋದಕಂ ಏಕಪಲಂ), ಅನುಕ್ರಮವಾಗಿ ಸೋಮ, ವಾಯು, ಸವಿತೃ, ಅಗ್ನಿ, ಶ್ರೀಃ (ಲಕ್ಷ್ಮಿ) (ಮತ್ತು ಗಂಧರ್ವ) ದೇವತೆಗಳನ್ನು ಆವಾಹಿಸಿ, ಸಸ್ವರ ಮಂತ್ರಗಳನ್ನು ಜಪಿಸಿ ಮಿಶ್ರಣ ಮಾಡಿ ಅಭಿಮಂತ್ರಸಬೇಕು. ಮಿಶ್ರಣಗೊಂಡ ಪಂಚಗವ್ಯದಿಂದ ನಾಶವಾಗದ ರೋಗವೇ ಇಲ್ಲವೆಂದು ಹೇಳಲಾಗುತ್ತದೆ.

**ಯತ್ವಗಸ್ಥಿಗತಂ ಪಾಪಂ ದೇಹೇ ತಿಷ್ಠತಿ ಮಾಮಕೇ**
**ತ್ವಕ್ಚರ್ಮಾಸ್ಥಿಗತಂ ಪಾಪಂ**
**ಮಲಮಸ್ಥಿಗತಂ ಪಾಪಂ**
**ಪ್ರಾಶನಂ ಪಂಚ ಗವ್ಯಸ್ಯ ದಹತ್ಯಗ್ನಿರಿವೇಧನಂ ॥**

ಅಗ್ನಿಯು ಕಟ್ಟಿಗೆಯನ್ನು ಸುಡುವಂತೆ ಪಂಚಗವ್ಯ ಪ್ರಾಶನವು ದೇಹಗತವಾದ ಪಾಪವನ್ನು ನಾಶಪಡಿಸುತ್ತದೆಯಂಬ ಈ ಶ್ಲೋಕ ಪ್ರಸಿದ್ಧವಾಗಿದೆ.

**ಉಚ್ಛಿಷ್ಟಂ ಶಿವ ನಿರ್ಮಾಲ್ಯಂ ವಮನಂ ಮೃತಕರ್ಪಟಂ।**

**(ಶ್ರಾದ್ಧೇ) ಸಪ್ತಪವಿತ್ರಾಣಿ ದೌಹಿತ್ರಃ ಕುತಪಃ ತಿಲಃ ॥**

ಪವಿತ್ರವೆಂದು ಪರಿಗಣಿಸುವ ವಸ್ತುಗಳಲ್ಲಿ ಮೊದಲನೆಯದು ಉಚ್ಛಿಷ್ಟ ಅಂದರೆ ಎಂಜಲು. ಕರು ತಾಯಿಯ ಕೆಚ್ಚಲನ್ನು ಗುದ್ದಿ ಹಾಲು ಕುಡಿದು ಉಳಿದ ಎಂಜಲು ನೊರೆಹಾಲು ಅತ್ಯಂತ ಪವಿತ್ರ (ಶಿವ ನಿರ್ಮಾಲ್ಯ=ಗಂಗೆ, ವಮನಂ=ಮಧುಕರಗಳ ಉಗುಳಿನಿಂದಾಗುವ ಜೇನು. ಮೃತ ಕರ್ಪಟ=ರೇಷ್ಮೆಹುಳುಗಳು ಸತ್ತು ಅವುಗಳ ಕೋಶದ ನೂಲಿನಿಂದಾಗುವ ರೇಶ್ಮೆ ಬಟ್ಟೆ ಇದು ನಿತ್ಯ ಶುದ್ಧ. ಮೈಲಿಗೆಯಾಗುವುದಿಲ್ಲ. ದೌಹಿತ್ರ ಅಂದರೆ ಮಗಳ ಮಗ, ಕುತಪ–ಮಧ್ಯಾಹ್ನಾತ್ಪರ ಕಾಲ. ಇವೆರಡಕ್ಕೂ ಬೇರೊಂದು ರೀತಿಯಲ್ಲಿ ಅರ್ಥೈಸಲಾಗುತ್ತದೆ,)

**ಯಾಲಕ್ಷ್ಮೀ; ಸರ್ವಭೂತಾನಾಂ ಯಾ ಚ ದೇವೇ ಪ್ರತಿಷ್ಠಿತಾ ।**
**ಧೇನುರೂಪೇಣ ಸಾ ದೇವೀ (ಮಮ ಪಾಪಂ ವ್ಯಪೋಹತು) ॥**

ರಾಜ ಮಹರಾಜರಲ್ಲಿ ಮತ್ತು ಇಂದ್ರನಲ್ಲಿ ನೆಲಸಿರುವ ಲಕ್ಷ್ಮೀಯು ಹಸುವಿನ ರೂಪದಲ್ಲಿದ್ದಾಳೆ.

**ವಿಷ್ಣುರೇಕಾದಶೀ ಗಂಗಾ ತುಲಸೀ ವಿಪ್ರ ಧೇನವಃ ।**
**ಅಸಾರೆ ದುರ್ಗ ಸಂಸಾರೇ ಷಟ್ಪದೀ ಮುಕ್ತಿದಾಯಿನೀ ॥**

ಸರ್ವವ್ಯಾಪಿಯಾದ ವಿಷ್ಣು, ಏಕಾದಶೀ ತಿಥಿ, ಗಂಗೆ, ತುಲಸೀ, ಬ್ರಾಹ್ಮಣ ಮತ್ತು ಹಸು ಇವು ಆರೂ ಮೋಕ್ಷದಾಯಕಗಳು.

ಹಸುವಿನ ಜತೆಗೆ ಇನ್ನಿಷ್ಟು ಸಂಗತಿಗಳ ಪಾವಿತ್ರ್ಯದ ಬಗ್ಗೆ ಗರುಡ ಪುರಾಣದ ಇನ್ನೂ ಕೆಲವು ಶ್ಲೋಕಗಳನ್ನು ಉದಾಹರಿಸುತ್ತೇನೆ.

**ತಿಲಾಃ ಪವಿತ್ರಾಃ ತ್ರಿವಿಧಾಃ ದರ್ಭಾಶ್ಚ ತುಲಸೀರಪಿ ।**
**ನರಂ ನಿವಾರಯಂತ್ಯೇತೇ ದುರ್ಗತಿಂ ಯಾಂತ ಮಾತುರಂ ।**
**ಮಮ ಸ್ವೇದ ಸಮುದ್ಭೂತಾ ಯತಸ್ತೇ ಪಾವನಾಸ್ತಿಲಾಃ ।**
**ಅಸುರಾ ದಾನವಾ ದೈತ್ಯಾ ವಿದ್ರವಂತಿ ತಿಲೈಸ್ತತಃ ।**
**ದರ್ಭಾ ವಿಭೂತಿರ್ಮೇತಾರ್ಕ್ಷ್ಯ ಮಮರೋಮ ಸಮುದ್ಭವಾಃ ।**
**ಕುಶಮೂಲೇ ಸ್ಥಿತೋ ಬ್ರಹ್ಮಾ ಕುಶಮಧ್ಯೇ ಜನಾರ್ದನಃ ।**
**ಕುಶಾಗ್ರೇ ಶಂಕರೋ ದೇವಃ ತ್ರಯೋ ದೇವಾಃ ಕುಶೇ ಸ್ಥಿತಾಃ ।**
**ಅತಃ ಕುಶಾಃ ವಹ್ನಿ ಮಂತ್ರ ತುಲಸೀ ವಿಪ್ರಧೇನವಃ ।**
**ನೈತೇ ನಿರ್ಮಾಲ್ಯತಾಂ ಯಾಂತಿ ಕ್ರಿಯಮಾಣಾಃ ಪುನಃ ಪುನಃ ।**
**ದರ್ಭಾಃ ಪಿಂಡೇಷು ನಿರ್ಮಾಲ್ಯಾಃ ಬ್ರಾಹ್ಮಣಾಃ ಪ್ರೇತ ಭೋಜನೆ ।**
**ಮಂತ್ರಾಃ ಗೌಃ ತುಲಸೀ ನೀಚೇ ಚಿತಾಯಾಂ ಚ ಹುತಾಶನಃ ॥**

– ಗರುಡ ಪುರಾಣ 9ನೇ ಅಧ್ಯಾಯ



## ಗರುಡನಿಗೆ ವಿಷ್ಣುವಿನ ಉಪದೇಶ–

ಪವಿತ್ರವಾದ ಎಳ್ಳುದರ್ಭೆ, ತುಲಸೀ–ಈ ಮೂರು ದುರ್ಗತಿನಾಶಕಗಳು. ಸದ್ಗತಿ ಪ್ರಾಪಕಗಳು. ವಿಷ್ಣುವಿನ ಬೆವರಿನಿಂದ ಹುಟ್ಟಿದ ಎಳ್ಳಿನಿಂದ ಅಸುರರು, ದಾನವರು ಮತ್ತು ದೈತ್ಯರು ಹೆದರಿ ಓಡಿ ಹೋಗುತ್ತಾರೆ. ವಿಷ್ಣುವಿನ ರೋಮಗಳಿಂದ ಹುಟ್ಟಿದುದರಿಂದ ದರ್ಭೆಯಲ್ಲಿ ವಿಷ್ಣು ಸಾನ್ನಿಧ್ಯವಿದೆ. ಆದುದರಿಂದ ದರ್ಭೆಯ ಸ್ಪರ್ಶಮಾತ್ರದಿಂದಲೇ ಮನುಷ್ಯನು ಸದ್ಗತಿ ಹೊಂದುತ್ತಾನೆ. ದರ್ಭೆಯ ಮೂಲ ಮಧ್ಯಾಗ್ರಗಳಲ್ಲಿ ತ್ರಿಮೂರ್ತಿ ಗಳಾದ ಬ್ರಹ್ಮ ವಿಷ್ಣು ಮಹೇಶ್ವರರ ಸಾನ್ನಿಧ್ಯವಿದೆ. ಹೀಗೆ ದರ್ಭೆ, ಅಗ್ನಿ ಮಂತ್ರಗಳು, ತುಳಸಿ, ಬ್ರಾಹ್ಮಣ ಮತ್ತು ಹಸುಗಳು ನಿತ್ಯ ಶುದ್ಧರು. ಇವುಗಳಿಗೆ ಮಾಲಿನ್ಯವಿಲ್ಲ. ಆದರೆ ಪಿಂಡಗಳಲ್ಲಿ (ಪ್ರೇತ ಪಿತೃ ಕಾರ್ಯಗಳಲ್ಲಿ) ಉಪಯೋಗಿಸಿದ ದರ್ಭೆ, ಪ್ರೇತ ಭೋಜನ ಮಾಡಿದ ಬ್ರಾಹ್ಮಣ, ಅನಧಿಕಾರಿಗಳು ಉಚ್ಚರಿಸಿದ ಮಂತ್ರ, ಕಟುಕರ ವಶದಲ್ಲಿದ್ದ ಹಸು ಕೊಳಚೆಯಲ್ಲಿದ್ದ ತುಳಸಿ ಮತ್ತು ಚಿತಾಗ್ನಿ ಇವು ಅಪವಿತ್ರವಾಗಿರುತ್ತವೆ.

ವೈಶ್ವದೇವದ ನಂತರ "ಒಂದು ಹಸುವಿನ ಹಾಲನ್ನು ಕರೆಯುವಷ್ಟು ಕಾಲ" ನಿರೀಕ್ಷಿಸಿ (ಬಂದ ಅತಿಥಿಗಳನ್ನು ಭೋಜನಾದಿಗಳನ್ನು ಸತ್ಕರಿಸಿ) ಗೋಗ್ರಾಸವನ್ನು ನೀಡಿದ ನಂತರವೇ ಮನೆಯ ಯಜಮಾನ ಊಟ ಮಾಡುವುದು ಪ್ರಾಚೀನ ಶಿಷ್ಟಾಚಾರ.

ಕರುವಿನೊಂದಿಗೆ ಒಂದಾದರೂ ಹಸುವಿರುವ ಮನೆಯು ಮಂಗಳ ಗೃಹವೆನಿಸುತ್ತದೆ. ಹಸುವಿನ ಅಂಬಾ ಧ್ವನಿ, ಮೆಲಕು ಹಾಕುವ ಶಬ್ದ, ಉಸಿರಾಟದ ಗಾಳಿ ಮನೆಯ ಸುತ್ತಲಿನ ವಾತಾವರಣವನ್ನು ಪರಿಶುದ್ಧಗೊಳಿಸುತ್ತದೆ. ಆದ್ದರಿಂದ ಮನೆಗೆ ತಾಕಿದಂತೆ ಗೋಶಾಲೆಗಳನ್ನು ಈಗಲೂ ಗ್ರಾಮಾಂತರ ಪ್ರದೇಶದ ಪ್ರಾಚೀನ ಮನೆಗಳಲ್ಲಿ ಕಾಣಬಹುದು. ಇಂತಹ ಮನೆಗಳಲ್ಲಿ ವಾಸಿಸುವರು ನಗರವಾಸಿಗಳಿಗಿಂತ ಹೆಚ್ಚು ಆರೋಗ್ಯವಂತರಾಗಿರುವುದನ್ನು ಕಾಣುತ್ತೇವೆ.

**ತತ್ಪುಣ್ಯಂ ಲಭತೇ ಪ್ರಾಜ್ಞಃ ಗೋಭ್ಯೋ ದತ್ವಾ ತೃಣಾನಿ ಚ ।**

ತೀರ್ಥಸ್ನಾನ, ಬ್ರಾಹ್ಮಣ ಭೋಜನ, ಸಕಲ ವಿಧ ವ್ರತೋಪವಾಸ, ತಪಸ್ಸು, ಮಹಾದಾನ ಭಗವತ್ಸೇವೆ, ಭೂಪರ್ಯಟನೆ, ವೇದಾಧ್ಯಯನ, ದೀಕ್ಷೆ ಮೊದಲಾದ ಪುಣ್ಯಾ ಚರಣೆಗಳಿಂದ ಸಿಗುವ ಪುಣ್ಯವು ಹಸುಗಳಿಗೆ ಹುಲ್ಲು ತಿನ್ನಿಸುವುದರಿಂದಲೇ ಸಿಗುತ್ತದೆ.

ಮಹಾ ಭಾರತದ ಅನುಶಾಸನ ಪರ್ವದಲ್ಲಿ ಅನೇಕ ಕಡೆ ಹಸುವಿನ ಮಹತ್ವವನ್ನು ಕುರಿತು ಉಲ್ಲೇಖವಿದೆ.

ಭೃಗುಪುತ್ರನಾದ ಚ್ಯವನ ಮಹರ್ಷಿ ತಾನು ಕೈಗೊಂಡ ಮಹಾವ್ರತದ ಸಫಲತೆಗಾಗಿ ಜಲಚರ ಪ್ರಾಣಿಗಳೊಂದಿಗೆ ಪ್ರಿಯದರ್ಶನನಾಗಿ ಸಮಾಧಿ ಸ್ಥಿತಿಯಲ್ಲಿ ಅನೇಕ ವರ್ಷ ಜಲಾಧಿವಾಸದಲ್ಲಿದ್ದ. ಬೆಸ್ತರ ಗುಂಪೊಂದು ಬೀಸಿದ ಬಲೆಯಲ್ಲಿ ಸಿಕ್ಕಿದ ಅನೇಕ ಮೀನು ಗಳೊಂದಿಗೆ ಚ್ಯವನನು ಮೇಲೆದ್ದು ಬಂದ. ದಡಕ್ಕೆ ಬಂದೊಡನೆ ಮೀನುಗಳೆಲ್ಲವೂ ಸತ್ತವು. ವಿಚಿತ್ರ ಸ್ಥಿತಿಯಲ್ಲಿದ್ದ ಚ್ಯವನ ನನ್ನು ಕಂಡು ತಿಳಿಯದೇ ಸಂಭವಿಸಿದ

ಅಚಾತುರ್ಯದಿಂದ ಭಯ ಭ್ರಾಂತರಾದ ಬೆಸ್ತರು ತಾವೇನು ಮಾಡಬೇಕೆಂದು ಆತನನ್ನು ಪ್ರಾರ್ಥಿಸಿದರು. ಅನೇಕ ವರ್ಷ ಸಹವಾಸದಲ್ಲಿದ್ದ ಜಲಚರಗಳನ್ನು ತ್ಯಜಿಸಲಾರೆನೆಂದೂ, ತನ್ನ ಸಾವು–ಬದುಕು ಇವುಗಳೊಂದಿಗೇ ಸರಿ ಎಂದು ಚ್ಯವನ ಹಟ ಹಿಡಿದು ಕುಳಿತು ಬಿಟ್ಟನು. ಬೆಸ್ತರು ಭಯದಿಂದ ರಾಜನಾದ ನಹುಷನಿಗೆ ಸಂಗತಿಯನ್ನು ನಿವೇದಿಸಿದರು. ಬೆಸ್ತರೊಡಗೂಡಿ ಮಹಾರಾಜನು ಚ್ಯವನನಿದ್ದಲ್ಲಿಗೆ ಬಂದು ಗೌರವದಿಂದ ಮಾತನಾಡಿಸಿದನು. ನಹುಷನೊಡನೆ ಸುದೀರ್ಘ ಸಂವಾದದ ನಂತರ ಚ್ಯವನನು ತನ್ನನ್ನು ಮೀನುಗಳನ್ನೂ ಕೊಂಡುಕೊಳ್ಳುವಂತೆ ಸೂಚಿಸುತ್ತಾನೆ. ಸಾವಿರ, ಲಕ್ಷ, ಕೋಟಿ ನಾಣ್ಯಗಳಿಂದಾಗಲೀ, ಅರ್ಧ ಅಥವಾ ಪೂರ್ಣ ರಾಜ್ಯದಿಂದಗಲೀ ತನ್ನನ್ನು ಕೊಂಡುಕೊಳ್ಳಲಾಗದೆಂದು ಚ್ಯವನ ರಾಜನೊಂದಿಗೆ ತರ್ಕಿಸುತ್ತಾನೆ. ಅಷ್ಟರಲ್ಲಿ ಅತ್ಯಂತ ಸಾತ್ವಿಕನಾದ ಗೋಪುತ್ರನೆಂಬ ಬ್ರಾಹ್ಮಣನ ಅಗಮನವಾಗುತ್ತದೆ. ನಹುಷನ ಪ್ರಾರ್ಥನೆಯ ಮೇರೆಗೆ ಗೋಪುತ್ರನು ಹೀಗೆ ಹೇಳುತ್ತಾನೆ.

"ಬ್ರಾಹ್ಮಣ ಶ್ರೇಷ್ಠರಿಗೂ ಗೋವುಗಳಿಗೂ ಬೆಲೆಕಟ್ಟಲು ಸಾಧ್ಯವಿಲ್ಲ ಆದುದರಿಂದ ಒಂದು ಉತ್ತಮವಾದ ಹಸುವನ್ನು ಚ್ಯವನನ ಮೌಲ್ಯವೆಂದು ನಿಶ್ಚಯಿಸು"ಗೋಪುತ್ರನ ಮಾತಿನಿಂದ ಸಂತುಷ್ಟನಾದ ರಾಜನು ಬೆಸ್ತರಿಗೆ ಹಸುವನ್ನು ನೀಡಿ ಚ್ಯವನನನ್ನು ಕೊಂಡು ಕೊಂಡನು. ಆಗ ಚ್ಯವನನು ಗೋವಿನ ಮಹಾತ್ಮೆಯನ್ನು ವಿವರಿಸುತ್ತಾನೆ.

**ಗಾವೋ ಲಕ್ಷ್ಮ್ಯಾಃ ಸದಾ ಮೂಲಂ ಗೋಷು ಪಾಪ್ಮಾನ ವಿದ್ಯತೇ ।**
**ಅನ್ನಮೇವ ಸದಾ ಗಾವಃ ದೇವಾನಾಂ ಪರಮಂ ಹವಿಃ ॥**
**ತೇಜಸಾ ವಪುಷಾ ಚೈವ ಗಾವೋ ವಹ್ನಿಸಮಾಭುವಿ ।**
**ಗಾವಃ ಕಾಮದುಹೋ ದೇವ್ಯಃ ನಾನ್ಯತ್ಕಿಂಚಿತ್ಪರಂ ಸ್ಮೃತಂ ॥**

ಹಸುಗಳು ಸಕಲ ಸಂಪತ್ತಿಗೂ ಮೂಲ ಕಾರಣವಾಗಿದೆ. ಅವುಗಳಲ್ಲಿ ಪಾಪ ಲೇಶವೂ ಇಲ್ಲ. ಗೋವುಗಳುಮನುಷ್ಯರಿಗೆ ಮಾತೃ ಸ್ವರೂಪಗಳಾಗಿವೆ ಮತ್ತು ದೇವತೆಗಳಿಗೆ ಬೇಕಾದ ಪ್ರಧಾನ ಹವಿಸ್ಸನ್ನು ಅಂದರೆ ತುಪ್ಪವನ್ನು ನೀಡುತ್ತವೆ ಅಗ್ನಿಗೆ ಸಮಾನವಾದ ತೇಜೋರಾಶಿಯುಳ್ಳ ಈ ಹಸುಗಳು ಪ್ರಾಣಿಗಳಿಗೆ ಸಮಸ್ತ ಸುಖವನ್ನು ನೀಡುತ್ತವೆ. ಸ್ವರ್ಗಕ್ಕೆ ಸೋಪಾನ ರೂಪವಾದ ಈ ಗೋವುಗಳು ಸಮಸ್ತ ಕಾಮನೆಗಳನ್ನು ಪೂರೈಸುವ ದೇವತೆಗಳು.

ಗೋವುಗಳ ಸಮ್ಮತಿಯನ್ನು ಪಡೆದು ಲಕ್ಷ್ಮಿ ಗೋಮೂತ್ರ –ಗೋಮಯದಲ್ಲಿ ನೆಲಸಿದ ಇನ್ನೊಂದು ಸ್ವಾರಸ್ಯದ ಕಥೆ ಮಹಾಭಾರತದ ಅನುಶಾಸನ ಪರ್ವದಲ್ಲಿದೆ.

ಒಮ್ಮೆ ಮಹಾಲಕ್ಷ್ಮಿ ಸುಂದರ ರೂಪ ಧರಿಸಿ ಗೋಶಾಲೆಯನ್ನು ಪ್ರವೇಶಿಸಿದಳು. ಲಕ್ಷ್ಮಿಯ ರೂಪ ಸಂಪತ್ತಿಗೆ ಅಚ್ಚರಿಗೊಂಡ ಹಸುಗಳು ಆಕೆಯ ಪರಿಚಯವನ್ನು ಪ್ರಶ್ನಿಸಿದವು. ಲಕ್ಷ್ಮಿ ತನ್ನನ್ನು ಹೀಗೆ ಪರಿಚಯಿಸಿಕೊಳ್ಳುತ್ತಾಳೆ "**ನಾನು ಶ್ರೀಃ**" ದೈತ್ಯರ ಹತ್ತಿರವಿದ್ದ ನಾನು ಅವರನ್ನು ತ್ಯಜಿಸಿ ಬಂದಿದ್ದೇನೆ. ಇದರಿಂದಾಗಿ ಅವರು ಹಾಳಾಗುತ್ತಾರೆ. ನಾನು ಇಂದ್ರಾದಿ ಸಕಲ ದೇವತೆಗಳಿಗೆ ಬೇಕಾದವಳು. ನಾನಿದ್ದಲ್ಲಿ ಸುಖ ಶಾಂತಿ ನೆಲಸಿರುತ್ತದೆ. ನಾನು ನಿಮ್ಮೆಲ್ಲರ ಶರೀರದಲ್ಲಿ ಶಾಶ್ವತವಾಗಿ ನೆಲಸಲು ಬಂದಿರುತ್ತೇನೆ.



ಚಂಚಲೆಯಾದ ಲಕ್ಷ್ಮಿಯನ್ನು ಗೋವುಗಳು ತಿರಸ್ಕರಿಸುತ್ತವೆ. ದೇವದಾನವ ಗಂದರ್ವರೇ ಮೊದಲಾದಂತೆ ನಿರಂತರ ತಪಸ್ಸು ಮಾಡಿ ತನ್ನ ಸಾನ್ನಿಧ್ಯವನ್ನು ಬಯಸುತ್ತಿರುವಾಗ "ಆಹ್ವಾನವಿಲ್ಲದಂತೆ ಬೇರೆಯವರ ಮನೆಗೆ ಬಂದುದರಿಂದ" ಅವಮಾನವನ್ನು ಸಹಿಸದೆ ಲಕ್ಷ್ಮೀದೇವಿ

**ನವೋಽಸ್ತಿ ಕುತ್ಸಿತಂ ಕಿಂಚಿದಂಗೇಷ್ವಾ ಲಕ್ಷ್ಯತೇಽನಘಾಃ ।**
**ಪುಣ್ಯಾಃ ಪವಿತ್ರಾಃ ಸುಭಗಾಃ ಮಮಾದೇಶಂ ಪ್ರಯಚ್ಛಥ ।**
**ವಸೇಯಂ ಯತ್ರ ವೋ ದೇಹೇ ತನ್ಮೇ ವ್ಯಾಖ್ಯಾತು ಮರ್ಹಥ ।**

"ಪಾಪರಹಿತವಾದ ಗೋವುಗಳೇ, ನೀವು ಪವಿತ್ರರು. ನಿಮ್ಮ ಯಾವುದೇ ಅಂಗದಲ್ಲಿ ಕುತ್ಸಿತವೆಂಬುದಿಲ್ಲ. ನಿಮ್ಮ ಯಾವುದಾದರೂ ಅಂಗದಲ್ಲಿ ನನಗೆ ವಾಸಮಾಡಲು ಅನುಮತಿ ನೀಡಿರಿ" ಎಂದು ಪ್ರಾರ್ಥಿಸುತ್ತಾಳೆ.

ಶುಭ ಸ್ವರೂಪಗಳಾದ ಎಲ್ಲಾ ಹಸುಗಳೂ ಪರಸ್ಪರ ಸಮಾಲೋಚನೆಯ ನಂತರ ಶ್ರೀಲಕ್ಷ್ಮಿಯನ್ನು ಕುರಿತು ಹೀಗೆ ಹೇಳಿದವು

**ಅವಶ್ಯಂ ಮಾನನಾ ಕಾರ್ಯಾ ತವಾಸ್ಮಾಭಿರ್ಯಶಸ್ವಿನಿ ।**
**ಶಕೃನ್ಮೂತ್ರೇ ನಿವಾಸ ತ್ವಂ ಪುಣ್ಯಮೇತದ್ಧಿ ನಃ ಶುಭೇ ॥**

"ಹಾಗಾದರೇ ನಾವು ನಿನ್ನನ್ನು ಸಂಮಾನಿಸಬೇಕು ನೀನು ನಮ್ಮ ಪರಮ ಪವಿತ್ರವಾದ ಸೆಗಣಿ–ಗಂಜಲಗಳಲ್ಲಿ ವಾಸಮಾಡು". ಅದರಂತೆ ತಾನು ಗೋಮಯ–ಗೋಮೂತ್ರಗಳಲ್ಲಿ ನಿತ್ಯ ಸಾನ್ನಿಧ್ಯದಲ್ಲಿರುವುದಾಗಿ ತಿಳಿಸಿ ಶ್ರೀಲಕ್ಷ್ಮಿ ಅಂತರ್ಧಾನಳಾದಳು. ಹೀಗೆ ಹಸುವಿನ ಸೆಗಣಿ ಮತ್ತು ಗಂಜಲ ಎಂದೆಂದಿಗೂ ಪವಿತ್ರವಾಗಿವೆ. ಲಕ್ಷೀಸ್ವರೂಪವಗಿವೆಯೆಂದು ನಮ್ಮ ಭಾವನೆಯಾಗಿದೆ. ಮೃತರ ಸದ್ಗತಿಗಾಗಿ ಸಾಲಂಕೃತ ಗೋದಾನ ಮಾಡುವುದು ರೂಢಿಯಲ್ಲಿದೆ.

'ಬ್ರಾಹ್ಮಣ' ಶಬ್ದದ ಮೂಲ 'ಬ್ರಹ್ಮ'. ಈ ಪದ ಸಂಸ್ಕೃತದಲ್ಲಿ ಪುಲ್ಲಿಂಗ ಮತ್ತು ನಪುಂಸಕ ಲಿಂಗದಲ್ಲಿ ಬೇರೆ ಬೇರೆ ಅರ್ಥದಲ್ಲಿ ಪ್ರಚಲಿತವಿದೆ. ಪುಲ್ಲಿಂಗದಲ್ಲಿ 'ಬ್ರಹ್ಮಾ' ಅಂದರೆ ತ್ರಿಮೂರ್ತಿಗಳಲ್ಲೊಬ್ಬನಾದ ಸೃಷ್ಟಿಕರ್ತ ಬ್ರಹ್ಮ–ನಪುಂಸಕಲಿಂಗದಲ್ಲಿ 'ಬ್ರಹ್ಮ' ಅನಾದ್ಯಂತ ಜ್ಞಾನೈಕಗಮ್ಯ ಎಂಬಿತ್ಯಾದಿ ವೇದಾಂತಿಗಳು ಚರ್ಚಿಸುವ ಬ್ರಹ್ಮ. ಈ ಶಬ್ದಕ್ಕೆ 'ವೇದಗಳು' ಎಂದೂ ವ್ಯವಹಾರವಿದೆ. ವೇದಗಳಿಂದ ಮಾತ್ರವೇ ಪರಬ್ರಹ್ಮನನ್ನು ತಿಳಿಯಬಹುದೆಂದು ಶಾಸ್ತ್ರವಚನ. ಏಕೆಂದರೆ ಈ ಅನಂತವಾದ ವೇದರಾಶಿ ಬ್ರಹ್ಮನ ಮುಖಾರ ವಿಂದದಿಂದ ಹೊರಹೊಮ್ಮಿದುದು ಎಂಬುದು ಪ್ರಾಚೀನ ಸಿದ್ಧಾಂತ. ನಿರಂತರ ಪರಬ್ರಹ್ಮನ ಚಿಂತನೆಯಲ್ಲಿದ್ದು ವೇದಾಧ್ಯಯನ ಸಂಪನ್ನನಾದವನು ಬ್ರಾಹ್ಮಣ. "**ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ**" ಸ್ವರ್ಗ ಕಾಮನೆಗಳನ್ನು ಅಂದರೆ ಮೋಕ್ಷ ಪ್ರಾಪ್ತಿಗಾಗಿ ಜ್ಯೋತಿಷ್ಟೋಮಾದಿಯಾಗಗಳನ್ನು ಅನುಷ್ಠಿಸಬೇಕೆಂದು ಧರ್ಮಶಾಸ್ತ್ರ ಹೇಳುತ್ತದೆ. ಈ ಧರ್ಮ ಶಾಸ್ತ್ರಕ್ಕೆ ವೇದಗಳೇ ಪ್ರಮಾಣ. ಈ ವೇದಗಳನ್ನು ಅಧ್ಯಯನ ಮಾಡಿ ನಿತ್ಯಾನು ಷ್ಠಾನ ಮಾಡುವ ಬ್ರಾಹ್ಮಣರನ್ನು ತನ್ನ ಚಂಪೂ ರಾಮಾಯಣ ಕಾವ್ಯಾರಂಭದಲ್ಲಿ ಭೋಜರಾಜ ವಂದಿಸುತ್ತಾನೆ.

**ಪರಬ್ರಹ್ಮ** ಸಕ್ಷಾತ್ಕಾರಕ್ಕೆ ವೇದಗಳೇ ಮಾಧ್ಯಮ. ಇಂತಹ ವೇದಗಳನ್ನು ನಿರಂತರ ಅಧ್ಯಯನ ಮಾಡುವವರು ಮಾಡಿದ ಆಶೀರ್ವಾದ ಫಲಿಸುತ್ತದೆ. "**ಋಷೀಣಾಂ ಪುನರಾದ್ಯಾನಾಂ ವಾಚಮಾರ್ಥೋಽನುಧಾವತಿ**" ಎಂಬ ಉಕ್ತಿಯಂತೆ ಇವರಾಡಿದ ಮಾತು ಸಿದ್ಧಿಸುತ್ತದೆ. "**ದೈವಾಧೀನಂ ಜಗತ್ಸರ್ವಂ ಮಂತ್ರಾಧೀನಂ ತು ದೈವತಂ। ತನ್ಮಂತ್ರಂ ಬ್ರಾಹ್ಮಣಾಧೀನಂ ಬ್ರಾಹ್ಮಣೋ ಮಮ ದೈವತಂ**" "ಈ ಜಗತ್ತು ಭಗವಂತನ ನಿಯಂತ್ರಣದಲ್ಲಿದೆ. ಭಗವಂತ ಮಂತ್ರಗೋಚರ. ಈ ಮಂತ್ರಗಳು ಬ್ರಾಹ್ಮಣರ ಆಧೀನ ಅದುದರಿಂದ ಬ್ರಾಹ್ಮಣರು ನನ್ನ ದೇವರು" ಎಂಬುದು ಭಗದ್ವಾಣಿ ಎಂದು ಹೇಳಲಾಗಿದೆ. "**ಯಾವತೀರ್ವೈ ದೇವತಾಸ್ತಾಸ್ಸರ್ವಾವೇದವಿದಿ ಬ್ರಾಹ್ಮಣೇವಸಂತಿ. ತಸ್ಮಾದ್ಬ್ರಾಹಣೇಭ್ಯೋ ವೇದ ವಿದ್ಭ್ಯೋ ದಿವೇದಿವೇ ನಮಸ್ಕುರ್ಯಾತ್**" ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರು ದೇವತಾ ಸ್ವರೂಪರು ಎಂಬುದು ಯಜುರ್ವೇದದ ಮಂತ್ರ.

ವಸಿಷ್ಠರ ನಂದಿನಿಯ ನೆಪದಲ್ಲಿ ರಾಜರ್ಷಿಯಾದ ವಿಶ್ವಾಮಿತ್ರರು ಬ್ರಹ್ಮರ್ಷಿ ವಸಿಷ್ಠರೊಂದಿಗಿನ ಕದನದಲ್ಲಿ ತಪೋಲಬ್ಧವಾದ ತಮ್ಮ ಸಮಸ್ತ ಶಸ್ತ್ರಾಸ್ತ್ರಗಳನ್ನು ಪ್ರಯೋಗಿಸುತ್ತಾರೆ. ವಿಶ್ವಾಮಿತ್ರರ ಸಕಲ ಶಸ್ತ್ರಾಸ್ತ್ರಗಳ ಶಕ್ತಿ ವಸಿಷ್ಠರ ಬ್ರಹ್ಮದಂಡದಲ್ಲಿ ಲಯವಾಗುತ್ತದೆ. ಬ್ರಹ್ಮಶಕ್ತಿಯಲ್ಲಿ ಕ್ಷಾತ್ರ ತೇಜಸ್ಸು ಅಡಗಿ ಹೋಗುತ್ತದೆ. "ಧಿಗ್ಬಲಂ ಕ್ಷತ್ರಿಯ ಬಲಂ ಬ್ರಹ್ಮ ತೇಜೋ ಬಲಂ ಬಲಂ" ಎಂದು ಉದ್ಗರಿಸಿದ ವಿಶ್ವಾಮಿತ್ರರು ಬ್ರಹ್ಮರ್ಷಿಯಾಗಲು ತಪೋನಿರತರಾಗುತ್ತಾರೆ. ಮಂತ್ರಾನುಷ್ಠಾನದ ಬ್ರಹ್ಮತೇಜಸ್ಸಿನ ಮುಂದೆ ಜಗತ್ತಿನ ಬೇರೆ ಯಾವುದೇಶಕ್ತಿಯೂ ನಿಲ್ಲಲಾರದೆಂಬ ಈ ದೃಷ್ಟಾಂತ ಕತೆ ಅರಿಯ ದವರಿಲ್ಲ. ಇದೇ ವಿಶ್ವಾಮಿತ್ರರು ತಮ್ಮ ತಪೋನುಷ್ಠಾನ ಬಲದಿಂದ "**ಅನ್ಯಮಿಂದ್ರಂ ಕರಿಷ್ಯಾಮಿ**" ಎಂದು ಘೋಷಿಸಿ ತ್ರಿಶಂಕುವಿಗಾಗಿ ಹೊಸದಾಗಿ ಪ್ರತ್ಯೇಕ ಸ್ವರ್ಗಲೋಕವನ್ನೇ ಸೃಷ್ಟಿಸಿದ ಕತೆಯೂ ಎಲ್ಲರಿಗೂ ಗೊತ್ತಿರುವುದೇ.

ಅಂತಃಕರಣ ಮತ್ತು ಇಂದ್ರಿಯಗಳ ನಿಗ್ರಹ, ಧರ್ಮಪರಿಪಾಲನೆಗಾಗಿ ಕಷ್ಟದ ಸಹಿಷ್ಣುತೆ, ನಿತ್ಯ ಶುದ್ಧತೆ, ಕ್ಷಮಾಶೀಲತೆ, ವೇದಶಾಸ್ತ್ರ, ದೇವರು ಪರಲೋಕಾದಿಗಳಲ್ಲಿ ಶ್ರದ್ಧೆ, ವೇದಾಧ್ಯಯನ, ಅಧ್ಯಾಪನ, ಪರಮಾತ್ಮ ತತ್ತ್ವದ ಅನುಭವ-ಇವು ಬ್ರಾಹ್ಮಣರ ಲಕ್ಷಣ ಗಳೆಂದು ಗೀತಾಚಾರ್ಯನ ವಚನ (ಭಗವದ್ಗೀತೆ ೧೮-೪೨). ಸಮಾಜದ ಮೇಲೆ ಈ ಎಲ್ಲಾ ಅದರ್ಶ ಸಂಗತಿಗಳ ಪ್ರಭಾವ ಬೀರುವುದು ಬ್ರಾಹ್ಮಣ ಧರ್ಮ.

ಹಿಂದಿನ ಕಾಲದಲ್ಲಿ ಬ್ರಾಹ್ಮಣರು ತಮ್ಮ ವೇದಶಾಸ್ತ್ರಧ್ಯಯನ-ಅಧ್ಯಾಪನಾದಿ ನಿತ್ಯ ಕರ್ಮಾನುಷ್ಠಾನದೊದಿಗೆ ಶ್ರೌತ - ಸ್ಮಾರ್ತ ಕರ್ಮಗಳಲ್ಲೇ ನಿರತರಾಗಿರುತ್ತಿದ್ದರು. ಇವರ ಅನುಷ್ಠಾನಗಳು, ಚಟುವಟಿಕೆಗಳೆಲ್ಲದರ ಸಂಕಲ್ಪ "**ಆಸೇತು ಸಿತಾಚಲಾಂತರ್ವರ್ತಿ ಸಮಸ್ತ ಜೀವಿನಾಂ**" ಸಮಸ್ತ ಶ್ರೇಯಸ್ಸೊಂದೇ ಆಗಿತ್ತು. ಇವರ ಸತ್ಸಂಗದ ಪೂರ್ಣಫಲ ಸಕಲ ಜೀವಿಗಳಿಗೂ ಸಿಗುತ್ತಿತ್ತು. ಹಾಗಾಗಿ ಎಲ್ಲರೂ ಸ್ವಾಭಾವಿಕವಾಗಿ ಇವರ ಶ್ರೇಯಸ್ಸನ್ನು ಬಯಸುತ್ತಿದ್ದರು ಮತ್ತು ಇವರ ಕುಟುಂಬ ನಿರ್ವಹಣೆಯ ಎಲ್ಲ ಅವಶ್ಯಕತೆಗಳನ್ನು ಋಷಿಯಿಂದ, ಸ್ವಯಂಸ್ಫೂರ್ತಿಯಿಂದ ಪೂರೈಸುತ್ತಿದ್ದರು. ಬ್ರಾಹ್ಮಣರು ನಿರ್ಲಿಪ್ತರಾಗಿ



ಲೋಕಕಲ್ಯಾಣ ಚಿಂತನೆಯಲ್ಲೇ ನಿರತರಾಗಿರುತ್ತಿದ್ದರು. ಸಮಾಜದಲ್ಲಿ ಸುಖ ಶಾಂತಿ ನೆಲೆಸಿರುತ್ತಿತ್ತು.

**ಸ್ವಾಮಿ ಹರ್ಷಾನಂದರು ಬ್ರಾಹ್ಮಣರ ಲಕ್ಷಣವನ್ನು ಹೀಗೆ ನಿರೂಪಿಸುತ್ತಾರೆ.**

"The Brahmanas were the custodians of knowledge. They had to learn and teach, not only spiritual wisdom, but also other branches of science and arts. They were priests, preceptors and preachers. Being the custodians of the intellectual and spiritual heritage of the race, they had to guide the rulers of the land, expound and administrator laws as also assist in carrying out the legislative policies".

ಬ್ರಾಹ್ಮಣರು ಜ್ಞಾನದ ಭಂಡಾರ. ಆಧ್ಯಾತ್ಮಿಕ ಜ್ಞಾನವಲ್ಲದೆ, ವಿಜ್ಞಾನ ಮತ್ತು ಕಲೆಯ ಇತರೆ ಶಾಖೆಗಳನ್ನು ಅಭ್ಯಸಿಸಿ ಬೋಧಿಸಬೇಕಾಗಿತ್ತು. ಅವರು ಅರ್ಚಕರು, ಬೋಧಕರು ಮತ್ತು ಧರ್ಮೋಪದೇಶಕರಾಗಿದ್ದರು. ಅವರು ಪರಂಪರಾಗತವಾಗಿ ಬೌದ್ಧಿಕ, ಧಾರ್ಮಿಕ, ಮತ್ತು ಆಧ್ಯಾತ್ಮಿಕ ತತ್ವಗಳ ಸಂರಕ್ಷಕರಾಗಿದ್ದುದರಿಂದ ರಾಜ್ಯವನ್ನಾಳುವ ರಾಜಮಹಾರಾಜ ರಿಗೆ ರಾಜನೀತಿಯನ್ನು ವ್ಯಾಖ್ಯಾನಿಸಿ ಆಡಳಿತ ನಡೆಸಲು ಮಾರ್ಗದರ್ಶನ ಮಾಡಬೇಕಿತ್ತು.

**ಹೀಗೆ ಜನರ ಬದುಕಿನ ಸಮಸ್ತ ಬೇಕು ಬೇಡಗಳನ್ನು ಪೂರೈಸುವ 'ಕಾಮ-ಧೇನು'ವೆನಿಸಿ ಸಕಲ ಸಂಪತ್ತೇ ಮೂರ್ತಿಭವಿಸಿದಂತಿರುವ ಹಸುಗಳು ಸುಖವಾಗಿದ್ದರೆ ಲೋಕಕ್ಕೆ ಸುಖ. ನಿರಂತರ ಸಮಸ್ತ ಜೀವಿಗಳ ಒಳಿತನ್ನು ಬಯಸುವ, ಭೂ ದೇವತೆ ಯೆಂದು ಕರೆಸಿಕೊಳ್ಳುವ ಬ್ರಾಹ್ಮಣರು ಯಾವಾಗಲೂ ಸಕಲ ಜೀವರಾಶಿಯ ಒಳಿತನ್ನೇ ಬಯಸುತ್ತಾ ಷಟ್ಕರ್ಮನಿರತ ರಾಗಿದ್ದರೆ ಲೋಕ ಕಲ್ಯಾಣವೆಂಬ ಉಕ್ತಿ ಅರ್ಥಪೂರ್ಣ.**

ಆದರೆ ಆಹಾರ-ವಿಹಾರ, ಸುತ್ತಲಿನ ಪರಸರ, ಜೀವಿಗಳ ಜೀವನಶೈಲಿ ಕಾಲಗತಿ ಗಳನ್ನನು ಸರಿಸಿ ಕಾಲಕಾಲಕ್ಕೆ ಜನರ ಆಚಾರ-ವಿಚಾರ, ನಂಬಿಕೆಗಳು, ಮಾನಸಿಕ ಸ್ಥಿತಿ ಬದಲಾಗುತ್ತಾ ಹೋಗುವುದೇ ಕಾಲಧರ್ಮ. ಆದುದರಿಂದ ಲೇಖಕನ ವಿಚಾರಗಳು ಹೇಗೆ ಪ್ರಸ್ತುತ, ಎಷ್ಟು ಅಪ್ರಸ್ತುತ ಮತ್ತು ವ್ಯವಹಾರ ಸಾಧ್ಯತೆಯ ಬಗ್ಗೆ ಓದುಗರು ಚಿಂತಿಸಬೇಕು.

**ಕಾಮಧೇನು: ಹಸುವನ್ನು ವರ್ಣಿಸುವ ಋಗ್ವೇದದ ಒಂದು ಮಂತ್ರ -**

**ಮಾತಾ ರುದ್ರಾಣಾಂ ದುಹಿತಾ ವಸೂನಾಂ ಸ್ವಸಾದಿತ್ಯಾನಾ ಮಮೃತಸ್ಯ ನಾಭಿಃ ॥**

ಈ ಹಸುವು (ಶಿವು, ಶಂಭು, ಪಿನಾಕ, ಗಿರೀಶ, ಹರ, ಸ್ಥಾಣು, ಭರ್ಗ, ಭೈರವ, ಸದಾಶಿವ, ಕಪಾಲಿ, ಈಶ್ವರ) ಏಕಾದಶ ರುದ್ರರಿಗೆ ತಾಯಿ. (ಅನಲ, ಅನಿಲ, ಪ್ರತ್ಯೂಷ, ಪ್ರಭಾಸ, ದ್ರೋಣ, ಸೋಮ, ಆದ್ವರ, ಧ್ರುವ) ಅಷ್ಟವಸುಗಳಿಗೆ ಮಗಳು. (ಮಿತ್ರ, ಅರ್ಯಮಾ, ತ್ವಷ್ಟ್ರ, ಧಾತೃ, ವಿವಸ್ವತ್, ಅರುಣ, ಭಗ, ಅಂಶುಮಾನ್, ಇಂದ್ರ, ಪರ್ಜನ್ಯ, ವಿಷ್ಣು, ಪೂಷಾ) ದ್ವಾದಶ ಆದಿತ್ಯರ ಸಹೋದರಿ, ಈಕೆ ಅಮರತ್ವ ಪ್ರಾಪ್ತಿಗೆ ಕಾರಣಳು.

**ಅಗ್ನಿರಾಸೀನ ಉತ್ಥಿತೋಶ್ವಿನಾ ॥19॥**
**ಇಂದ್ರಃ ಪ್ರಾಂಜ್ ತಿಷ್ಠನ್ ಧಾತೋದಜ್ ತಷ್ಠಂತ್ಸವಿತಾ ॥20॥**

**ಪ್ರತ್ಯಙ್ ತಿಷ್ಠನ್ ಧಾತೋದಙ್ ತಿಷ್ಠಂತ್ಸವಿತಾ ॥21॥**
**ತೃಣಾನಿ ಪ್ರಾಪ್ತಃ ಸೋಮರಾಜಾ ॥22॥**
**ಮಿತ್ರೇಕ್ಷಮಾಣ ಆವೃತ್ತ ಆನಂದಃ ॥23॥**
**ಯುಜ್ಯಮಾನೋ ವೈಶ್ವದೇವೋ ಯುಕ್ತಃ ಪ್ರಜಾಪತಿರ್ವಿಮುಕ್ತಃ ಸರ್ವಮ್ ॥24॥**
**ಏತದ್‌ವೈವಿಶ್ವರೂಪಂ ಸರ್ವರೂಪಂ ಗೋರೂಪಮ್ ॥25॥**

ವಿವಿಧ ದಿಕ್ಕುಗಳಲ್ಲಿರುವ ಭಗವದ್ರೂಪಗಳಾದ ಇಂದ್ರ, ಯಮ, ಧಾತ, ಸವಿತಾ, ಸೋಮ – ಹೀಗೆ ಏಕ ಮೇವ ಈಶ್ವರನ ವಿವಿಧ ಸ್ವರೂಪ ಗುಣಗಳನ್ನು ಈ ಗೋವು ಪ್ರತಿನಿಧಿಸುತ್ತದೆ. ಈ ಹಸುವು ಮಿತ್ರ, ಆನಂದ, ವಿಶ್ವೇದೇವತೆಗಳು, ಪ್ರಜಾಪತಿ ಹಾಗೂ ಅಖಂಡ ಪರಬ್ರಹ್ಮ ಸ್ವರೂಪವೇ ಅಗಿದೆ.

ಈ ಹಸುವು "**ಪ್ರಥಮಾಶತೌದನಾ**" – ನೂರಾರು ಜನರಿಗೆ ಅನ್ನವನ್ನುಣಿಸುತ್ತದೆ.

"ಭ್ರಾತೃದೃಘ್ನೀಯಜಮಾನಸ್ಯಗಾತುಃ – ಶತ್ರು ಸಂಹಾರ ಮಾಡಿ ಯಜಮಾನನನ್ನು ರಕ್ಷಿಸುತ್ತದೆ.

ಅಥರ್ವವೇದದ ೯ನೇ ಕಾಂಡದ ಇಪ್ಪತ್ತಾರು ಮಂತ್ರಗಳ ಈ ೭ನೇ ಸೂಕ್ತಿ ಗೋವಿನ ವಿಶ್ವರೂಪವನ್ನು ವರ್ಣಿಸುತ್ತದೆ. **ಆದುದರಿಂದ ಗೋವಿಗೆ "ಕಾಮ–ಧೇನು" (ಸಕಲ ಇಷ್ಟಾರ್ಥಗಳನ್ನು ಸಲ್ಲಿಸುವ ಹಸು) ಎಂಬ ಹೆಸರು ಅನ್ವರ್ಥ.**

**ಪಂಚಗವ್ಯ :** ಗವ್ಯ ಅಂದರೆ ಹಸುವಿಗೆ ಸಂಬಂಧಿಸಿದುದು, ಪಂಚ ಅಂದರೆ ಐದು. ಹಾಲು, ಮೊಸರು, ತುಪ್ಪ, ಗೋಮೂತ್ರ, ಗೋಮಯ – ಈ ಐದು ಪರಮ ಪವಿತ್ರವೆಂದು ನಾವು ನಂಬಿಕೊಂಡು ಬಂದಿದ್ದೇವೆ. ಭಾವನಾತ್ಮಕವಾಗಿಯೂ ವೈಜ್ಞಾನಿಕವಾಗಿಯೂ ಈ ನಂಬಿಕೆಗೆ ಅತ್ಯಂತ ಮಹತ್ವವಿದೆ.

ಹಿಂದೆ ಬಂಗಾಳ, ಕೇರಳಗಳಂತೆ ಕರಾವಳಿ ಪ್ರದೇಶದ ಜನರೂ ಬೌದ್ಧಿಕವಾಗಿ ಸ್ವಲ್ಪ ಮುಂದುವರಿದಿದ್ದರು. ಅದರೆ ಇಲ್ಲಿನ ಸೋಮಾರಿಗಳನ್ನು ಒಂದು ರೀತಿಯಲ್ಲಿ ಅಪಹಾಸ್ಯ ಮಾಡುವಂತೆ "ನಿನಮಂಡೆ ವಳ್ಗೆ ಬರೀ ಸಗ್ಣಿಯೇ ಇಪ್ದನಾಽ, ಎಲ್ಲಾದರೂ ದನ ಮೇಯ್ಲಾಕ್ ಹೋಗಾಽ" ಎಂದು ಛೇಡಿಸುತ್ತಿದ್ದರು. ಶ್ರದ್ಧೆಯಿಂದ ಗೋಸೇವೆ ಮಾಡಿದರೆ, ಹಸುವಿನ ಹಿಂದೆ ಮುಂದೆ ಸುತ್ತಾಡಿದರೆ, ಗಂಜಲ–ಸೆಗಣಿಯನ್ನು ತುಳಿದಾಡಿದರೆ, ಹಸುವಿನ ಹಾಲು ಮೊದಲಾದ ಉತ್ಪನ್ನಗಳನ್ನು ನಿಯತವಾಗಿ ಸೇವಿಸಿದರೆ ಮಂಕುದೂರ ವಾಗಿ ಬೌದ್ಧಿಕ ವಿಕಾಸವಾಗುತ್ತದೆಂಬುದು ಈ ಮಾತಿನ ಮಾರ್ಮಿಕ ಅರ್ಥ. ಏಕೆಂದರೆ ಅವತಾರ ಪುರುಷನಾದ "ಗೋ–ಪಾಲ–ಕೃಷ್ಣ" ಜಗದ್ಗುರು. ಅವನು ದಡ್ಡನಲ್ಲ.

**ಹಾಲು:** ಹಸುವಿನ ಹಾಲು ಆಬಾಲವೃದ್ಧರಿಗೆ ಜರಾವ್ಯಾಧಿ ನಾಶಕ ಮತ್ತು ಬುದ್ಧಿ ವರ್ಧಕ, ಉಬ್ಬಸ, ಕೆಮ್ಮು, ರಕ್ತಪಿತ್ತ, ತಲೆ, ತಿರುಗು ಮತ್ತು ಅತಿಹಸಿವನ್ನು ಇದು ನಿಯಂತ್ರಿ ಸುತ್ತದೆ. ಇದರಲ್ಲಿ ನ 'ಎ' ಜೀವಸತ್ವ ಕಣ್ಣಿನ ದೃಷ್ಟಿ ಮತ್ತು ರೋಗ ನಿರೋಧಕ ಶಕ್ತಿಗೆ ಸಹಕಾರಿಯಾಗಿದೆ.



**ಮೊಸರು:** ಹಸುವಿನ ಮೊಸರು ಬಲವರ್ಧಕ, ವಾತಹರ ಮತ್ತು ರಕ್ತಶೋಧಕ, ಮಜ್ಜಿಗೆ ತ್ರಿದೋಷಹರ, ಬುದ್ಧಿ ಪ್ರಚೋದಕ ಅಲ್ಲದೆ ಉದರ ವಿಕಾರ ಮತ್ತು ಮೂಲವ್ಯಾಧಿ ಚಿಕಿತ್ಸೆ ಯಲ್ಲಿ ಇದರ ಬಳಕೆಯಾಗುತ್ತದೆ. ಮದುಮೇಹ ನಿಯಂತ್ರಣದಲ್ಲೂ ಇದು ಸಹಕಾರಿ.

**ತುಪ್ಪ:** ನಿತ್ಯ ನೈಮಿತಿಕ ಹೋಮಗಳಲ್ಲಿ ಅನಿವಾರ್ಯ. ಬೇರೆ ಬೇರೆ ದ್ರವ್ಯಗಳನ್ನು ಹೋಮಿಸುವಾಗಲೂ ಜತೆಗೆ ತುಪ್ಪವನ್ನು ಹೋಮಿಸಲೇಬೇಕು. ನಿರ್ದಿಷ್ಟ ದ್ರವ್ಯಗಳನ್ನು ಹೆಸರಿಸದಿದ್ದಾಗಲೂ ಕೇವಲ ತುಪ್ಪದಿಂದ ಹೋಮಿಸಬೇಕೆಂಬುದು ಶಾಸ್ತ್ರವಿಧಿ. "ಘೃತೇನ ವರ್ಧತೇ ಬುದ್ಧಿಃ" ಎಂಬ ಉಕ್ತಿ ಪ್ರಚಲಿತವಾಗಿದೆ. ತುಪ್ಪದ ಮಿತವಾದ ಬಳಕೆಯಿಂದ ವಾತ – ಪಿತ್ಥ – ಕಫ – ಶಮನದೊಂದಿಗೆ ದೇಹಕಾಂತಿ ವೃದ್ಧಿಯಾಗುತ್ತದೆ. ಋಗ್ವೇದದ ಒಂದನೇ ಮಂಡಲದ ಹನ್ನೆರಡನೇ ಸೂಕ್ತದ ಐದನೇ ಮಂತ್ರ ಹೀಗಿದೆ:–

**ಘೃತಾ ಹವನ ದೀದಿವಃ ಪ್ರತಿಷ್ಠಂ ರಿಷತೋದಹ । ಅಗ್ನೇತ್ವಂ ರಕ್ಷಸ್ವಿನಃ ॥**

ಯಜ್ಞದಲ್ಲಿ ಹೋಮಿಸಿದ ತುಪ್ಪವು ತೀವ್ರಪರಿಣಾಮಕಾರಿಯಾಗಿ ವಾತಾವರಣ ದಲ್ಲಿರುವ ಅತ್ಯಂತ ಹಾನಿಕಾರಕವಾದ ರೋಗರುಜಿನಗಳನ್ನು ಹರಡುವ ರೋಗಾಣು ಗಳನ್ನು, ಬ್ಯಾಕ್ಟೀರಿಯಗಳನ್ನು ಸಂಪೂರ್ಣವಾಗಿ ನಾಶಮಾಡಿ ನಮ್ಮೆಲ್ಲರನ್ನೂ ರೋಗಮುಕ್ತ ರನ್ನಾಗಿ ಮಾಡುತ್ತದೆ. (ಸ್ವಾಮಿ ದಯಾನಂದ ಸರಸ್ವತಿಗಳ ಭಾಷ್ಯದ ಭಾವಾನುವಾದ)

ಒಂದು ತೊಲ ತುಪ್ಪವನ್ನು ಹೋಮಿಸುವುದರಿಂದ ಒಂದು ಟನ್ ಆಮ್ಲಜನಕ ಉತ್ಪತ್ತಿ ಯಾಗುತ್ತದೆಂದು ರಷ್ಯದ ವಿಜ್ಞಾನಿ "ಶಿರೊವಿಚ್' ಹೇಳುತ್ತಾರೆ ಅನ್ನ, ಎಳ್ಳು, ಜವೇಗೋಧಿ, ತುಪ್ಪವನ್ನು ಒಮ್ಮೇಲೇ ಹೋಮಿಸುವುದರಿಂದ Ethylene Oxide, Propylene Oxide ಮತ್ತು Formal dehyde ಎಂಬ ಅನಿಲಗಳು ಉತ್ಪನ್ನವಾಗುತ್ತವೆ. ಇದರಿಂದ ಮಳೆ ಯಾಗುತ್ತದೆ. ಸಸ್ಯವೃದ್ಧಿಯುಂಟಾಗುತ್ತದೆ. ಜಾನುವಾರುಗಳಿಗೆ ಹುಲ್ಲು ಸಿಗುತ್ತದೆ. ಜನರಿಗೆ ಧಾರಳ ಅಹಾರ ಉತ್ಪನ್ನವಾಗುತ್ತದೆ. ಮಾನವರ ಜೀವನ ಸುಖಮಯವಾಗುತ್ತದೆ.

ಇಚ್ಛಿತ ಫಲಿತಾಂಶಕ್ಕಾಗಿ ತುಪ್ಪದೊಂದಿಗೆ ಬೇರೆ ಬೇರೆ ದ್ರವ್ಯಗಳನ್ನು ಅಥವಾ ಕೇವಲ ತುಪ್ಪವನ್ನು ಹೋಮಿಸುವುದಕ್ಕೂ ವೈಜ್ಞಾನಿಕ ಹಿನ್ನಲೆಯಿದೆ.

ಆದರೆ ತುಪ್ಪವನ್ನು ಅತಿಯಾಗಿ ಸೇವಿಸುವುದರಿಂದ ದೇಹದಲ್ಲಿ ಕೊಬ್ಬು ಸಂಗ್ರಹವಾಗಿ ಅನಾರೋಗ್ಯವುಂಟಾಗುವುದೆಂಬುದನ್ನೂ ಮರೆಯಬಾರದು.

ಗೋಮೂತ್ರದಲ್ಲಿ ತಾಮ್ರತತ್ವವಿದೆಯೆಂದು ಹೇಳಲಾಗುತ್ತದೆ. ತಾಮ್ರ ಅತಿ ತ್ರಿಕ್ಷ್ಣವಾದ ವಿದ್ಯುತ್ಪ್ರವಾಹಕ. ಅದು ನಿಸರ್ಗದಿಂದ ವಿದ್ಯುತ್ತನ್ನು ಗ್ರಹಿಸಿ ಶರೀರಕ್ಕೆ ಚೈತನ್ಯ ನೀಡುತ್ತದೆ ಮತ್ತು ಉತ್ಸಾಹವನ್ನೂ, ಶಕ್ತಿಯನ್ನೂ ತುಂಬುತ್ತದೆ. ಇದರಲ್ಲಿರುವ ಮ್ಯಾಂಗನೀಸ್ ಸತ್ವ ಶರೀರದ ನರಮಂಡಲವನ್ನು ಚುರುಕಾಗಿಸುತ್ತದೆ, ಬೆಳ್ಳಿಯ ಸತ್ವ ಮಾನವನ ಸ್ವಾಸ್ಥ್ಯರಕ್ಷಣೆಗೆ ಸಹಕಾರಿಯಾಗಲಿದೆ.

ಗೋಮೂತ್ರದ ಬಗೆಗಿನ ಇತ್ತೀಚಿನ ಸಂಶೋಧನೆಗಳು ಆಯುರ್ವೇದ ಚಿಕಿತ್ಸಾ ಕ್ಷೇತ್ರದಲ್ಲಿ ಒಂದು ರೀತಿಯ ಕ್ರಾಂತಿಯನ್ನುಂಟುಮಾಡುತ್ತಿವೆ. ನಿರ್ದಿಷ್ಟ ಲಕ್ಷಣದ ಹಸುವಿನ

30ಗ್ರಾಂ ತಾಜಾ ಮೂತ್ರದೊಂದಿಗೆ 5 ಗ್ರಾಂ ಉಪ್ಪನ್ನು ಸೇರಿಸಿ ಸೇವಿಸುವುದರಿಂದ ಮಲಬದ್ಧತೆ, ಹೊಟ್ಟೆ ಉಬ್ಬರ, ತೇಗು, ಓಕರಿಕೆ ಗುಣವಾಗುತ್ತದೆಂದು ಹೇಳಲಾಗುತ್ತದೆ. ಪಿತ್ತ ಜನಕಾಂಗದ ಖಾಯಿಲೆಗೆ ಇದು ರಾಮಬಾಣವಂತೆ. ಸಣ್ಣಮಕ್ಕಳ ಹೊಟ್ಟೆಹುಳದ ಭಾಧೆಗೂ ಇದು ಔಷಧ. ಹೊಟ್ಟೆಯ ಬಲಗಡೆಯ ಮಾಂಸಪಿಂಡ (ಯಕೃತ್) ದ ಚಿಕಿತ್ಸೆಗೆ ಗೋಮೂತ್ರದೋದಿಗೆ ಉಪ್ಪನ್ನು ಸೇರಿಸಿ ಕೆಲವು ದಿನ ಸೇವಿಸಬೇಕೆಂದು ಹೇಳುತ್ತಾರೆ. ಮೈತುರಿಕೆಗ, ಬಿಳಿಮಚ್ಚೆಗೂ ಗೋಮೂತ್ರದ ಚಿಕಿತ್ಸೆಯಿದೆ. ಗೋಮೂತ್ರ ಮಿಶ್ರಿತ ಪುನರ್ನವಾ (ಕೊಮ್ಮೆಗಿಡ)ದ ಕಷಾಯದಿಂದ ಜಲೋದರ ರೋಗದ ಚಿಕಿತ್ಸೆ ನೀಡುತ್ತಾರೆ. ಆದರೆ ಆಯುರ್ವೇದದ ಪರಿಣಿತ ವೈದ್ಯರ ಸಲಹೆಯಿಲ್ಲದೆ ಈ ಯಾವುದೇ ಚಿಕಿತ್ಸೆಯನ್ನು ಸ್ವಯಂಪ್ರೇರಣೆಯಿಂದ ಪಡೆಯುವುದಾಗಲೀ, ನೀಡುವುದಾಗಲೀ ಅಪಾಯಕಾರಿ.

**ಗೋಮಯ:** ಗೋಮಯಕ್ಕೆ ನಮ್ಮ ಸಂಸ್ಕೃತಿಯಲ್ಲಿ ಅತ್ಯಂತ ಮಹತ್ವದ ಪೂಜನೀಯ ಸ್ಥಾನವಿದೆ. ಮಂಗಲಕಾರ್ಯಗಳಲ್ಲಿ ಗೋಮಯ ಗಣೇಶನನ್ನು (ಗೋ–ಮಯ ಪ್ರಥಮ ಪೂಜ್ಯ ಗಣೇಶನೆಂದು) ಪೂಜಿಸುವ ಸಂಪ್ರದಾಯವಿದೆ. ಮನೆಯ ಒಳಗು ಹೊರಗು ಗಳನ್ನು ದಿನಕ್ಕೆ 2–3 ಬಾರಿ ಸೆಗಣಿಯಿಂದ ಸಾರಿಸಿ ಶುದ್ಧೀರಿಸುವ ಸಂಪ್ರದಾಯವು ಗೋಮಯದಲ್ಲಿರುವ ಕ್ರಿಮಿನಾಶಕ ಗುಣವನ್ನು ಪುಷ್ಟೀಕರಿಸುತ್ತದೆ. ವಾತಾವರಣದಲ್ಲಿ ಆಮ್ಲಜನಕವನ್ನು ಬಿಡುಗಡೆಗೋಳಿಸುವ ಗಿಡಮರಗಳ ಬೆಳವಣಿಗೆಗೆ ಸೆಗಣಿಯಷ್ಟು ಉತೃಷ್ಟವಾದ ಗೊಬ್ಬರ ಬೇರೊಂದಿಲ್ಲ. ಇತ್ತೀಚಿನ ದಿನಗಳಲ್ಲಿ ಬಯೋಗ್ಯಾಸ್ ಇಂಧನದ ಬಳಕೆ ಅತ್ಯಂತ ಜನಪ್ರಿಯವಾಗಿದೆ. ಈ ಗ್ಯಾಸಿನಲ್ಲಿರುವ 'ಮಿಥೇನ್'ನಿಂದ ಕಾರ್ಬನ್ ಡೈ ಆಕ್ಸೈಡ್‌ನ್ನು ಪ್ರತ್ಯೇಕಿಸಿ ಎಲ್.ಪಿ.ಜಿ ಸಿಲಿಂಡರ್‌ಗಳಲ್ಲಿ ತುಂಬಿಸುವ ತಾಂತ್ರಿಕತೆ ಅಭಿವೃದ್ಧಿಯಾಗುತ್ತಿದೆ.

**ಗೋ ಬ್ರಾಹ್ಮಣೇಭ್ಯಃ ಶುಭಮಸ್ತು ನಿತ್ಯಂ ಲೋಕಾಃ ಸಮಸ್ತಾಃ ಸುಖಿನೋ ಭವಂತು ॥**



# ಷೋಡಶ ಸಂಸ್ಕಾರಗಳಲ್ಲಿ ನಾಮಕರಣದ ಮಹತ್ವ

ಸಂಸ್ಕಾರ ಬಲದಿಂದ ಯಾವುದೇ ವಸ್ತು ತನ್ನ ಮೌಲ್ಯವನ್ನು ಹೆಚ್ಚಿಸಿಕೊಳ್ಳುತ್ತದೆ. ಗಣಿಯಿಂದ ತೆಗೆದ ಬಂಗಾರಕ್ಕೆ ಪುಟವಿಟ್ಟು ನಿರ್ದಿಷ್ಟ ಆಕಾರಕ್ಕೆ ಸಂಸ್ಕರಿಸಿದಾಗ ಅದರ ಬೇಡಿಕೆ ಹೆಚ್ಚುತ್ತದೆ. ಸಂಸ್ಕಾರರಹಿತವಾದ ಮೂಲರೂಪದ ವಸ್ತುವಿಗೆ ಬೆಲೆ ಕಡಿಮೆ. ಮಾನವನೂ ಈ ತತ್ವಕ್ಕೆ ಹೊರತಾಗಿಲ್ಲ, ಸಂಸ್ಕೃತಿ, ಸಂಸ್ಕಾರ, ಸಂಸ್ಕೃತ–ಈ ಎಲ್ಲವೂ ಒಂದೇ ಮೂಲದ ಪದಗಳು. ಆದುದರಿಂದ ಹಿಂದೂ ಸಂಸ್ಕೃತಿಯಲ್ಲಿ ಸಂಸ್ಕಾರಕ್ಕೆ ಅತಿ ಮಹತ್ವವಿದೆ. ಶಿಶು ಜನಿಸಿದ ಮೊದಲಾಗಿ ಹದಿನಾರು ಸಂಸ್ಕಾರಗಳಿಂದ ಸುಸಂಸ್ಕೃತನಾಗಿ ತನ್ನ ಸಾಮಾಜಿಕ ಮೌಲ್ಯಗಳನ್ನು ಹೆಚ್ಚಿಸಿಕೊಳ್ಳುತ್ತಾನೆಂಬುದಾಗಿ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ.



ಈ ಷೋಡಶ ಸಂಸ್ಕಾರಗಳಲ್ಲಿ ಮಾತೃಗರ್ಭದಿಂದ ಹೊರಬಂದ ನಂತರ **"ನಾಮಕರಣ"** ಎಂಬುದು ಎರಡನೆಯದು. ಉಳಿದೆಲ್ಲ ಜೀವಿಗಳ ಮೇಲೆ ಪ್ರಭುತ್ವ ಸಂಪಾದಿಸುವ ಮಾನವನ ವ್ಯವಹಾರ ಕ್ಷೇತ್ರ ವಿಸ್ತಾರವಾದುದು. ಹಾಗಾಗಿ ಅವನ ವ್ಯವಹಾರ ಸಿದ್ಧಿಗಾಗಿ ಈ ಸಂಸ್ಕಾರ ಅತ್ಯವಶ್ಯಕ. ಒಬ್ಬ ವ್ಯಕ್ತಿ ತಾನು ಇತರರೊಡನೆ, ಇತರರು ಈತನೊಡನೆ ವ್ಯವಹರಿಸುವಷ್ಟಕ್ಕೇ ಈ ಹೆಸರು ಸೀಮಿತವಾಗಿರದೇ ಬೇರೆಯೂ ಕೆಲವು ರೀತಿಯಿಂದ ಪ್ರಯೋಜನಕಾರಿಯಾಗಿದೆ.

ಶಿಶುವು ಜನಿಸಿದ ಮುಹೂರ್ತವನ್ನನುಸರಿಸಿ ನಾಲ್ಕು ಹೆಸರುಗಳನ್ನಿರಿಸಲಾಗುತ್ತದೆ. ಮೊದಲನೆಯದು ಕುಲದೇವತೆಯ ಹೆಸರು. ಬನಶಂಕರಿ ಭಕ್ತ, ನರಸಿಂಹ ಭಕ್ತ; ಮೈಲಾರೇಶ್ವರ ಭಕ್ತಾ, ವೆಂಕಟೇಶ್ವರ ಭಕ್ತಾ, ಹೀಗೆ ಈ ಹೆಸರುಗಳು ಭಕ್ತಿ ಮತ್ತು ಭಾವುಕತೆ ಯ ಸಂಕೇತ.

ಎರಡನೆಯದು ಮಾಸನಾಮ. ಈ ಹೆಸರಿನಿಂದ ಶಿಶು ಜನಿಸಿದ ಚಾಂದ್ರಮಾನ ಮಾಸವನ್ನು ನೆನಪಿಸಿಕೊಳ್ಳಬಹುದು. ಚೈತ್ರಮಾಸದಲ್ಲಿ ಜನಿಸಿದ ಗಂಡು ಮಗುವಿಗೆ 'ವೈಕುಂಠ' ನೆಂದು ಹೆಸರಿಡಲಾಗುತ್ತದೆ. ವೈಶಾಖಮಾಸದಲ್ಲಿ ಜನಿಸಿದ ಶಿಶುವಿನ ಹೆಸರು 'ಜನಾರ್ದನ' ಅಂತೆಯೇ ಹೆಣ್ಣುಮಗುವಿನ ಹೆಸರು ಭೂದೇವೀ, ಕಲ್ಯಾಣೀ ಹೀಗೆ.

**ಚೈತ್ರಾದಿ ಮಾಸನಾಮಾನಿ ವೈಕುಂಠೋಽಥ ಜನಾರ್ದನಃ ।**
**ಉಪೇಂದ್ರೋ ಯಜ್ಞಪುರಷಃ ವಾಸುದೇವಸ್ತಥಾಹರಿಃ ॥**
**ಯೋಗೀಶಃಪುಂಡರೀಕಾಕ್ಷಃ ಕೃಷ್ಣೋ ಽನಂತೋಽಚ್ಯುತಸ್ತಥಾ ।**
**ಚಕ್ರಧಾರೀತಿ ಚೈತಾನಿ ಕ್ರಮಾದಾಹುರ್ಮನೀಷಿಣಃ ॥**
**ಮಾರ್ಗಶೀರ್ಷೇತು ವಾಗ್ದೇವೀ ಪುಷ್ಯೇ ಪದ್ಮಾವತೀ ಭವೇತ್ ।**
**ಶ್ರೀದೇವೀಚಾಪಿ ಸಾವಿತ್ರೀ ಭೂಮಿ ಕಲ್ಯಾಣಿಕಾ ತಥಾ ॥**
**ಸತ್ಯಭಾಮಾ ಪುಣ್ಯವತೀ ರೂಪವತೀಂದು ಮತ್ಯಪಿ ।**
**ಚಂದ್ರವತೀ ಚ ಲಕ್ಷ್ಮೀಶ್ಚ ಸ್ತ್ರೀ ನಾಮಕರಣಾನಿ ತು ॥**

ಮೂರನೆಯ ಹೆಸರು ನಾಕ್ಷತ್ರನಾಮ. ಜನಿಸಿದ ನಕ್ಷತ್ರನಾಮ. ಜನಿಸಿದ ನಕ್ಷತ್ರ ವಾಚಕದಿಂದ ಮಗುವನ್ನು ಹೆಸರಿಸುವುದು. ಈ ಹೆಸರು ಕಾರ್ತಿಕಃ ಆರ್ದ್ರಕಃ, ಕೃತ್ತಿಕಾ, ಆರ್ದ್ರಾ ಹೀಗೆ ಪ್ರಚಲಿತವಾಗಿಯೂ, ಇರಬಹುದು ಅಥವಾ ಕಾರ್ತಿಕೇಯಃ ಅಗ್ನಿಶರ್ಮಾ ಎಂಬಂತೆ ಗುಪ್ತನಾಮವೂ ಆಗಿರಬಹುದು. ಈ ವೈಕಲ್ಪಿಕ ಪಕ್ಷದಂತೆ ಹೆಸರಿಸುವುದು ಯುಕ್ತಿಪೂರ್ಣವೆನಿಸುತ್ತದೆ ಏಕೆಂದರೆ–

**ಆತ್ಮನಾಮಗುರೋರ್ನಾಮ ನಾಮಾತಿಕೃಪಣಸ್ಯ ಚ ।**
**ಶ್ರೇಯಸ್ಕಾಮೋ ನ ಗೃಹ್ಣೀಯಾತ್ ಜ್ಯೇಷ್ಠಾಪತ್ಯ ಕಳತ್ರಯೋಃ ॥**

ಶ್ರೇಯಸ್ಸನ್ನು ಬಯಸುವವರು ತಂದೆ ತಾಯಿಗಳು ಮಾತ್ರ ತಿಳಿದಿರಬಹುದಾದ ಮತ್ತು ಅಭಿಮಾನದಲ್ಲಿ ಮಾತ್ರ ಉಚ್ಚರಿಸಬಹುದಾದ ತನ್ನ ಈ ಹೆಸರನ್ನು ಹೇಳಬಾರದು. ಯಾವುದೇ ವ್ಯಕ್ತಿಯ ಜನನ ನಕ್ಷತ್ರ–ಹೆಸರುಗಳನ್ನು ತಿಳಿದುಕೊಂಡು ಆತನ ಮೇಲೆ

ಸುಲಭವಾಗಿ ಅಭಿಚಾರಿಕ (ಕೃತ್ರಿಮ–ಮಾಟ–ಮಂತ್ರ ಇತ್ಯಾದಿ) ಪ್ರಯೋಗ ನಡೆಸ ಬಹುದು ಆದುದರಿಂದ ಇದು ಗುಪ್ತವಾಗಿರಬೇಕು.

ಗುರುಗಳನ್ನು ನೇರವಾಗಿ ಹೆಸರಿಸಿ ಕರೆಯುವುದು ತನಗೆ ಅಶ್ರೇಯಸ್ಕರ ಮತ್ತು ಗುರು ಗಳನ್ನು ಅಗೌರವಿಸಿದಂತೆ, ಮಹಾಜಿಪುಣನ ಹೆಸರನ್ನು ಕೂಗಿ ಕರೆಯುವುದು ಶ್ರೇಯಸ್ಸಲ್ಲ. ಈತ ಪಾಪಿಯೆಂದು ವ್ಯವಹರಿಸಲ್ಪಡುತ್ತಾನೆ.

**ಪಾಪಿಯ ಲಕ್ಷಣ :–**

**ಅದಾನದೋಷೇಣ ಭವೇದ್ದರಿದ್ರಃ ದಾರಿದ್ರ್ಯದೋಷೇಣ ಕರೋತಿ ಪಾಪಮ್ ।**
**ಪಾಪಾತ್ಪ್ರಭೂತಂ ನರಕಂ ಪ್ರಯಾತಿ ಪುನರ್ದ್ರರಿದ್ರಃ ಪುನರೇವಪಾಪೀ ॥**

**ಶ್ರೇಯಸ್ಕಾಮಿಗಳು ಪುಣ್ಯಸ್ಮರಣೆಯಲ್ಲದೆ ಪಾಪಿಯ ನಾಮ ಸ್ಮರಣೆಯನ್ನು ಬಯಸು ವುದಿಲ್ಲ.**

ಹಿರಿಯ ಸಂತಾನವನ್ನು ಮಾಣಿ, ಪುಟ್ಟ, ಗುಂಡ, ಅಪ್ಪಿ, ಪಾಪು, ಮಗೂ, ಪುಟ್ಟಿ ಎಂದು ಕೂಗುವುದು ಇಂದಿಗೂ ರೂಢಿಯಲ್ಲಿದೆ. ಹೆಂಡತಿಯನ್ನು ಹೆಸರಿಟ್ಟು ಕರೆಯುವುದು ಶ್ರೇಯಸ್ಸಲ್ಲ. ಅದಕ್ಕಾಗಿ ಗಂಡನೂ ಮತ್ತು ವರನ ಕುಟುಂಬವರ್ಗ ದವರೆಲ್ಲರೂ ಕರೆಯಬಹುದಾದಂತೆ ಹೆಚ್ಚಿನ ಕುಟುಂಬಗಳಲ್ಲಿ ನವವಧೂ ಗೃಹಪ್ರವೇಶ ಸಂದರ್ಭದಲ್ಲಿ ವಧುವಿಗೆ ಬೇರೆಯೇ ಹೆಸರನ್ನಿಡುವ ಸಂಪ್ರದಾಯ ಈಗಲೂ ಇದೆ.

ಸ್ವಾರಸ್ಯದಸಂಗತಿಯೆಂದರೆ ಹೆಂಡತಿಯಾದವಳು ಗಂಡನನ್ನು ಹೆಸರಿಟ್ಟು ಕೂಗುವುದು ಶ್ರೇಯಸ್ಸಲ್ಲವೆಂದು ಈ ಶ್ಲೋಕದಲ್ಲಿ ಹೇಳಿಲ್ಲ. ಆದರೂ ಏನ್ರೀss, ರಿss ಎಂತಲೋ ಗಂಡನನ್ನು ಕುರಿತು ಪರೋಕ್ಷವಾಗಿ ಲಜ್ಜಾಮಿಶ್ರಿತ ಗೌರವದಿಂದ ಸಂಬೋಧಿ ಸುವ ಹಳೆಯ ಸಂಪ್ರದಾಯ ಇಂದಿಗೂ ಇದೆ. (ಹೊಸ ಪೀಳಿಗೆಯ ಗೃಹಣಿಯು ಗಂಡನನ್ನು ಹೆಸರಿಟ್ಟು ಕರೆಯುವುದು ಶಾಸ್ತ್ರ ವಿರೋಧವಲ್ಲ ಎನ್ನಬಹುದು?)

ಆಯುಷ್ಯಾಭಿವೃದ್ಧಿಗಾಗಿಯೂ, ವ್ಯವಹಾರ ಸಿದ್ಧಿಗಾಗಿಯೂ ಇಡುವ ವ್ಯವಹಾರ ನಾಮ ಅತಿಮುಖ್ಯವಾದುದು. ಈ ಹೆಸರನ್ನು ಕುಟುಂಬದ ಹಿರಿಯರು ಸೂಚಿಸುವ ಕಾಲ ವೊಂದಿತ್ತು. ಗಂಡು ಮಗುವಿಗೆ ಯುಗಾಕ್ಷರಗಳುಳ್ಳ ರಾಮ, ಶ್ರೀನಿವಾಸ ಎಂಬಂತೆ ಮತ್ತು ಹೆಣ್ಣು ಮಗುವಿಗೆ ಅಯುಗ್ಮಾಕ್ಷರಗಳುಳ್ಳ ಶ್ರೀದೇವಿ, ಕಲ್ಯಾಣಿ ಎಂಬಂತೆ ನಾಮಕರಣ ಮಾಡಬೇಕೆಂದು ಶಾಸ್ತ್ರಕಾರರು ಹೇಳುತ್ತಾರೆ.

ಕುಟುಂಬದ ಹಿರಿಯರಿಗೆ ಗೌರವ ಸೂಚಕವಾಗಿ ಮತ್ತು ಮುಂದಿನ ಪೀಳಿಗೆಗೆ ಹಿಂದಿನ ತಲೆಮಾರಿನ ನೆನಪು ಮಾಸದಿರುವಂತೆ ಅಜ್ಜನ ಹೆಸರನ್ನು ಮಗ–ಮೊಮ್ಮಗ–ಮರಿಮಗ ನಿಗೋ, ಅಜ್ಜಿಯ ಹೆಸರನ್ನು ಮಗಳು–ಮೊಮ್ಮಗಳು–ಮರಿಮಗಳಿಗೋ 'ನಾಮಕರಣ' ರೂಢಿಯಲ್ಲಿತ್ತು. ಈ ಹೆಸರುಗಳೆಲ್ಲವೂ ಹೆಚ್ಚಾಗಿ ದೇವಿ–ದೇವತೆಗಳ ಹೆಸರುಗಳೇ ಆಗಿರುತ್ತಿದ್ದುದು ಒಂದು ವಿಶೇಷ. ನಾರಾಯಣ, ಶ್ರೀನಿವಾಸ, ಗೋಪಾಲಕೃಷ್ಣ, ಶ್ರೀಲಕ್ಷ್ಮೀ,



ಶಾರದೆ–ಹೀಗೆ ಇಂತಹ ಹೆಸರುಗಳಿಂದ ಐಹಿಕ–ಆಮುಷ್ಮಿಕ ಎರಡೂ ರೀತಿಯ ಪ್ರಯೋಜನಗಳಿದ್ದವು.

ಮಹಾಪಾಪಿಯಾದ ಅಜಮಿಳ ಅಂತ್ಯಕಾಲದಲ್ಲಿ ಸಂಕಟ ತಡೆಯಲಾರದೆ "ನಾರಾಯಣ" ಎಂದು ಮಗನನ್ನು ಕೂಗಿದ. ಪ್ರಾಣೋತ್ಕ್ರಮಣಕಾಲದಲ್ಲಿ ಭಗವನ್ನಾಮ ಸ್ಮರಣೆಯಿಂದ ನರಕಮಾರ್ಗವನ್ನು ತಪ್ಪಿಸಿಕೊಂಡು ಮೋಕ್ಷವನ್ನು ಪಡೆದನೆಂಬುದು ಪುರಾಣದ ಕಥೆ. ಇದು ನಾಮದ ಮಹಿಮೆ (ನಾರ–ಮನುಷ್ಯನಿಗೆ ಸಂಬಂಧಿಸಿದುದು ಆಯನ–ಮಾರ್ಗ ಅರ್ಥಾತ್ ಮೋಕ್ಷವನ್ನು ಕರುಣಿಸುವವನು ನಾರಾಯಣ) ಇದಲ್ಲದೆ ಮನಸ್ಸಿಗೆ ಮುದ ನೀಡುವ, ಕಿವಿಗೆ ಇಂಪಾಗಿರುವ, ಉಚ್ಚಾರಣೆಗೆ ಸುಲಭವೆನಿಸುವ ಹಾಗೂ ಅರ್ಥಪೂರ್ಣ ಮತ್ತು ಶತ್ರುವಾಚಕ. ತಿರಸ್ಕಾರ ಸೂಚಕವಲ್ಲದ ಹೆಸರಿಡುವುದು ಔಚಿತ್ಯ ಪೂರ್ಣ.

ಸಿರಿವಂತರ ಮಗಳಿಗೆ ಧನಲಕ್ಷ್ಮಿ, ಬಿಳಿಯ ಹುಡುಗಿಗೆ ಶ್ವೇತಾ, ಉದ್ದ ಜಡೆಯವಳಿಗೆ ನೀಳವೇಣಿ, ಶ್ರೀಮಂತನಿಗೆ ಶ್ರೀನಿವಾಸ, ಕನಕದಾಸ, ಬೆಳ್ಳಗಿರುವವನಿಗೆ ಬೆಳ್ಳಯ್ಯ– ಮುಂತಾದ ಹೆಸರುಗಳು ಸಾರ್ಥಕ, ಹಾಲು ಮೊಸರಿನ ಸಮೃದ್ಧಿಯುಳ್ಳವರಿಗೆ 'ಕ್ಷೀರಸಾಗರ ಭಟ್ಟ' ರೆಂಬ ಹೆಸರೂ, ಸಾರ್ಥಕವೇ. ಈಗೀಗ ಸದಾ ಹೊಸತನ್ನೇ ಹುಡುಕುವ ಹೊಸ ಪೀಳಿಗೆ ತಮ್ಮ ಮಕ್ಕಳಿಗೆ ತಮಗಿಷ್ಟವಾದ ಹೊಸ ಹೊಸ ಹೆಸರನ್ನಿಡುವ ಸಂಪ್ರದಾಯವೂ ಬೆಳೆಯುತ್ತಿದೆ.

# 'ಅನ್ನ' ಪ್ರಾಶನ (ದಾನ)

ಇಂದ್ರಿಯಪಟುತ್ವ, ಆಯುರ್ವರ್ಚೋಬಲವೃದ್ಧಿ, ದೃಢಗಾತ್ರಸಿದ್ಧಿ ಮೊದಲಾದ ದೈಹಿಕ, ಮಾನಸಿಕ ಬೆಳವಣಿಗೆಗಾಗಿ ಶಿಶುವಿಗೆ 'ಅನ್ನಪ್ರಾಶನ' ಸಂಸ್ಕಾರ ನಡೆಸಲಾಗುತ್ತದೆ. ಆದುದರಿಂದ ಈ ಸಂಸ್ಕಾರಕ್ಕೆ ಅತ್ಯಂತ ಮಹತ್ವವಿದೆ. 'ಅನ್ನವೆಂದರೆ ತಿನ್ನಲು ಯೋಗ್ಯವಾದುದು (ಅತ್ತುಂ ಯೋಗ್ಯಂ=ಅನ್ನಂ). "ಷಷ್ಠೇ ಅನ್ನಪ್ರಾಶನಂ, ಜಾತೇಷು ದಂತೇಷು ವಾ (ಮದನರತ್ನ); ದಧ್ಯಾಜ್ಯ ಮಧು ಸಂಯುಕ್ತಂ ಪ್ರಾಶಯೇತ್ ಪಾಯಸಂ ತುವಾ" ಅಂದರೆ ಶಿಶುವಿಗೆ ಆರನೇ ತಿಂಗಳಲ್ಲಾಗಲೀ, ಹಲ್ಲುಹುಟ್ಟುವಾಗಾಗಲೀ, ಮೊಸರು, ತುಪ್ಪದೊಂದಿಗೆ ಜೇನನ್ನು ಸೇರಿಸಿ ಅಥವಾ ಪಾಯಸವನ್ನಾಗಲೀ'ಅನ್ನಪತೇ. . . . . ಎಂಬ ಮಂತ್ರಪಠನದೊಂದಿಗೆ ಪ್ರಾಶನ ಮಾಡಿಸಬೇಕು ಎಂಬುದು ಪ್ರಯೋಗಕಾರರ ವಚನ, ತಾಯಿ ಆನಂದ, ವಾತ್ಸಲ್ಯ, ತೃಪ್ತಿ ಮೊದಲಾದ ಸಮಸ್ತ ಸದ್ಭಾವನೆಗಳೊಂದಿಗೆ ಸ್ತನಪಾನ ಮಾಡಿಸುತ್ತಾಳೆ. ಅಂತೆಯೇ ಇತರೆ ಖಾದ್ಯಗಳನ್ನೂ ಮಗುವಿಗೆ ಉಣಬಡಿಸುತ್ತಾಳೆ. ಮಗುವೂ ಅದೇ ಭಾವನೆಗಳನ್ನು ಬೆಳೆಸಿಕೊಳ್ಳುತ್ತದೆ. ತಾಯಿ ಸಿಡುಕುತ್ತಾ, ಗದರಿಸುತ್ತಾ ಬೈಯುತ್ತಾ ಉಣಿಸಿದುದನ್ನು ತಿಂದ ಮಗುವೂ ಅವೇ ಗುಣಗಳನ್ನು ಮೈಗೂಡಿಸಿ

ಕೊಳ್ಳುತ್ತದೆ ಎಂಬುದು ಹಿರಿಯರ ಅನುಭವನದ ಮಾತು. ಅದಕ್ಕಾಗಿ ಮಕ್ಕಳನ್ನು ರಮಿಸುತ್ತಾ ಉಣಿಸುವುದು ರೂಢಿ. ಅತಿಥಿ–ಆಭ್ಯಾಗತರೊಂದಿಗೆ ಸಂತೋಷದಿಂದ ನಗುತ್ತಾ ಮೃದುವಚನಗಳಿಂದ ಉಪಚರಿಸುತ್ತಾ ಬಡಿಸುವುದು ಮತ್ತು ಊಟಮಾಡುವಾಗ ಹಾಳುಹರಟೆಯಿಲ್ಲದೆ ಭಗವನ್ನಾಮ ಸಂಕೀರ್ತನೆಯೊಂದಿಗೆ ಭಗವಂತನ ಅನುಗ್ರಹ–ಪ್ರಸಾದವೆಂಬ ಭಾವನೆಗಳಿಂದ ಉಣ್ಣುವುದು ಶಿಷ್ಟಾಚಾರ. ಹೀಗಾಗಿ ಅನ್ನಪ್ರಾಶನದ ಮಹತ್ವದೊಂದಿಗೆ ಈ ಶಿಷ್ಟಾಚಾರ ಬೆಸೆದು ಬಂದಿದೆ.

ಪ್ರಾಚೀನ ಕಾಲದಲ್ಲಿ ನಿಸರ್ಗ ಸಹಜವಾದ ಗಡ್ಡೆ ಗೆಣಸು, ಸೊಪ್ಪು, ಹಣ್ಣುಗಳನ್ನು ತಿಂದ ಜನರು ಪರಮ ಸಾತ್ವಿಕರೂ, ಸದ್ಗುಣಿಗಳೂ, ಸದಾಚಾರ ಸಂಪನ್ನರೂ, ಸತ್ಯ–ಅಹಿಂಸಾ ಮಾರ್ಗಾನುಯಾಯಿಗಳೂ ಆರೋಗ್ಯವಂತರಾಗಿಯೂ ಇದ್ದರು. ಕಪಟ ವಂಚನೆ ದುಶ್ಚಟಗಳಿಂದ ದೂರವಿದ್ದರು. ಆದರೆ ಇವತ್ತು ನಮಗೆ ಸಿಗುವ ಆಹಾರ ಎಂತಹದು? ಯಾವ ಮೂಲದಿಂದ ಬಂದ ಎಂತಹ ಆಹಾರವನ್ನು ಹೇಗೆ ಉಣ್ಣುತ್ತೇವೆಯೋ ಅದಕ್ಕನು ಗುಣವಾಗಿ ನಮ್ಮ ದೈಹಿಕ, ಮಾನಸಿಕ ಬೆಳವಣಿಗೆಯಾಗುತ್ತದೆ. ಇಂದು ನಮ್ಮ ಮಾನಸಿಕ ಕ್ಷೋಭೆ, ಇಂದ್ರಿಯ ವಿಕಾರ ಮೊದಲಾದ ಎಲ್ಲ ಅಸತ್ ಪ್ರವೃತ್ತಿಗಳಿಗೆ ನಾವು ಸೇವಿಸುವ ಆಹಾರ, ಮತ್ತು ಉಣ್ಣುವ ರೀತಿಯೇ ಕಾರಣ.

ವೇದಗಳಲ್ಲಿ, ಉಪನಿಷತ್ತುಗಳಲ್ಲಿ ಅನ್ನವನ್ನು ಪರಬ್ರಹ್ಮ, ತ್ರಿಮೂರ್ತಿ ಸ್ವರೂಪವೆಂದೂ ಹೇಳಲಾಗಿದೆ. (ಅನ್ನಂ ಬ್ರಹ್ಮೇತಿ ವ್ಯಜಾನಾತ್, –ತೈತ್ತರೀಯ ಉಪನಿಷತ್; ಅನ್ನಂಬ್ರಹ್ಮಾ ರಸೋವಿಷ್ಣುಃ ಭೋಕ್ತಾದೇವೋ ಮಹೇಶ್ವರಃ) ಪವಿತ್ರವಾದ ಅನ್ನದಾನಕ್ಕಿಂತ ಶ್ರೇಷ್ಠವಾದ ದಾನ ಬೇರೊಂದಿಲ್ಲ. ಸರ್ವಜ್ಞ ಹೇಳುತ್ತಾನೆ "ಅನ್ನವನು ಇಕ್ಕುವುದು, ನನ್ನಿಯನು (ಸತ್ಯ) ನುಡಿಯುವುದು, ತನ್ನಂತೆ ಪರರ ಬಗೆವೊಡೆ, ಕೈಲಾಸ ಬಿನ್ನಾವಣವಕ್ಕು." ಹಸಿದವರಿಗೆ ಅನ್ನ, ರೋಗಿಗೆ ಔಷಧ, ಚಳಿಯಿಂದ ನಡುಗುತ್ತಿರುವವನಿಗೆ ವಸ್ತ್ರದಾನ ಮಾಡುವಾಗ ಪಾತ್ರಾಪಾತ್ರ ವಿವೇಚನೆಯಿಲ್ಲದೆಯೂ ದಾನ ಮಾಡಬೇಕೆಂದು ಹಿರಿಯರು ಹೇಳುತ್ತಾರೆ. ಆದರೆ ಅಪಾತ್ರರಿಗೆ ಮಾಡುವ ದಾನ ನಷ್ಟವೆಂದು ನೀತಿ ಹೇಳುತ್ತದೆ.

ಮಹಾಭಾರತದ ಶಾಂತಿ ಪರ್ವದಲ್ಲಿನ ಒಂದು ಸನ್ನಿವೇಶ. ಶರಶಯ್ಯೆಯಲ್ಲಿದ್ದ ಭೀಷ್ಮರು ಧರ್ಮರಾಯನಿಗೆ ರಾಜಧರ್ಮವನ್ನು ಉಪದೇಶಿಸುತ್ತಾರೆ. ರಾಜಸಭೆಯಲ್ಲಿ ತನ್ನ ಮಾನಾಪಹರಣದ ಸಂದರ್ಭದಲ್ಲಿ ಭೀಷ್ಮರ ತಾಟಸ್ಥ್ಯಕ್ಕೆ ಕಾರಣವನ್ನು ಪ್ರಶ್ನಿಸಿದ ದ್ರೌಪದಿಗೆ ಅವರು ಹೀಗೆ ಉತ್ತರಿಸುತ್ತಾರೆ. "ನಾನು ಬಹುಕಾಲ ದುರ್ಬುದ್ಧಿಯ ದುರ್–ಯೋಧನನ ಅನ್ನ ತಿನ್ನುವುದು ಅನಿವಾರ್ಯವಾಯಿತು. ದುಷ್ಟಾನ್ನ ಭೋಜನದ ಪರಿಣಾಮ ನನ್ನ ಬುದ್ಧಿಯನ್ನು ಮಲಿನಗೊಳಿಸಿದುದರಿಂದಲೇ ನನಗೆ ದುರ್ಯೋಧನನ ದುಷ್ಕಾರ್ಯವನ್ನು ಅನುಮೋದಿಸುವ ಬುದ್ಧಿಯುಂಟಾಯಿತು" ಎಂದು ವಿವರಿಸುತ್ತಾರೆ.

ಮನುಷ್ಯನ ಬುದ್ಧಿ–ಚಟುವಟಿಕೆಗಳ ಮೇಲೆ ಅವನು ತಿನ್ನುವ ಆಹಾರದ ಪ್ರಭಾವವನ್ನು ಕುರಿತಾದ ಒಂದು ದೃಷ್ಟಾಂತ ಕಥೆಯನ್ನು ಉದಾಹರಿಸುತ್ತೇನೆ. ಸರ್ವಸಂಗ ಪರಿತ್ಯಾಗಿಗಳಾದ ಒಬ್ಬ ಸಾಧುಗಳು ಪರವಿತ್ತಾಪಹಾರಕರಾದ ಓರ್ವ ಶ್ರೀಮಂತರ ಮನೆಯಲ್ಲಿ ಮೃಷ್ಟಾನ್ನವುಂಡು ರಾತ್ರಿ ತಂಗಿದ್ದರು.



ಖಾಲಿ ಜೋಳಿಗೆಯಲ್ಲದೆ ಇವರ ಹತ್ತಿರ ಬೇರೇನೂ ಇಲ್ಲ. ಬ್ರಾಹ್ಮೀ ಮುಹೂರ್ತದಲ್ಲೆದ್ದು ಹೊರಡುವಾಗ ಅಲ್ಲಲ್ಲಿ ಬಿದ್ದಿರುವ ಬೆಳ್ಳಿ ಬಂಗಾರದ ವಸ್ತುಗಳನ್ನು ಕಂಡು ಕೆಲವು ದಿನ ಸುಖವಾಗಿರುವ ಆಸೆಯಾಯಿತು. ನಾಲ್ಕಾರು ವಸ್ತುಗಳನ್ನು ಜೋಳಿಗೆಗೆ ತುರುಕಿ ಹೊರಗೆ ನಡೆದರು. ತುಸು ದೂರದ ಸಣ್ಣ ಹೊಳೆಯ ದಡದಲ್ಲಿ ಬಹಿರ್ದೆಸೆಗೆ ಹೋಗಿ ಸ್ನಾನಾದಿಗಳನ್ನು ಮುಗಿಸುವಷ್ಟರಲ್ಲಿ ಅವರಿಗೆ ಮತ್ತೆ ಯೋಚನೆಯಾಯಿತು. "ಛೆ, ಈ ಬೆಳ್ಳಿಬಂಗಾರದ ವಸ್ತುಗಳ ಮೇಲೆ ನನಗೆ ಏಕೆ ಆಸೆಯಾಯಿತು? ಇವುಗಳನ್ನು ಕದಿಯುವ ಬುದ್ಧಿ ಏಕೆ ಬಂತು? ಇವು ನನಗೇಕೆ ಬೇಕು?" – ಹೀಗೇ ತನ್ನಲ್ಲೇ ವಿಚಾರಿಸುತ್ತಾ ಅವರ ಅಂತರಂಗಕ್ಕೆ ಹೊಳೆಯಿತಂತೆ. "ನಾನು ರಾತ್ರಿ ತಿಂದ ಆಹಾರದ ಪ್ರಭಾವದಿಂದ ಇಂತಹ ದುರ್ಬುದ್ಧಿ ಬಂದಿರಬೇಕು. ಮಲವಿಸರ್ಜನೆಯಾದ ಮೇಲೆ ಮನೋವಿಕಾರ ಕಡಿಮೆಯಾಗುತ್ತಿದೆ." ಹೀಗೆ ಯೋಚಿಸಿದವರೇ ಆ ಪದಾರ್ಥಗಳನ್ನೆಲ್ಲ ಶ್ರೀಮಂತರಿಗೆ ಮರಳಿಸಿದರಂತೆ. ಆದುದರಿಂದ ಕದನ್ನ ತಿನ್ನಬಾರದು. ನಾವು ಬಡಿಸುವಾಗ ಉಣ್ಣುವವರು ಭಗವತ್ಸ್ವರೂಪರೆಂದು ಆದರಪೂರ್ವಕವಾಗಿ ಸಂತೋಷದಿಂದ ಶುದ್ಧ ಮನಸ್ಸಿನಿಂದ ಉಪಚರಿಸುತ್ತಾ ಬಡಿಸಬೇಕು. ಉಣ್ಣುವವರು–ಭಗವಂತನ ಪ್ರಸಾದವೆಂದು ಶ್ರದ್ಧೆಯಿಂದ ಉಣ್ಣಬೇಕು. ಆಗ ಅನ್ನದಾನ ಮತ್ತು ಹಿತಭೋಜನ ಎರಡೂ ಸಾರ್ಥಕ.

# ಪಂಚ ವಕಾರಗಳು

ತನ್ನ ಸಂವೇದನಶೀಲತೆಯ ವಿಶಿಷ್ಟ ಗುಣದಿಂದಾಗಿ ಮಾನವ ಜಗತ್ತಿನ ಚರಾಚರ ಜೀವಿಗಳಲ್ಲಿ ಅತ್ಯಂತ ಶ್ರೇಷ್ಠನೆನಿಸಿಕೊಂಡಿದ್ದಾನೆ; ಸುಖ–ಕಷ್ಟ, ಮಾನ–ಅಪಮಾನ, ಗೌರವ–ಅಗೌರವ ಮೊದಲಾದ ಭಾವನೆಗಳನ್ನು ಅನುಭವಿಸಬಲ್ಲವನಾಗಿದ್ದಾನೆ. ಆದರೆ ಐದು 'ವ' ಕಾರಗಳನ್ನು ಹೊಂದದಿರುವ ಮನುಷ್ಯ ಹಿರಿಮೆ ಗೌರವಗಳಿಗೆ ಪಾತ್ರನಾಗಲಾರನೆಂದು ಈ ಕೆಳಗಿನ ಸೂಕ್ತಿ ಹೇಳುತ್ತದೆ.

**ವಸ್ತ್ರೇಣ, ವಪುಷಾ, ವಾಚಾ, ವಿದ್ಯಯಾ ವಿನಯೇನ ಚ।**

**ವಕಾರೈಃ ಪಂಚಭಿರ್ಹೀನಃ ನರೋ ನಾಯಾತಿ ಗೌರವಮ್।**

ಒಬ್ಬ ವ್ಯಕ್ತಿ ತಾನು ಧರಿಸುವ ಬಟ್ಟೆಯಿಂದ, ಬಟ್ಟೆಯ ವಿನ್ಯಾಸದಿಂದ ಗೌರವವನ್ನು ಪಡೆಯುತ್ತಾನೆ. ಶುಭ್ರವಾದ ಬಟ್ಟೆ ಆತನ ಅಂತರಂಗದ ನಿಷ್ಕಲ್ಮಷತೆಯನ್ನು ಸೂಚಿಸುತ್ತದೆ. ಮಹಾತ್ಮಾ ಗಾಂಧೀಜಿಯವರ ಉಡುಪು ಅವರ ಬದುಕಿನ ಸರಳತೆಯ ದ್ಯೋತಕ ಆಡಂಬರದ ಉಡುಪಿನವರನ್ನು ವೈಭವ ಪ್ರದರ್ಶಕರೆಂದು ಟೀಕಿಸುವುದುಂಟು.

ಅವರಿಗಾಗಿಯೇ ವ್ಯವಸ್ಥೆ ಮಾಡಿದ್ದ ಔತಣಕೂಟಕ್ಕೆ ಈಶ್ವರಚಂದ್ರ ವಿದ್ಯಾಸಾಗರರಿಗೆ ಪ್ರವೇಶ ದೊರಕಲಿಲ್ಲವೆಂಬುದು ಒಂದು ಘಟನೆ. ಈಶ್ವರಚಂದ್ರ ವಿದ್ಯಾಸಾಗರರಂತಹ ಪ್ರಧಾನ ಅತಿಥಿ ಇಷ್ಟು ಸರಳ ಉಡುಪಿನಲ್ಲಿ ಬರಬಹುದೆಂದು ಅಲ್ಲಿನ ದ್ವಾರಪಾಲಕ ನಿರೀಕ್ಷಿಸಿರಲಿಲ್ಲ. ಬೇರೆಯೇ ಉಡುಪಿನಲ್ಲಿ ಪುನಃ ಬಂದಾಗ ಗೌರವಪೂರ್ಣವಾಗಿ

ಅವರನ್ನು ಬರಮಾಡಿಕೊಳ್ಳಲಾಯಿತು. ಊಟಕ್ಕೆ ಕುಳಿತ ಈಶ್ವರಚಂದ್ರರು ಭಕ್ಷಭೋಜ್ಯಗಳನ್ನು ತಮ್ಮ ಉಡುಗೆಗಳಿಗೆ ತೋರಿಸಿ, 'ತಿನ್ನಿ, ತಿನ್ನಿ' ಎನ್ನುತ್ತಿದ್ದರಂತೆ. ಕಾರಣ ಕೇಳಿದವರಿಗೆ, "ನೋಡಿ ಸ್ವಾಮಿ, ಬೇರೆ ಉಡುಪಿನಲ್ಲಿದ್ದ ನನಗೆ ಈ ಭೋಜನಕೂಟಕ್ಕೆ, ಪ್ರವೇಶ ದೊರಕಲಿಲ್ಲ. ಈ ವೈಭವದ ಪೋಷಾಕಿನಿಂದಾಗಿಯೇ ನನಗೆ ಇಲ್ಲಿ ಪ್ರವೇಶ ದೊರಕಿದೆ. ಆದುದರಿಂದ ಈ ಔತಣದ ಸವಿ ಈ ಉಡುಪುಗಳಿಗೇ ಸಲ್ಲಬೇಕು". ಎಂದು ವ್ಯಂಗ್ಯವಾಡಿದರಂತೆ.

ಮನುಷ್ಯನ ಅಂತರಂಗದ ಭಾವನೆಗಳು ಆತನ ಮುಖದಲ್ಲಿ ವ್ಯಕ್ತವಾಗುತ್ತವೆ. ಆತ ನಿಲ್ಲುವ ಭಂಗಿಯಿಂದ, ಹಾವ-ಭಾವಗಳಿಂದ ವ್ಯಕ್ತಿಯ ಯೋಗ್ಯತೆಯನ್ನು ಅಳೆಯಲಾಗುತ್ತದೆ. ಜಗದ್ಗುರುಗಳ, ಮಹಾರಾಜರ ಎದುರುನಿಲ್ಲುವ ಭಂಗಿಯೇ ಬೇರೆ. ಒಬ್ಬಾತ ನಿಲ್ಲುವ ಭಂಗಿಯಿಂದಲೇ ಆತ ಸೋಮಾರಿಯೋ, ಉದ್ಧಟನೋ, ವಿಧೇಯನೋ ಎಂದು ಗುರುತಿಸಲಾಗುತ್ತದೆ.

"ಮಾತಿನಿಂ ನಗೆ-ನುತಿಯು, ಮಾತಿನಿಂ ಹಗೆ-ಕೊಲೆಯು, ಮಾತಿನಿಂ ಸರ್ವ ಸಂಪದವು" ಎಂದು ಸರ್ವಜ್ಞ ಹೇಳುವಂತೆ ಮನುಷ್ಯ ಮಾತಿನಿಂದಲೇ ಏನೆಲ್ಲ ಗಳಿಸಬಲ್ಲ ಮತ್ತು ಎಲ್ಲವನ್ನೂ ಕಳೆದುಕೊಳ್ಳಬಲ್ಲ. ಮಾತೇ ಮಾನವನ ಸಂಪತ್ತು. 'ಮಾತು ಆಡಿದರೆ ಹೋಯ್ತು, ಮುತ್ತು ಒಡೆದರೆ ಹೋಯ್ತು' ಎಂಬ ಗಾದೆಯಲ್ಲಿ ಮಾತಿನ ಮಹತ್ವ ಅಡಗಿದೆ. 'ಬಾಯಿ ಬಿಟ್ಟರೆ ಬಣ್ಣಗೇಡು' ಎಂಬ ಹಿರಿಯರ ಉಕ್ತಿಯಲ್ಲಿ ಮಾತೇ ಮನುಷ್ಯನ ಯೋಗ್ಯತೆಯ ಅಳತೆಗೋಲು ಎಂಬುದು ಸ್ಪಷ್ಟವಾಗುತ್ತದೆ.

ತನ್ನಲ್ಲಿರುವ ವಿದ್ಯೆಯಿಂದಲೂ, ಮನುಷ್ಯ ಅಪಾರ ಗೌರವವನ್ನು ಸಂಪಾದಿಸುತ್ತಾನೆ. 'ವಿದ್ವಾನ್ ಸರ್ವತ್ರ ಪೂಜ್ಯತೇ'. ವಿದ್ವಾಂಸನಿಗೆ ಎಲ್ಲೆಲ್ಲೂ, ಯಾವಾಗಲೂ ಎಲ್ಲ ರೀತಿಯ ಗೌರವ ಸಲ್ಲುತ್ತದೆ.

**ಅಭಿವಾದನ ಶೀಲಸ್ಯ ನಿತ್ಯಂ ವೃದ್ಧೋಪಸೇವಿನಃ।**
**ಚತ್ವಾರಿ ತಸ್ಯ ವರ್ಧಂತೇ ಆಯುರ್ವರ್ಚೋರ್ಯಶೋಬಲಮ್ ॥**

ವಿದ್ಯೆಯಿಂದ ಬರುವ ಸಂಸ್ಕಾರವೇ ವಿನಯ. ಹಿರಿಯರೊಂದಿಗೆ ಯಾವಾಗಲೂ ತಗ್ಗಿ-ಬಗ್ಗಿ ನಡೆದುಕೊಳ್ಳುವ, ವಿನಯದಿಂದ ವ್ಯವಹರಿಸುವವನ ಆಯಸ್ಸು, ಸಂಪತ್ತು, ಕೀರ್ತಿ, ಶಕ್ತಿ ವರ್ಧಿಸುತ್ತದೆ. 'ಎನಗಿಂತ ಕಿರಿಯರಿಲ್ಲ, ನಿನಗಿಂತ ಹಿರಿಯರಿಲ್ಲ' ಎಂಬ ವಚನದಂತೆ ಎಲ್ಲರೊಡನೆ ವಿನಯದಿಂದ ವರ್ತಿಸುವವನು ಸ್ವತಃ ಗೌರವ ಪಾತ್ರನಾಗುತ್ತಾನೆ.

ಹೀಗೆ ವಸ್ತ್ರ, ವಪು, ವಾಕ್, ವಿದ್ಯೆ, ವಿನಯ ಎಂಬ ಪಂಚವಕಾರಗಳಿಂದ ಮನುಷ್ಯ ಗೌರವಕ್ಕೆ ಪಾತ್ರನಾಗುತ್ತಾನೆ. ಗೌರವ ಹಣ ಪಾವತಿಸಿ ಖರೀದಿಸುವ ವಸ್ತುವಲ್ಲ. ಅದು ಆತನಲ್ಲಿ ಜಾಗೃತವಾಗಿದ್ದರೆ ಮಾತ್ರ ಇತರರಿಗೆ ಸಲ್ಲಿಸಲು ಸಾಧ್ಯ. ಆದುದರಿಂದ ಇನ್ನೊಬ್ಬರಿಂದ ತಾನು ನಿರೀಕ್ಷಿಸುವ ಗೌರವಕ್ಕೆ ಅರ್ಹನಿದ್ದೇನೆಯೇ ಎಂದು ಆತ್ಮ ವಿಮರ್ಶೆ ಮಾಡಿಕೊಳ್ಳುವುದು ಅಗತ್ಯ. ತನ್ನಲ್ಲಿಲ್ಲದ ಗೌರವವನ್ನು ಇತರರಿಗೆ ಸಲ್ಲಿಸಲೂ ಸಾಧ್ಯವಾಗದು, ಇತರರಿಂದ ಅದನ್ನು ನಿರೀಕ್ಷಿಸಲೂಬಾರದು.



# ಚತುರ್ವಿಂಶತಿ ಗುರವಃ

ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥ ಸಿದ್ಧಿಗಾಗಿ ನಿರಂತರ ಕಲಿಕೆಯೇ ಮಾನವ ಜೀವನ. ಪ್ರಕೃತಿಯೇ ಕಲಿಕೆಯ ಮಹಾ ಪಾಠಶಾಲೆ. ಜೀವನದ ಗುರಿಸಾಧನೆಯ ಹಾದಿಯಲ್ಲಿ ಆತನು ನಿಸರ್ಗದ ಸ್ಥಾವರ ಜಂಗಮಗಳಿಂದ ಪಂಚಭೂತಗಳಿಂದ, ಪಶುಪಕ್ಷಿಗಳಿಂದ, ಆಬಾಲವೃದ್ಧರಿಂದ ಯುಕ್ತವಾದುದನ್ನು ಸ್ವೀಕರಿಸಬೇಕು. 'ಯುಕ್ತಿಯುಕ್ತಂವಚೋಗ್ರಾಹ್ಯಂ ಬಾಲಾದಪಿ ಶುಕಾದಪಿ' ಎಂಬ ಆರ್ಯೋಕ್ತಿಯೊಂದಿದೆ. ಅಂದರೆ ಯುಕ್ತಿಪೂರ್ಣವಾದ ಮಾತನ್ನು ವಯೋಗಣನೆಯಿಲ್ಲದೆ ಚಿಕ್ಕ ಬಾಲಕನಿಂದಲೂ, ಗಿಳಿಯಂತಹ ಪಕ್ಷಿಯಿಂದಲೂ ಕಲಿಯತಕ್ಕದ್ದಿದೆ. ಶ್ರೀಮದ್ಭಾಗವತದ 11ನೇ ಸ್ಕಂಧದಲ್ಲಿ ಶಿಕ್ಷಣ ನೀಡುವ 24 ಗುರುಗಳ ಪ್ರಸ್ತಾಪವಿದೆ.

**ಪೃಥಿವೀ ವಾಯುರಾಕಾಶಮಾಪೋऽಗ್ನಿಶ್ಚಂದ್ರಮಾ ರವಿಃ।**
**ಕಪೋತೋऽಜಗರಃ ಸಿಂಧುಃ ಪತಂಗೋ ಮಧುಕೃದ್ಗಜಃ॥**
**ಮಧುಹಾ ಹರಿಣೋಮೀನಃ ಪಿಙ್ಗಲಾ ಕುರರೋऽರ್ಭಕಃ।**
**ಕುಮಾರೀ ಶರಕೃತ್ಸರ್ಪಃ ಊರ್ಣನಾಭಿಃ ಸುಪೇಶಕೃತ್॥**

ಭೂಮಿಗೆ ಇನ್ನೊಂದು ಹೆಸರು ಕ್ಷಮಾ, ಹೊಲಸು ಮಾಡುವುದು, ಅಗೆಯುವುದು, ಬಿರುಗಾಳಿ, ಮಳೆ, ಬಿಸಿಲು ಎಲ್ಲವನ್ನೂ ಸಹಿಸುವ 'ಸರ್ವಂ ಸಹಾ' ಎಂಬ ಇನ್ನೊಂದು ಹೆಸರಿನ ಈ ಭೂಮಿಯಿಂದ ನಾವು ಸಹನೆ, ಕ್ಷಮಾಗುಣಗಳನ್ನು ಕಲಿಯಬೇಕು.

ವಾಯು ಸಮದರ್ಶಿ, ಯಾವುದೇ ಭೇದಭಾವವಿಲ್ಲದೆ ಸಮಸ್ತ ಜೀವಿಗಳ ಪ್ರಾಣಧಾರಣೆಗೆ ಆಧಾರವಾಗಿದೆ. ಸುಗಂಧ-ದುರ್ಗಂಧಗಳೆರಡರ ಸಂಪರ್ಕದಲ್ಲಿದ್ದರೂ ತಾನು ಸ್ವತಃ ವಾಸನೆಗಳಿಂದ ಮುಕ್ತವಾಗಿರುತ್ತದೆ. ಯಾವುದೇ ಭೋಗವಸ್ತುಗಳಿಂದಾವೃತರಾಗಿದ್ದರೂ ನಿರ್ಲಿಪ್ತರೂ, ಸಮದರ್ಶಿಗಳೂ ಆಗಿರಬೇಕೆಂದು ವಾಯು ನಮಗೆ ಉಪದೇಶಿಸುತ್ತದೆ.

ಭೂಮಿಯಲ್ಲಿ ಸಸ್ಯಗಳು ಬೆಳೆಯಲು, ಫಸಲು ಸಮೃದ್ಧವಾಗಲು ಕಾರಣವಾದ ನೀರು, ಆವಿಯಾಗಿ ಮಳೆ ಸುರಿಯುವ ಪ್ರಕ್ರಿಯೆ ನಡೆಯುವುದು ವಿಸ್ತಾರವಾದ ಆಕಾಶದಲ್ಲಿ. ಆದರೆ ಈ ಪ್ರಕ್ರಿಯೆಯಿಂದ ಆಕಾಶದಲ್ಲಿ ಯಾವುದೇ ವಿಶೇಷ ಪರಿಣಾಮ ವುಂಟಾಗುವುದಿಲ್ಲ. ತನ್ನಲ್ಲಿ ನಡೆಯುವ ಮಳೆ ಸುರಿಯುವ ಕಾರ್ಯಕ್ಕೂ ತನಗೂ ಸಂಬಂಧವೇ ಇಲ್ಲದಂತೆ ಆಕಾಶ ಇದ್ದು ಬಿಡುತ್ತದೆ. ಹಾಗೆಯೇ ದೇಹಕ್ಕೂ ಅದನ್ನು ಆಶ್ರಯಿಸಿದ ಆತ್ಮಕ್ಕೂ ಪರಸ್ಪರ ಸಂಬಂಧವಿಲ್ಲ ಎಂಬ ಸಂದೇಶವನ್ನು ಆಕಾಶ ಸಾರುತ್ತದೆ. 'ಜೀವನ' ಎಂಬುದು ನೀರಿನ ಪರ್ಯಾಯ ಪದ. ಇದು ಎಲ್ಲರ ಎಲ್ಲ ಕೊಳೆಯನ್ನೂ ತೊಳೆಯುತ್ತದೆ. ಆದರೆ ತಾನು ಸ್ವತಃ ಶುದ್ಧವಾಗಿಯೇ ಇರುತ್ತದೆ. ಯಾವ ಪಾತ್ರೆಯಲ್ಲಿ

ಹಾಕಿದರೆ ಅದೇ ಆಕಾರಕ್ಕೆ, ಯಾವ ಬಣ್ಣ ಹಾಕಿದರೂ ಅದೇ ಬಣ್ಣಕ್ಕೆ ಹೊಂದಿಕೊಳ್ಳುತ್ತದೆ; ಪರಂತು ತನ್ನತನವನ್ನು ಮಾತ್ರ ಕಳೆದುಕೊಳ್ಳುವುದಿಲ್ಲ. ನೀರಿನಂತೆ ನಾವು ಎಲ್ಲರೊಡನೆ ಬೆರೆತು, ಸ್ವಂತಿಕೆಯನ್ನು ಉಳಿಸಿಕೊಂಡು, ಎಲ್ಲರ ಮನಸ್ಸನ್ನೂ ತಿಳಿಯಾಗಿಸಿ, ಸ್ವತಃ ಪರಿಶುದ್ಧರಾಗಿರಬೇಕು.

ಅಗ್ನಿಯು ಹುಲ್ಲುಕಡ್ಡಿ, ಸಮಿಧ, ಕಟ್ಟಿಗೆ ಮೊದಲಾದಂತೆ ಅತಿ ಚಿಕ್ಕ ತುಣುಕಿನಲ್ಲೂ, ದೊಡ್ಡಮರದ ದಿಮ್ಮಿಯಲ್ಲೂ ಇದ್ದಾನೆ. ಆದರೆ ಇವು ಯಾವುವೂ ಇವನ ನಿಜಸ್ವರೂಪ ವಲ್ಲ. ಸರ್ವಭಕ್ಷಕನಾದ ಇವನು ಸರ್ವವ್ಯಾಪಿಯಾದ ಭಗವಂತನಂತೆ ಎಲ್ಲೆಂದರಲ್ಲಿ ಅವಶ್ಯಕತೆ ಇದ್ದಾಗ ಮಾತ್ರ ಪ್ರತ್ಯಕ್ಷನಾಗುತ್ತಾನೆ. ಎಲ್ಲವನ್ನೂ ದಹಿಸಿಯೂ ತನ್ನ ಅವಿನಾಶಿಯಾದ ಸ್ವರೂಪವನ್ನು ಕಾಯ್ದುಕೊಳ್ಳುತ್ತಾನೆ. ಅಗ್ನಿಯನ್ನು ತೇಜೋರೂಪದಲ್ಲಿ ಕಾಣುವಂತೆ ಸರ್ವವ್ಯಾಪಿಯಾದ ಭಗವಂತನನ್ನು ಪರಬ್ರಹ್ಮಸ್ವರೂಪದಲ್ಲಿ ಅರಿಯಬೇಕು.

ಸೂರ್ಯ ಕೊಳಚೆ, ಸ್ವಚ್ಛಪ್ರದೇಶ, ದೀನ, ದಲಿತ, ಬಡವ, ಬಲ್ಲಿದ, ಹಳ್ಳ, ನದಿ, ಪರ್ವತ, ಪಾಪಿ, ಪುಣ್ಯವಂತ, ಭಾಗ್ಯಹೀನ, ಭಾಗ್ಯವಂತ, ಕ್ರಿಮಿ, ಕೀಟ, ಪಶು, ಪಕ್ಷಿ– ಹೀಗೆ ಯಾವುದೇ ಭೇದಭಾವವಿಲ್ಲದೆ ಎಲ್ಲರ ಮೇಲೆ ತನ್ನ ಬೆಳಕನ್ನು ಬೀರುತ್ತಾನೆ. ಇವನಂತೆ ನಾವು ಸಮದರ್ಶಿಗಳಾಗಿರಬೇಕು. ನೀರನ್ನು ಆವಿಯಾಗಿಸಿ ಮಳೆ ಸುರಿಸಿ ಲೋಕಕ್ಕೆ ತಂಪನ್ನೆರೆಯುತ್ತಾನೆ. ನಾವೂ ಸಂಗ್ರಹಿಸಿ ಸತ್ಪಾತ್ರರಿಗೆ ದಾನ ಮಾಡಬೇಕು. ಹಲವು ಜಲಪಾತ್ರೆಗಳಲ್ಲಿ ಹಲವು ಬಿಂಬ ರೂಪದಲ್ಲಿ ಕಾಣುವ ಸೂರ್ಯನು ಒಬ್ಬನೇ. ಹಾಗೆಯೇ ಸಕಲ ಚರಾಚರಗಳಲ್ಲಿ ಪ್ರತ್ಯೇಕವಾಗಿ ಕಾಣುವ ಭಗವಂತನು ಒಬ್ಬನೇ ಎಂಬುದು ಸೂರ್ಯನಿಂದ ಪಡೆಯುವ ತಿಳುವಳಿಕೆ.

ಪೂರ್ಣಿಮಾಂತವಾಗಿ ಚಂದ್ರನ ಕಲೆಗಳು ವೃದ್ಧಿಯಾಗುತ್ತವೆಂದೂ ಅಮಾವಾಸ್ಯಾಂತ ವಾಗಿ ಕ್ಷೀಣಿಸುತ್ತವೆಂದೂ ಅವಾಸ್ತವ ಸಂಗತಿಯನ್ನು ನಾವು ನಂಬಿದ್ದೇವೆ. ವಾಸ್ತವ ಸಂಗತಿಯೆಂದರೆ ಚಂದ್ರನಿಗೆ ವೃದ್ಧಿಕ್ಷಯಗಳೆಂಬ ವಿಕಾರವೇ ಇಲ್ಲ. ಯೌವನ, ಜರಾ, ವ್ಯಾಧಿ, ಮರಣಗಳೇ ಮೊದಲಾದ ವಿಕಾರಗಳು ಕ್ಷಣಿಕವಾದ ದೇಹಕ್ಕೇ ಹೊರತು ನಾವು ಭ್ರಮಿಸುವಂತೆ ಆತ್ಮಕ್ಕಲ್ಲ ಎಂಬುದು ಚಂದ್ರನಿಂದ ಕಲಿಯಬೇಕಾದ ಪಾಠ.

"ಸ್ವಸ್ತಿಪಂಥಾಮನುಚರೇಮಸೂರ್ಯಾಚಂದ್ರಮಸಾವಿವ" (ಋಗ್ವೇದ)– ಸೂರ್ಯ ಚಂದ್ರರಂತೆ ಸನ್ಮಾರ್ಗದಲ್ಲಿ ಮುನ್ನಡೆಯೋಣ.

ಒಂದು ಆಲದ ಮರದಲ್ಲಿ ಪಾರಿವಾಳಗಳ ಕುಟುಂಬವೊಂದಿತ್ತು. ಒಂದು ದಿನ ಆಹಾರಾನ್ವೇಷಣೆಗಾಗಿ ತಂದೆತಾಯಿಗಳು ಹೋಗಿದ್ದಾಗ ಮರಿ ಪಾರಿವಾಳಗಳು ಬೇಡನ ಬಲೆಯಲ್ಲಿ ಬಿದ್ದವು. ತಾಯಿ ಪಾರಿವಾಳ ಆಹಾರ ಸಂಗ್ರಹಿಸಿ ಬಂದು ಬಲೆಯಲ್ಲಿ ಬಿದ್ದ ಮರಿಗಳನ್ನು ಕಂಡು ಮರುಗಿ ವ್ಯಾಮೋಹದಿಂದ ತಾನೂ ಮರಿಗಳೊಡನೆ ಬಲೆಗೆ ಬಿತ್ತು. ಗಂಡು ಹಕ್ಕಿ ಹಿಂದಿರುಗಿ ಬಲೆಯೊಳಗಿನ ಪ್ರೀತಿಯ ಸಂತಾನವನ್ನೂ ಮುದ್ದಿನ ಸಂಗಾತಿಯನ್ನೂ ಅಗಲಲಾರದೇ ತಾನೂ ಬೇಡನ ಬಲೆಯೊಳಗೆ ಸೇರಿಕೊಂಡಿತು.



ಪತ್ನೀಪುತ್ರ ವ್ಯಾಮೋಹದಿಂದ ಕುಟುಂಬ ನಿರ್ವಹಣೆಯಲ್ಲೇ ಆಸಕ್ತನಾಗಿರುವವನಿಗೆ ಮುಕ್ತಿ ಮಾರ್ಗ ಗೋಚರಿಸುವುದಿಲ್ಲವೆಂಬುದಕ್ಕೆ ಇದು ಉದಾಹರಣೆ.

ಹೆಬ್ಬಾವು ಯಾದೃಚ್ಛಿಕವಾಗಿ ದೊರಕುವ ಸತ್ವಭರಿತವಾದ ಅಥವಾ ರಸಹೀನವಾದ ಆಹಾರವನ್ನು ತಿಂದು ತೃಪ್ತಿಪಡುತ್ತದೆ. ನಾವು ಜಿಹ್ವಾಚಾಪಲ್ಯಕ್ಕೆ ವಶರಾಗದೇ ಅವರವರ ಪ್ರಾರಬ್ಧಕ್ಕನುಗುಣವಾಗಿ ದೊರಕುವ, ಶರೀರಪೋಷಣೆಗೆ ಬೇಕಾಗುವಷ್ಟೇ ಆಹಾರವನ್ನು ಸೇವಿಸಬೇಕು.

ಸಮುದ್ರನಿಂದ ನಾವು ಕಲಿಯಬೇಕಾದುದು ಬಹಳಷ್ಟಿದೆ. ಇವನು 'ರತ್ನಾಕರ'. ಆದರೆ ಇವನ ಶ್ರೀಮಂತಿಕೆ ಮೇಲ್ನೋಟಕ್ಕೆ ಕಾಣುವುದಿಲ್ಲ. ನಾವು ನಮ್ಮ ಶ್ರೀಮಂತಿಕೆಯ ಆಡಂಬರವನ್ನು ಪ್ರದರ್ಶಿಸಬಾರದೆಂಬುದು ಇಲ್ಲಿನ ಉಪದೇಶ. ಸಮುದ್ರದ ಆಳ–ಅಗಲವನ್ನು ಅಳೆಯಲಾಗದು. ನಾವು ಅವನಂತೆ ಗಂಭೀರವಾಗಿರಬೇಕು. ಅಲೆಗಳ ಏರಿಳಿತಗಳಲ್ಲೂ ಇವನು ತನ್ನ ಎಲ್ಲೆಯನ್ನೂ ಮೀರುವುದಿಲ್ಲ. ನಾವೂ ಸಿರಿತನ ಬಡತನಗಳಲ್ಲಿ ಸಮಚಿತ್ತರಾಗಿರಬೇಕು.

ದೀಪದ ಪ್ರಭೆಯಿಂದ ಆಕರ್ಷಿತವಾದ ಪತಂಗವು ಅದರ ಸುತ್ತಲೂ ಹಾರಾಡಿ ತನ್ನ ಜೀವ ಕಳೆದುಕೊಳ್ಳುವಂತೆ ಅವಿವೇಕಿಯಾದ ಮನುಷ್ಯ ಹೆಣ್ಣು ಹೊನ್ನು ಮಣ್ಣುಗಳಿಗೆ ಆಕರ್ಷಿತನಾಗಿ, ಅವುಗಳ ಸುತ್ತಲೂ ಗಿರಿಕಿ ಹೊಡೆಯುತ್ತಾ ಸ್ವಯಂ ವಿನಾಶ ಹೊಂದುತ್ತಾನೆ.

ಜೇನುನೊಣಗಳು ಸಹಸ್ರಾರು ಹೂವುಗಳಿಂದ ಮಕರಂದವನ್ನು ಹೀರಿ ಜೇನನ್ನು ತಯಾರಿಸಿ ಗೂಡಿನಲ್ಲಿ ಸಂಗ್ರಹಿಸಿಡುತ್ತವೆ. ಅಂತಹ ನೊಣಗಳನ್ನೇ ಸಾಯಿಸಿ ಬೇರೆಯವರು ಮಧುವನ್ನು ಅಪಹರಿಸುತ್ತಾರೆ. ನಾವು ಅನೇಕ ಗ್ರಂಥಗಳಿಂದ ಜ್ಞಾನಾರ್ಜನೆ ಮಾಡಬೇಕು, ಇತರರಿಗೆ ಬೋಧಿಸಬೇಕು. ಧನವನ್ನು ಸಂಗ್ರಹಿಸಬೇಕು, ಸತ್ಪಾತ್ರರಿಗೆ ದಾನ ಮಾಡಿ ಸದ್ವಿನಿಯೋಗ ಮಾಡಬೇಕು. ಹಾಗಲ್ಲದಿದ್ದರೆ ಜ್ಞಾನ ಮಸಕಾಗುತ್ತದೆ. ಕಷ್ಟಾರ್ಜಿತ ಸಂಪತ್ತು ಪರರ ಪಾಲಾಗುತ್ತದೆ, ಜೀವಕ್ಕೂ ಅಪಾಯ ಉಂಟಾಗುತ್ತದೆ.

ಹೆಣ್ಣಾನೆಯ ಗೊಂಬೆಯಿಂದ ಆಕರ್ಷಿತವಾದ ಸಲಗವು ಖೆಡ್ಡಾದಲ್ಲಿ ಬೀಳುತ್ತದೆ. ಹೆಣ್ಣಾನೆಗಾಗಿಯೇ ಎರಡು ಮದಗಜಗಳು ಕಾದಾಡಿ ದುರ್ಬಲವಾದ ಆನೆ ಸಾಯಲು ಕರಿಣಿಯೇ ಕಾರಣ. ಕಾಮಮೋಹಿತನಾಗದೇ ಇಂದ್ರಿಯ ನಿಗ್ರಹಿಯಾಗಿರಬೇಕೆಂಬುದನ್ನು ಆನೆಯಿಂದ ಕಲಿಯಬೇಕು.

ಇಂದ್ರಿಯಗಳನ್ನು ಹುಚ್ಚೆಬ್ಬಿಸುವ ಸಂಗೀತವನ್ನು ಕೇಳುತ್ತಾ ಜಿಂಕೆಯು ಬೇಡನ ಬಲೆಗೆ ಬೀಳುತ್ತದೆ. ಋಷ್ಯಶೃಂಗ ಮುನಿಯು ನೃತ್ಯಗೀತಾದಿಗಳಿಂದ ಆಕರ್ಷಿತನಾಗಿ ಜಿತೇಂದ್ರಿಯ ತ್ವವನ್ನು ಕಳೆದುಕೊಂಡು ಸ್ತ್ರೀಮೋಹಕ್ಕೊಳಗಾದ. ಆದುದರಿಂದ ನಾವು ಇಂದ್ರಿಯಗಳನ್ನು ದುಷ್ಪ್ರಲೋಭನಗೊಳಿಸುವ ಗಾಯನಗಳಿಂದ ದೂರವಿರಬೇಕು.

ಮಾಂಸದ ತುಣುಕಿನ ಆಶೆಯಿಂದ ಮೀನು ಬೆಸ್ತನ ಗಾಳಕ್ಕೆ ಸಿಕ್ಕಿ ಬೀಳುವಂತೆ ನಾವು ಜಿಹ್ವಾಚಾಪಲ್ಯದಿಂದ ರೋಗದ ಬಲೆಗೆ ಬೀಳಬಾರದು. ವೇಶ್ಯೆಯಿಂದ ಕಲಿಯತಕ್ಕದ್ದೇನಿದೆ ಯೆಂಬ ತಾತ್ಸಾರ ಬೇಡ. ಪಿಂಗಲಾ ಎಂಬ ಸುರಸುಂದರಿ ಗಣಿಕೆಯೊಬ್ಬಳು ಅತ್ಯಾಶೆಯಿಂದ ಸಾಮಾನ್ಯ ವಿಟರನ್ನೆಲ್ಲಾ ತಿರಸ್ಕರಿಸುತ್ತಾ ಅತಿ ಶ್ರೀಮಂತ ಪುರುಷನಿಗಾಗಿ ಕಾದು ಕಾದು ಬೇಸತ್ತು ನಿರಾಶಳಾಗಿ ಕೊನೆಗೆ ವಿರಕ್ತಳಾಗುತ್ತಾಳೆ. "ಆಶಾಹಿ ಪರಮಂ ದುಃಖಂ ನೈರಾಶ್ಯಂ ಪರಮಂ ಸುಖಮ್" ಎಂಬ ತತ್ವವನ್ನರಿತು ಭಗವಂತನನ್ನು ಭಜಿಸಿ ಸುಖಿಯಾಗುತ್ತಾಳೆ. "ಆಶೆಯನ್ನು ತ್ಯಜಿಸಿ ನಿತ್ಯತೃಪ್ತರಾಗಿ ಭಗವದಾರಾಧನೆಯಿಂದ ಶಾಶ್ವತ ಸುಖ ಪಡೆಯಿರಿ" ಎಂದು ವೇಶ್ಯೆಯನ್ನು ಉದಾಹರಿಸಿ ಭಾಗವತ ಉಪದೇಶಿಸುತ್ತದೆ.

ಗುಬ್ಬಚ್ಚಿಯೊಂದು ಕೊಕ್ಕಿನಲ್ಲಿ ಮಾಂಸದ ಚೂರನ್ನು ಕಚ್ಚಿಕೊಂಡಿತ್ತು. ಆ ಮಾಂಸದಾಶೆ ಗಾಗಿ ಇತರೆ ಬಲಾಢ್ಯ ಪಕ್ಷಿಗಳು ಅದನ್ನು ಪೀಡಿಸುತ್ತಿದ್ದವು. ಉಪದ್ರವಕ್ಕೆ ಹೆದರಿದ ಗುಬ್ಬಚ್ಚಿ ಮಾಂಸವನ್ನು ಕೆಳಕ್ಕೆ ಹಾಕಿ ದುಷ್ಟಪಕ್ಷಿಗಳ ಕಾಟದಿಂದ ಬಿಡುಗಡೆ ಹೊಂದಿತು. ನಮ್ಮಲ್ಲಿರುವ ಹೇರಳ ಸಂಪತ್ತಿನಾಶೆಯಿಂದ ದುಷ್ಟರು ಪೀಡಿಸುತ್ತಾರೆ. ಕಳ್ಳಕಾಕರಿಂದ ಭಯವಾಗುತ್ತದೆ. ಜೀವಕ್ಕೆ ಆಪತ್ತುಂಟಾಗುತ್ತದೆ. ಆದುದರಿಂದ ಸಂಪತ್ತನ್ನು ಸಂಗ್ರಹಿಸವುದರೊಂದಿಗೆ ತ್ಯಾಗಬುದ್ಧಿಯನ್ನೂ ಬೆಳೆಸಿಕೊಳ್ಳಿ ಎಂದು ಗುಬ್ಬಚ್ಚಿ (ಕುರರ) ಉಪದೇಶಿಸುತ್ತದೆ. ನಿರ್ಲಿಪ್ತತೆ ಮತ್ತು ಆನಂದವನ್ನು ಮುಗ್ಧ ಬಾಲಕನಲ್ಲಿ ಹುಡುಕಬೇಕು.

ಏಕಾಕಿಯಾಗಿ ತಪಸ್ಸನ್ನಾಚರಿಸಬೇಕೆಂಬುದು ಭಾಗವತದ ಇನ್ನೊಂದು ಪಾಠ. ಕನ್ಯಾರ್ಥಿಗಳಾಗಿ ಆಗಮಿಸಿದ ಅತಿಥಿಗಳ ಸತ್ಕಾರಕ್ಕಾಗಿ ಕುಮಾರಿಯೊಬ್ಬಳು ಭತ್ತ ಕುಟ್ಟುವ ಪ್ರಸಂಗ. ಕೈಯಲ್ಲಿನ ಬಳೆಗಳ ಶಬ್ದ ಅತಿಥಿಗಳಿಗೆ ಕೇಳಿಸಿದರೆ ಆಭಾಸವಾಗುತ್ತದೆಂಬ ಭೀತಿಯಿಂದ ಒಂದೊಂದೇ ಬಳೆಗಳನ್ನುಳಿಸಿಕೊಂಡು ಉಳಿದವುಗಳನ್ನು ವಿಸರ್ಜಿಸಿದಳು. ಈಗ ಬಳೆಗಳ ಶಬ್ದ ನಿಂತಿತು. ನಿಶ್ಯಬ್ದವಾಗಿ ಕೆಲಸ ಸಾಗಿತು. ಅನೇಕ ಜನರ ಗುಂಪಿನಲ್ಲಿ ಜಗಳ, ವಿನೋದ, ಗದ್ದಲ ಜಾಸ್ತಿ. ಕೆಲಸ ಸಾಗುವುದಿಲ್ಲ. ಆದುದರಿಂದ ಏಕಾಂಗಿಯಾಗಿ ತಪಸ್ಸನ್ನಾಚರಿಸಿ ಸಿದ್ಧಿ ಪಡೆಯಬೇಕು.

ಲಕ್ಷ್ಯಭೇದನದ ಏಕಾಗ್ರತೆಯನ್ನು ವ್ಯಾಧನಿಂದ ಕಲಿಯಬೇಕು. ಗೆದ್ದಲು ಹುಳುಗಳು ಅತಿ ಕಷ್ಟದಿಂದ ನಿರ್ಮಿಸಿದ ಹುತ್ತದಲ್ಲಿ ಹುಳುಗಳು ಸುಖಪಡುವುದಿಲ್ಲ. ಹಾವು ಸೇರಿಕೊಂಡು ಸುಖ ಪಡುತ್ತದೆ. ಕ್ಷಣಭಂಗುರವಾದ ಈ ಶರೀರದ ರಕ್ಷಣೆಗಾಗಿ ಭವ್ಯ ಭವನದ ನಿರ್ಮಾಣದ ಅಗತ್ಯವಿಲ್ಲ ಎಂಬುದು ಇಲ್ಲಿನ ನೀತಿ.

ಭಗವಂತ ತನ್ನ ಮಾಯಾಸೃಷ್ಟಿಯನ್ನು ತಾನೇ ಲಯಗೊಳಿಸುತ್ತಾನೆಂಬ ರಹಸ್ಯವನ್ನು ತಾನು ನೇಯ್ದ ಬಲೆಯನ್ನು ತಾನೇ ನಾಶಪಡಿಸುವ ಜೇಡನ ಉದಾಹರಣೆಯಿಂದಲೂ, ನಿರಂತರ ಧ್ಯಾನದಿಂದ ಭಗವಂತನಲ್ಲಿ ತಾದಾತ್ಮ್ಯ ಹೊಂದುವಿಕೆಯನ್ನು ಕಣಜದ ಹುಳುವಿನಿಂದಲೂ ಕಲಿಯಬೇಕೆಂಬುದು ಭಾಗವತದ ಉಕ್ತಿಯಾಗಿದೆ.





# ಆಚಾರ ಅನುಷ್ಠಾನಗಳ ಅಂತರಾರ್ಥ

## ಸಂಕಲ್ಪ

ಸಂಕಲ್ಪವೆಂದರೆ ಮನಸ್ಸಿನ ಒಂದು ಗುಣ. ಅಂದರೆ ಸುಖ, ವಿದ್ಯೆ ಮೊದಲಾದ ಶುಭಕಾಮನೆಗಳ ಪ್ರಾಪ್ತಿಗಾಗಿ ಪ್ರಯತ್ನ ಮಾಡುವ ಮಾನಸಿಕ ಇಚ್ಛೆ. "ಸಂಕಲ್ಪಃ ಕರ್ಮಮಾನಸಂ" ಎಂಬುದು ಅಮರಸಿಂಹನ ನಿರೂಪಣೆ. ತಾನು ಇಂತಹ ಕಾರ್ಯ ವನ್ನು ಮಾಡುವವನಿದ್ದೇನೆ ಎಂದು ಮಾನಸಿಕವಾಗಿ ಮಾಡುವ ನಿರ್ಧಾರ ಮತ್ತು ಅಂತಹ ಮಾನಸಿಕ ನಿರ್ಧಾರವನ್ನು ಪೂರ್ತಿಗೊಳಿಸಲು ಇರಬೇಕಾದ ಬಯಕೆಯೇ ಸಂಕಲ್ಪ. ಈ ಪದಕ್ಕೆ 'ದೇಶ-ಕಾಲ ಸಂಕೀರ್ತನ' ಎಂಬ ರೂಢಿಯ ಅರ್ಥವೂ ಇದೆ. ಅಂದರೆ ತಾನು ಇರುವ ಸ್ಥಳದ ಮಹತ್ವವೇನು? ಯಾವ ಕಾಲದಲ್ಲಿ ಈ ಬಯಕೆಯನ್ನು ಮಾಡುತ್ತಿದ್ದೇನೆ. ಇದರ ಪೂರ್ತಿಗೆ ನನ್ನಲ್ಲಿರುವ ಸಾಮರ್ಥ್ಯವೇನು? ಮತ್ತು ತಾನು ಆಚರಿಸಲಿರುವ ಕರ್ಮದ ಫಲವೇನು? ಎಂಬುದರ ಪೂರ್ವ ಚಿಂತನೆಯೇ ಸಂಕಲ್ಪ.

**ಸಂಕಲ್ಪದ ಸಾಮಾನ್ಯ ಪ್ರಯೋಜನ :** ಅಸತ್ಕಾರ್ಯಗಳಿಂದ ವಿಮುಖತೆ ಮತ್ತು ಸತ್ಕಾರ್ಯದಲ್ಲಿ ಪ್ರವೃತ್ತಿ ಹಾಗೂ ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರಷಾರ್ಥಗಳ ಸಾಧನೆಗಾಗಿ ಭಗವಂತನ ಸ್ಮರಣೆ-ಪ್ರಾರ್ಥನೆಗಳು ಸಂಕಲ್ಪದ ಸಾಮಾನ್ಯ ಪ್ರಯೋಜನಗಳು.

**1.ಆಚಮನ, 2. ಪ್ರಾಣಾಯಾಮ, 3. ಇಚ್ಛಾಕಥನ ಹಾಗೂ ಭಗವತ್ಪ್ರಾರ್ಥನೆ ಎಂದು ಸಂಕಲ್ಪದಲ್ಲಿ ಮೂರು ಹಂತಗಳು.**

**ಆಚಮನ :**ವೇದಗಳ/ಭಗವಂತನ ದಿವ್ಯನಾಮಗಳ ಸ್ಮರಣೆಯೊಂದಿಗೆ ಶುದ್ಧ ಜಲವನ್ನು (ಗೋಕರ್ಣಾಕೃತಿ ಬಲಹಸ್ತದಲ್ಲಿ) ಉದ್ದಿನಕಾಳು ಮುಳುಗುವಷ್ಟು ನೀರನ್ನು ನಿಶ್ಯಬ್ದವಾಗಿ ಕುಡಿಯುವುದು. ನಂತರ ಭಗವಂತನ ನಾಮಗಳ ಹಾಗೂ ಜಗಚ್ಚಕ್ಷುವಾದ ಸೂರ್ಯ, ಚಂದ್ರ, ಜೀವನಾಧಾರವಾದ ಪ್ರಾಣವಾಯು, ಜೀವಿಗಳ ಆಧಾರನೆಲೆಯಾದ ಪೃಥಿವೀ, ಅಗ್ನಿ ಮೊದಲಾದವುಗಳನ್ನು ಸ್ಮರಿಸುತ್ತಾ ಒದ್ದೆಯಾದ ನಿರ್ದಿಷ್ಟಬೆರಳುಗಳಿಂದ, ಭ್ರೂಮಧ್ಯ, ಕಣ್ಣು, ಕಿವಿ, ಮೂಗು, ಭುಜ ಮೊದಲಾದ ಜ್ಞಾನಪ್ರಚೋದಕವಾದ ಅವಯವಗಳನ್ನು ಸ್ಪರ್ಶಿಸುವುದು. ಆತ್ಮಶುದ್ಧಿಗಾಗಿ ಮಾಡುವ ಈ ಕ್ರಿಯೆಗೆ ಶುದ್ಧಾಚಮನವೆಂದೂ ಹೆಸರಿದೆ.

**ಪ್ರಾಣಾಯಾಮ :** ಎಂಬುದಕ್ಕೆ ಪ್ರಾಣವಾಯುವನ್ನು ಹಿಡಿದಿಟ್ಟುಕೊಳ್ಳುವುದು ಎಂದು ರೂಢಿಯಲ್ಲಿರುವ ಸರಳಾರ್ಥ. ವ್ಯಾಹೃತಿ ಮತ್ತು ಸಪ್ತ ಲೋಕಗಳನ್ನು ಮೆಲ್ಲಗೆ ಉಚ್ಚರಿಸುತ್ತಾ ಮೂಗಿನ ಎಡಗಡೆಯ ರಂಧ್ರದಿಂದ ಉಸಿರನ್ನು ಒಳಗೆ ಎಳೆದು ಕೊಳ್ಳುವುದು (ಪೂರಕ), ಉಸಿರನ್ನು ಹಿಡಿದಿಟ್ಟುಕೊಳ್ಳುವುದು (ಕುಂಭಕ) ಮತ್ತು ಮೂಗಿನ

ಬಲಗಡೆಯ ರಂಧ್ರದಿಂದ ಉಸಿರನ್ನು ಹೊರಗೆ ಬಿಡುವುದು (ರೇಚಕ)– ಪ್ರಾಣಾಯಾಮದ ಮೂರು ಹಂತಗಳು. ತೋರ್ಬೆರಳು ಮತ್ತು ಮಧ್ಯದ ಬೆರಳನ್ನು ಒಳಕ್ಕೆ ಮಡಚಿ (ಅಥವಾ ನೀಡಿ) ಅಂಗುಷ್ಠದಿಂದ ಮೂಗಿನ ಬಲರಂಧ್ರವನ್ನೂ, ಅನಾಮಿಕಾ ಕಿರುಬೆರಳುಗಳಿಂದ ಮೂಗಿನ ಎರಡರಂಧ್ರವನ್ನೂ ಮುಚ್ಚಿ 16 ಸೆಕೆಂಡುಗಳು ಕುಂಭಕ ಸ್ಥಿತಿಯಲ್ಲಿರಬೇಕೆಂಬುದು ಪ್ರಾಣಾಯಾಮದ ರೂಢಿಯಲ್ಲಿರುವ ವಿಧಾನ. ಈ ರೀತಿ ಮೂರು ಬಾರಿ ಮಾಡುವುದರಿಂದ ಒಂದು ಪ್ರಾಣಾಯಾಮ ಕ್ರಿಯೆ ಪೂರ್ತಿಯಾಗುತ್ತದೆ.

ಹೊರಗಿನಿಂದ ದೇಹದೊಳಕ್ಕೆ ಪ್ರವೇಶಿಸುವ ವಾಯುವಿಗೆ 'ಶ್ವಾಸ' ವೆಂದೂ ಒಳಗಿನಿಂದ ಹೊರಕ್ಕೆ ಹೋಗುವ ವಾಯುವಿಗೆ 'ಪ್ರಶ್ವಾಸ'ವೆಂದೂ ಹೆಸರು. ಹೀಗೆ ಹೊರಗೂ ಒಳಗೂ ಗತಿಶೀಲವಾದ ವಾಯುವನ್ನು ಯುಕ್ತಿಪೂರ್ವಕವಾಗಿ ನಿಧಾನ–ನಿಧಾನವಾಗಿ ಅಭ್ಯಾಸದ ಮೂಲಕ ಜಯಿಸಬೇಕು. ಅಂದರೆ ಸ್ಥಿರವನ್ನಾಗಿ ಮಾಡಿ ಅದರ ಗತಿಯನ್ನು ನಿಲ್ಲಿಸಬೇಕು. ಮೂಗನ್ನು ಕೈಯಿಂದ ಎಂದೂ ಅದುಮಬಾರದು, ಆದರೆ ಜ್ಞಾನದಿಂದಲೇ ಶ್ವಾಸವನ್ನು ತಡೆಯಬೇಕು. (ಸ್ವಾಮಿ ದಯಾನಂದ ಸರಸ್ವತಿಗಳ ವೇದಭಾಷ್ಯ: ಪುಟ 509 ಈ ವಿಧಾನ ರೂಢಿಯಲ್ಲಿಲ್ಲ.)

ಈ ಪ್ರಾಣಾಯಾಮ ಕ್ರಿಯೆಯಿಂದ ಶ್ವಾಸಕೋಶಕ್ಕೆ ವ್ಯಾಯಾಮವುಂಟಾಗುತ್ತದೆ. ಹೃದಯಕ್ಕೆ ಆಮ್ಲಜನಕದ ಪೂರೈಕೆಯಾಗಿ ದೇಹದಲ್ಲಿನ ಇಂಗಾಲಾಮ್ಲ ಹೊರಗೆ ಬಂದು ಆಯಸ್ಸು, ಆರೋಗ್ಯ ವೃದ್ಧಿಯಾಗುತ್ತದೆಂಬುದು ಎಲ್ಲರ ಸಾಮಾನ್ಯ ತಿಳುವಳಿಕೆ. ಯೋಗಶಾಸ್ತ್ರದಲ್ಲಿ ಪ್ರಾಣಾಯಾಮದ ಪ್ರಯೋಜನ ಮತ್ತು ಮಹತ್ವದ ಬಗ್ಗೆ ಅತಿ ವಿಸ್ತಾರವಾದ ವಿವರಣೆಯಿದೆ. ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳ ಅನುಷ್ಠಾನ, ಪೂಜೆ ಮೊದಲಾದ ನಿತ್ಯಕರ್ಮಗಳಲ್ಲಿ ಕನಿಷ್ಠ 10–15 ಪ್ರಾಣಾಯಾಮಗಳಾಗುತ್ತವೆ. ಅಲ್ಲದೆ ನೈಮಿತ್ತಿಕವಾದ ವ್ರತ–ಕರ್ಮಾಚರಣೆಗಳಲ್ಲಿ ನಾಲ್ಕಾರು ಬಾರಿ ಕಡಿಮೆಯಿಲ್ಲದಂತೆ ಪ್ರಾಣಾಯಾಮ ಮಾಡಬೇಕಾಗುತ್ತದೆ. ಹೀಗಾಗಿ ಪ್ರಾಚೀನರು ಆಧುನಿಕರಿಗಿಂತ ಹೆಚ್ಚು ದೀರ್ಘಾಯುಷಿಗಳೂ, ಆರೋಗ್ಯವಂತರೂ, ದೃಢಕಾಯರೂ ಆಗಿರುತ್ತಿದ್ದುದರ ರಹಸ್ಯಗಳಲ್ಲಿ ಪ್ರಾಣಾಯಾಮವೂ ಒಂದು ಎಂಬುದು ನಂಬಬಹುದಾದ ಸತ್ಯ. ಮಂತ್ರೋಚ್ಚಾರಣೆಯ ಜತೆಗೆ, ದೃಷ್ಟಿಯನ್ನು ಕೇಂದ್ರೀಕರಿಸಿ, ಮನಸ್ಸಿನ ಏಕಾಗ್ರತೆಯೊಂದಿಗೆ ಶಾಸ್ತ್ರೀಯ ವಿಧಾನದಿಂದ ಪ್ರಾಣಾಯಾಮ ಮಾಡುವುದರಿಂದ ರಕ್ತ ಶುದ್ಧಿಯಾಗುವುದಲ್ಲದೇ ದೇಹದಲ್ಲಿ ಒಂದು ವಿಧವಾದ ವಿದ್ಯುತ್ (ಶಕ್ತಿ) ಉತ್ಪನ್ನವಾಗುತ್ತದೆ. ಇದರಿಂದಾಗಿ ಮಾನಸಿಕವಾಗಿಯೂ, ಶಾರೀರಿಕವಾಗಿಯೂ, ವಿಶೇಷ ಉತ್ಸಾಹವುಂಟಾಗುತ್ತದೆ. ಯೋಗದ ಮೂಲಕ, ದೇಹದಿಂದ ಹೊರಹೊಮ್ಮುವ ವಿದ್ಯುತ್ತಿನಿಂದ 60 ಕ್ಯಾಂಡಲ್ ಬಲ್ಬನ್ನು ಉರಿಸಿ, ದೆಹಲಿಯಲ್ಲಿ ಪತ್ರಕರ್ತರೆದುರು ಒಬ್ಬ ಯೋಗಿಗಳು ನೀಡಿದ ಪ್ರಾತ್ಯಕ್ಷಿಕೆಯ ವಿಸ್ತೃತವಾದ ವರದಿಯೊಂದು ಕೆಲವು ವರ್ಷಗಳ ಹಿಂದೆ ಪ್ರಜಾವಾಣಿಯಲ್ಲಿ ಪ್ರಕಟವಾಗಿತ್ತು. ಪ್ರಾಣಾಯಾಮದ ವೇಳೆಯಲ್ಲಿ ದೇಹದಲ್ಲಿ



ಉತ್ಪನ್ನವಾಗುವ ಈ ಶಕ್ತಿ ನಷ್ಟವಾಗಬಾರದೆಂಬುದಕ್ಕಾಗಿಯೇ ವಿದ್ಯುತ್ ವಾಹಕವಲ್ಲದ ದರ್ಭೆ, ಕಂಬಳಿ, ರೇಷ್ಮೆ ಮೊದಲಾದ ಆಸನದ ಮೇಲೆ ಕೂರಬೇಕೆಂದು ವಿಧಿಸಲಾಗಿದೆ.

**ದೇಶ–ಕಾಲ ಸಂಕೀರ್ತನ :** ಸಂಕಲ್ಪದ ಇನ್ನೊಂದು ಮುಖ್ಯವಾದ ಹಂತ. ಯಾವುದೇ ಸಾಧಾರಣ–ಅಸಾಧಾರಣ ಕೆಲಸಗಳಲ್ಲಿ, ನಿತ್ಯನೈಮಿತ್ತಿಕ–ಕಾಮ್ಯ ಕರ್ಮಾನುಷ್ಠಾನದಲ್ಲಿ ಯೋಗ್ಯ ಫಲ ಸಿದ್ಧಿಗಾಗಿ ಮಹತ್ವದ ಸ್ಥಳವನ್ನು (ಪರಿಸರವನ್ನು) ಆಯ್ದುಕೊಳ್ಳ ಬೇಕಾಗುತ್ತದೆ. ಸರ್ವವ್ಯಾಪಿಯಾದ ಭಗವಂತನನ್ನು ಕಾಣಲು ಕ್ಷೇತ್ರಗಳಿಗೇ ಹೋಗುವ ಉದ್ದೇಶವೇನು? ಮನೆಯಲ್ಲೇ ಇರುವ ಶಾರದೆಯನ್ನು ಹುಡುಕಿಕೊಂಡು ಶೃಂಗೇರಿಗೋ, ಕೊಲ್ಲೂರಿಗೋ ಏಕೆ ಹೋಗಬೇಕು? ಏಕೆಂದರೆ ಅಂತಹ ತೀರ್ಥಕ್ಷೇತ್ರಗಳಲ್ಲಿ ಭಗವಂತನ ವಿಶೇಷ ಸಾನ್ನಿಧ್ಯವಿದ್ದು, ಅಲ್ಲಿ ಹೊರ ಸೂಸುವ ಅನಿರ್ವಚನೀಯ ಶಕ್ತಿ ನಮ್ಮನ್ನು ಪುಲಕಗೊಳಿಸುತ್ತದೆಂಬುದು ನಮ್ಮ ಪರಂಪರಾಗತ ನಂಬಿಕೆ. ನಮ್ಮ ಮನೆ–ಮನಗಳಲ್ಲಿ ವಿಶೇಷ ಸಾನ್ನಿಧ್ಯ ಕಲ್ಪಿಸಿಕೊಳ್ಳುವಷ್ಟು ನಮ್ಮ ಮನಸ್ಸು ಆಧ್ಯಾತ್ಮಿಕವಾಗಿ ಪರಿಪಕ್ವವಾಗಿರುವು ದಿಲ್ಲವಾದುದರಿಂದ ಮನಸ್ಸಿಗೆ ಇಷ್ಟವಾದ ಸಾನ್ನಿಧ್ಯವನ್ನು ಆಶ್ರಯಿಸುವುದು ಸ್ವಾಭಾವಿಕ.

ಸಂಕಲ್ಪದಲ್ಲಿ ನಾವು ಪಶ್ಚಿಮ ಸಮುದ್ರ ತೀರೇ, ಅಗಸ್ತ್ಯಕ್ಷೇತ್ರೇ, ಪರುಶುರಾಮಕ್ಷೇತ್ರೇ... ಮೊದಲಾದ ಪುಣ್ಯ ಸ್ಥಳದಲ್ಲಿ, ಪವಿತ್ರ ಸಾನ್ನಿಧ್ಯದಲ್ಲಿ ಕುಳಿತಿದ್ದೇವೆ, ಇಲ್ಲಿ ಅನುಷ್ಠಾನ ಮಾಡುವುದರಿಂದ ಅನುಷ್ಠಾನಕ್ಕೆ ಯೋಗ್ಯ ಫಲ ಪ್ರಾಪ್ತಿಯಾಗುತ್ತದೆ ಎಂಬ ಭಾವನೆಯಿಂದ ಆಯಾ ಪ್ರದೇಶವನ್ನು ನೆನಪಿಸಿಕೊಳ್ಳುತ್ತೇವೆ. ದಿವ್ಯಸಾನ್ನಿಧ್ಯದಲ್ಲಿ ಪವಿತ್ರ ಪ್ರದೇಶದಲ್ಲಿ ಇದ್ದೇನೆ ಎಂಬ ಭಾವನೆಯಿಂದ ಮನಸ್ಸು ಪುಳಕಿತವಾಗುತ್ತದೆ. ಭರತಖಂಡೇ.. ಭಾರತವರ್ಷೇ.. ದಂಡಕಾರಣ್ಯೇ.. ಮೇರೋಃ ದಕ್ಷಿಣ ಪಾರ್ಶ್ವೇ.... ಹೀಗೆ ವಿಶಾಲ ಸೃಷ್ಟಿಯ ಅತಿ ಸಣ್ಣ ಭೂ ಭಾಗದಲ್ಲಿನ, ಸಮಸ್ತಚರಾಚರಗಳಲ್ಲಿ ತನ್ನ ಸ್ಥಾನವೇನು, ತಾನೆಲ್ಲಿದ್ದೇನೆ ಎಂಬುದನ್ನು ಚಿಂತಿಸುವುದರಿಂದ ಅಹಂ ಭಾವರಾಹಿತ್ಯವುಂಟಾಗುತ್ತದೆ. ಅತ್ಯಂತ ಸಂಸ್ಕೃತವಾದ, ಫಲವತ್ತಾದ ಭೂಮಿಯಲ್ಲಿ ಬಿತ್ತಿದ ಬೀಜ ಚೆನ್ನಾಗಿ ಬೆಳೆದು ಸಕಾಲದಲ್ಲಿ ಉತ್ತಮ ಫಲ ನೀಡುತ್ತದೆ. ಎಂಬುದು ಅನುಭವದ ಸಂಗತಿ. ಹಾಗೆಯೇ ಪವಿತ್ರವಾದ ಸಾನ್ನಿಧ್ಯದಲ್ಲಿ ಮಾಡಿದ ಸತ್ಕರ್ಮಾನುಷ್ಠಾನವು ಸಕಾಲದಲ್ಲಿ ಉತ್ತಮ ಫಲ ನೀಡುತ್ತದೆ. (ಹಾಗಲ್ಲದಿದದ್ದರೆ ನೀವೇ ಕ್ಷೇತ್ರವನ್ನು ಫಲವತ್ತಾಗಿಸಿಕೊಂಡು ಬೀಜ ಬಿತ್ತ ಬೇಕಾಗುತ್ತದಲ್ಲವೇ) ಆದ್ದರಿಂದ ಸಂಕಲ್ಪದಲ್ಲಿ ತಾನು ಕುಳಿತುಕೊಳ್ಳುವ ಪವಿತ್ರ ಪ್ರದೇಶ ವನ್ನು ವಿಸ್ತಾರವಾಗಿ ಸ್ಮರಿಸಿಕೊಳ್ಳವುದು ಅತ್ಯಗತ್ಯ.

ಪ್ರಾಣಾಯಾಮದ ಇನ್ನೊಂದು ಆಧ್ಯಾತ್ಮಿಕ ಮುಖವಿದೆ. ಚಿತ್ತಸ್ಥೈರ್ಯಕ್ಕೆ ಪ್ರಾಣಾ ಯಾಮವೂ ಒಂದು ಉಪಾಯವೆಂದು ಯೋಗಶಾಸ್ತ್ರ ಹೇಳುತ್ತದೆ. "**ಪ್ರಚ್ಛರ್ದನ ವಿಧಾರ ಣಾಭ್ಯಾಂ ವಾ ಪ್ರಾಣಸ್ಯ**" ಪ್ರಾಣವನ್ನು ಹೊರಹಾಕುವುದರ ಮತ್ತು ಹಿಡಿದಿಟ್ಟು ಕೊಳ್ಳುವುದರ ಮೂಲಕ ಚಿತ್ತವು ಸ್ಥಿರವಾಗುತ್ತದೆ."**ಛರ್ದನಂ ಭಕ್ಷಿದೇಶಂ ನಿಸ್ಸಾರ್ಯ ಯಥಾಶಕ್ತಿ ಬಹಿರೇವ ಸ್ತಂಭನೇನ ಚಿತ್ತಸ್ಯ ಸ್ಥಿರತಾ ಸಂಪಾದನೀಯಾ**" (ಸ್ವಾಮಿ ದಯಾನಂದ ಸರಸ್ವತಿಯವರ ಭಾಷ್ಯ)

ಊಟ ಮಾಡಿದ ಅನ್ನವನ್ನು ಒಮ್ಮೊಮ್ಮೆ ವಾಂತಿ ಮಾಡಿಬಿಡುವಂತೆ ಶರೀರದ ಒಳಗಿನ ಶ್ವಾಸಕೋಶದಿಂದ ಪ್ರಾಣವಾಯು (ಇಂಗಾಲಾಮ್ಲ) ವನ್ನು ಹೊರಕ್ಕೆ ಹಾಕಿ ಸುಖ ಪೂರ್ವಕವಾಗಿ ಶಕ್ತಿಯಿರುವಷ್ಟು ಕಾಲ ಹೊರಗೇ ತಡೆ ಹಿಡಿದು ಚಿತ್ತ ಸ್ಥಿರತೆಯನ್ನು ಸಂಪಾದಿಸಬೇಕು. ಪುನಃ ಶುದ್ಧವಾಯುವನ್ನು ಒಳಗೆ ಸೇವಿಸಬೇಕು. ಹೀಗೆ ಚಿತ್ತ ಶುದ್ಧಿಯಿಂದ ಸತ್ಕರ್ಮಾನುಷ್ಠಾನಕ್ಕೆ ಮನಸ್ಸು ಪಕ್ವವಾಗುತ್ತದೆ. ಅದರಿಂದ ಸತ್ಫಲ ಪ್ರಾಪ್ತವಾಗುತ್ತದೆ. ಪ್ರಾಣಾಯಾಮ ಪೂರ್ವಕವಾದ ಉಪಾಸನೆಯಿಂದ ಸತ್ಯ ವಿವೇಕದ ಮೇಲಿನ ಅಜ್ಞಾನದ ಆವರಣವು ನಾಶವಾಗುತ್ತದೆ. ಹೀಗೆ ಚಿತ್ತ ಶುದ್ಧಿ, ಏಕಾಗ್ರತೆ ಮತ್ತು ಕರ್ಮ ಫಲ ಪ್ರಾಪ್ತಿಗೆ ಪ್ರಾಣಾಯಾಮ ಅತ್ಯವಶ್ಯಕ.

ಕಾಲ : ಸಕಾಲದಲ್ಲಿ ಬಿತ್ತಿದ ಬೀಜ ಕಾಲ ಕಾಲಕ್ಕೆ ಸರಿಯಾದ ಪೋಷಣೆಯನ್ನು ಪಡೆದರೆ ಉತ್ತಮ ಫಲ ನೀಡುತ್ತದೆಂಬುದು ಲೋಕದ ದೃಷ್ಟಾಂತ. ಆದುದರಿಂದ ನಾವು ಮಾಡುವ ಕರ್ಮಾನುಷ್ಠಾನಕ್ಕೆ ಕಾಲಪ್ರಜ್ಞೆ ಅತಿಮುಖ್ಯ. ಅಕಾಲದಲ್ಲಿ ಮಾಡಿದ ಸಕಾಲದಲ್ಲಿ ಮಾಡದ ಕರ್ಮಾನುಷ್ಠಾನ ನಿಷ್ಫಲ. ಹೀಗೆ ಸಂಕಲ್ಪದಲ್ಲಿ ಆಯನ, ಋತು, ಮಾಸ, ಪಕ್ಷ, ತಿಥಿವಾರ, ನಕ್ಷತ್ರ ಮೊದಲಾದ ಸಂಕೀರ್ತನ ಅನಿವಾರ್ಯ.

ಸಂಕಲ್ಪದಲ್ಲಿ ಅತಿಮುಖ್ಯವೆಂದು ಸಾಮಾನ್ಯವಾಗಿ ಎಲ್ಲರೂ ತಿಳಿದಿರುವುದು ಉದ್ದೇಶಕಥನ. ಕರ್ಮಾನುಷ್ಠಾನದಲ್ಲಿ ನಿತ್ಯ, ನೈಮಿತ್ತಿಕ ಮತ್ತು ಕಾಮ್ಯ ಎಂದು ಮೂರು ವಿಧವುಂಟು. ತ್ರಿಕಾಲ ಸಂಧ್ಯಾವಂದನಾದಿಗಳು ನಿತ್ಯಕರ್ಮಗಳು. ಇವಕ್ಕೆ ವಿಶೇಷವಾದ ಉದ್ದೇಶ ಕಥನವಿಲ್ಲ. "ಉಪಾತ್ತ ಸಮಸ್ತ ದುರಿತಕ್ಷಯ ದ್ವಾರಾ.. ಭಗವತ್ಪ್ರೀತಿ ಪ್ರಾಪ್ತಿಗಾಗಿ ಮಾಡುವುದೇ ನಿತ್ಯಕರ್ಮದ ಉದ್ದೇಶ.

ಯಾವುದಾದರೊಂದು ನಿರ್ದಿಷ್ಟಕಾರಣದಿಂದಾಗಿ (ಸಂತಾನ ಪ್ರಾಪ್ತಿ ನಿಮಿತ್ತ, ನಾಮಕರಣ ಇತ್ಯಾದಿ) ಪ್ರಾಪ್ತವಾಗುವುದು ನೈಮಿತ್ತಿಕ. ಇದರ ಉದ್ದೇಶವೂ ಸೀಮಿತ. ಆದರೆ ಕಾಮ್ಯ ಕರ್ಮದ ಫಲಾಪೇಕ್ಷೆಯ ವ್ಯಾಪ್ತಿ ಅತಿ ವಿಸ್ತಾರವಾಗಿರುತ್ತದೆ. ಅತಿ ಹೆಚ್ಚಿನ ಫಲಾಪೇಕ್ಷೆಯಿಂದ ಮಾಡುವ ಕರ್ಮಾನುಷ್ಠಾನವೂ ಅತಿದೊಡ್ಡದಾಗಿಯೇ ಇರಬೇಕು. ಅರ್ಧಗಂಟೆಯತನಕ...ಪ್ರಾಪ್ತ್ಯರ್ಥೇ...ಪರಿಹಾರಾರ್ಥಂ.....ಸಿದ್ಧ್ಯರ್ಥಂ........ಎಂದು ಮುಂತಾಗಿ ಫಲಾಪೇಕ್ಷೆಯನ್ನು ಹೇಳಿಕೊಂಡು ಕನಿಷ್ಠ ಸಂಖ್ಯಾಹುತಿಯನ್ನು ಹಾಕಿ ಹೋಮಿಸುವುದರಿಂದ ಅಷ್ಟೂ ಫಲ ಪ್ರಾಪ್ತಿಯಾಗಲಾರದು. ನಮ್ಮ ಅಗತ್ಯತೆ ಎಷ್ಟೇ ದೊಡ್ಡದಿದ್ದರೂ ನಾವು ನೀಡುವ ಹತ್ತು ರೂಪಾಯಿಗಳ ಮೌಲ್ಯಕ್ಕೆ ತಕ್ಕಷ್ಟೇ ಸಾಮಾನನ್ನು ಅಂಗಡಿಯವನು ನೀಡುತ್ತಾನೆ. ಅದಕ್ಕಿಂತ ಹೆಚ್ಚು ನಾವು ನೀರಿಕ್ಷಿಸುವುದೂ ಇಲ್ಲ, ಆತ ನೀಡುವುದೂ ಇಲ್ಲ, ಹಾಗೇಯೇ ನಾವು ಮಾಡುವ ಕಾಮ್ಯ ಅಥವಾ ನಿಷ್ಕಾಮ ಕರ್ಮ ಗಳಿಗೆ ಯೋಗ್ಯವಾದ ಫಲ ಸಿಕ್ಕಿಯೇ ಸಿಗುತ್ತದೆ. ಇದು ಈಶ್ವರ ನಿಯಮ. ಅಂಗಡಿಯವ ನಾದರೋ ನಾವು ನೀಡಿದ ಹಣವನ್ನು ಪೆಟ್ಟಿಗೆಯಲ್ಲಿರಿಸಿ ಸಾಮಾನನ್ನು ನೀಡದೆಯೂ ಇರಬಹುದು, ಕಡಿಮೆ ಮೌಲ್ಯದ ಸಾಮಾನನ್ನು ನೀಡಿ ಮೋಸಪಡಿಸಲೂಬಹುದು



ಅಥವಾ ಹಣವನ್ನು ನೀಡಿಯೇ ಇಲ್ಲವೆಂದು ದಬಾಯಿಸಲೂ ಬಹುದು. ಆದರೆ ಭಗವಂತ ಹಾಗಲ್ಲ, ಸತ್ಕಾರ್ಯವೇ ಇರಲಿ, ಅಸತ್ಕಾರ್ಯವೇ ಆಗಲಿ, ನಾವು ಮಾಡುವ ಕರ್ಮಕ್ಕೆ ಯೋಗ್ಯವಾದ ಫಲವನ್ನು ಸಕಾಲದಲ್ಲಿ ನೀಡಿಯೇ ನೀಡುತ್ತಾನೆ. ಆತ ಜಗನ್ನಿಯಾಮಕ, ಆಕೆ ಜಗನ್ಮಾತೆ, ಮಾತಾ–ಪಿತೃಗಳು ಮಕ್ಕಳ ದೈಹಿಕ, ಮಾನಸಿಕ ಪರಿಸ್ಥಿತಿಯನ್ನರಿತು ಯಾವಾಗ, ಎಷ್ಟು, ಹೇಗೆ, ಏನೇನನ್ನು ನೀಡಬೇಕೆಂದು ನಿರ್ಧರಿಸುತ್ತಾರೆಯೋ ಹಾಗಯೇ ನಮ್ಮ ಶ್ರದ್ಧೆ, ಕರ್ಮದ ಸ್ವರೂಪವನ್ನನುಸರಿಸಿ ತಕ್ಕಫಲವನ್ನು ಜಗತ್ತಿನ ತಂದೆ ತಾಯಿಗಳು ನಮಗೆ ಸಕಾಲದಲ್ಲಿ ಖಂಡಿತವಾಗಿಯೂ ನೀಡುತ್ತಾರೆ. ಮಗು ಯಥಾಸ್ಥಿತಿಯಲ್ಲಿದ್ದಾಗಲೂ ತಾಯಿ ಕಾಲಕಾಲಕ್ಕೆ ಮಗುವಿಗೆ ಉಣಿಸುತ್ತಾಳೆ. ಕೆಲವೊಮ್ಮೆ ಮರೆವು ಉಂಟಾಗಬಹುದು, ಸಮಯ ವ್ಯತ್ಯಯವಾಗ ಬಹುದು. ಆಗ ಮಗು ಅಳುತ್ತದೆ. ತಾಯಿ ಜಾಗೃತಳಾಗುತ್ತಾಳೆ. ಮಗು ಅತ್ತಾಗಲೂ ಅಳದೇ ಇದ್ದಾಗಲೂ ತಾಯಿ ಮಗುವಿನ ಪೋಷಣೆಯನ್ನು ಮಾಡಿಯೇ ಮಾಡುವಂತೆ, ನಾವು ನಮ್ಮ ಬಯಕೆಯನ್ನು ಸಂಕಲ್ಪದಲ್ಲಿ ವ್ಯಕ್ತಪಡಿಸದೇ ಇದ್ದಾಗಲೂ ಭಗವಂತ ಫಲವನ್ನು ನೀಡಿಯೇ ನೀಡುತ್ತಾನೆ.

ಆತನ ವಿಶೇಷಗಮನ ಸೆಳೆಯುವುದಕ್ಕಾಗಿ ಕಾಮನೆಯನ್ನು ವ್ಯಕ್ತಪಡಿಸುವುದು ತಪ್ಪಲ್ಲ. ಆದರೆ ಅಷ್ಟೇ ಕೊಡು, ಇಷ್ಟೇ ಕೊಡು, ಅದನ್ನೇ ಕೊಡು, ಇದನ್ನೇ ಕೊಡು ಎಂದು ಹೇಳುವುದರಿಂದ ನಮಗೆ ನಷ್ಟವಾಗುವ ಸಂಭವವುಂಟು. ಅಥವಾ ನಿನ್ನದೆಲ್ಲವನ್ನೂ ನನಗೆ ನೀಡು ಎನ್ನುವುದರಲ್ಲೂ ಔಚಿತ್ಯವಿಲ್ಲ. ಮಾತುಬಾರದ ಹಸುಗೂಸಿನ ಇಂಗಿತ ತಾಯಿಗೆ ತಿಳಿಯುವುದಾದರೆ ವ್ಯಕ್ತಪಡಿಸಿದರೂ, ವ್ಯಕ್ತಪಡಿಸದೆ ಇದ್ದರೂ ನಮ್ಮ ಮನಸ್ಸಿನ ಇಂಗಿತ ಭಗವಂತನಿಗೆ ತಿಳಿಯಬೇಕಲ್ಲವೇ? ನಮ್ಮ ಹಸಿವನ್ನು ಭಗವಂತನಲ್ಲಿ ನಿವೇದಿಸಬೇಕು. ಯುಕ್ತವಾದುದನ್ನು, ಯುಕ್ತವಾದಷ್ಟನ್ನು ಆತ ನೀಡಿಯೇ ನೀಡುತ್ತಾನೆಂಬ ನಂಬಿಕೆ ಯನ್ನಿರಿಸಿಕೊಳ್ಳಬೇಕು.

**ಫಲಾಪೇಕ್ಷೆಯಿಲ್ಲದೆ ಯಾವ ಕ್ರಿಯೆಯೂ ಇಲ್ಲ. ಆದುದರಿಂದ ನಾವು ನೀಡುವ ಹವಿರ್ಭಾಗಕ್ಕೆ ತಕ್ಕುದಾದಷ್ಟೇ ಫಲವನ್ನು ನಿರೀಕ್ಷಿಸಿ ಸಂಕಲ್ಪಿಸಬೇಕು. ಅಥವಾ ನಾವು ಸಂಕಲ್ಪಿಸುವ ಫಲಾಪೇಕ್ಷೆಗೆ ತಕ್ಕುದಾದ ಪ್ರಮಾಣದಲ್ಲಿ ಭಗವಂತನಿಗೆ ಹವಿಸ್ಸನ್ನು ಅರ್ಪಿಸಬೇಕು.**

# ನಮ್ಮ ಗುರುಗಳು – ನಾ ಕಂಡಂತೆ

ನಮ್ಮ ಗುರುಗಳ ಬಗೆಗೆ ಬರೆಯುವಾಗ ಅಲ್ಪ ವಿಷಯಕಮತಿಯುಳ್ಳ ನನಗೆ ಕಾಳಿದಾನ ಉಕ್ತಿಯೊಂದು ನೆನಪಾಗುತ್ತದೆ. ಮಹಾಕವಿ ಕಾಳಿದಾಸ ರಘುವಂಶದ ವರ್ಣನೆಯ ವಿಷಯದಲ್ಲಿ 'ಸಣ್ಣ ದೋಣಿಯಲ್ಲಿ ಸಮುದ್ರ ದಾಟುವ ಪ್ರಯತ್ನ' ಅತಿ ಎತ್ತರದ ಹಣ್ಣಿಗೆ ಕುಳ್ಳ ಕೈಚಾಚಿದಂತೆ' ಎಂದು ತನ್ನ ಸ್ಥಿತಿಯನ್ನು ವರ್ಣಿಸಿಕೊಂಡಿದ್ದಾನೆ. ನಾನು ನನ್ನ ಸೀಮಿತ ಸಾಮರ್ಥ್ಯದ ಅರಿವಿದ್ದರೂ ಮಹಾನುಭಾವರ ಬಗ್ಗೆ ಏನಾದರೂ ಬರೆಯ ಲೇಬೇಕೆಂಬ ತುಡಿತದ ಒತ್ತಡಕ್ಕೆ ಸಿಲುಕಿ ಬರೆಯಲು ಪ್ರಯತ್ನಿಸುತ್ತಿದ್ದೇನೆ.

ಕೇವಲ 'ಶ್ರೀ ಶ್ರೀ ಸ್ವಾಮಿಜೀ' ಎಂದೇ ವ್ಯವಹರಿಸಲ್ಪಡುತ್ತಿದ್ದ ಇವರ 'ಶ್ರೀ ಶ್ರೀ ಸ್ವಯಂಪ್ರಕಾಶ ಅಭಿನವ ರಾಮಾನಂದ ಸರಸ್ವತೀ' ಎಂಬ ಈ ವಿಸ್ತೃತ ನಾಮ ಅನೇಕರಿಗೆ ತಿಳಿದಿರಲಿಕ್ಕಿಲ್ಲ. ಪ್ರಚಾರ ಪ್ರಿಯರಲ್ಲದ ಇವರ ಸರಳತೆಯೇ ಇವರ ಹಿರಿಮೆಗಳಲ್ಲೊಂದು. ಇವರ ಹೆಸರಿನಲ್ಲಿ ಅಡಗಿರುವ 'ಸ್ವಯಂ ಪ್ರಕಾಶ' 'ರಾಮಾನನಂದ' 'ಸರಸ್ವತಿ' ಎಂಬ ಎಲ್ಲ ಪದಗಳೂ ಅನ್ವರ್ಥಕ ಮತ್ತು ಸಾರ್ಥಕ ಪದಗಳು. ಸೂರ್ಯನ ಬೆಳಕನ್ನು ಪ್ರತಿಫಲಿಸಿ ಸ್ವತಃ ಪ್ರಕಾಶಿಸುವ ಭ್ರಮೆಯನ್ನುಂಟು ಮಾಡುವ ಚಂದ್ರ–ಭೂಮಿ ಮೊದಲಾದುವುಗಳಂತಲ್ಲದೆ, ಸೂರ್ಯನಂತೆ ತಾವೇ ಸ್ವತಃ ಅರಿತು ಜ್ಞಾನದ ಪ್ರಕಾಶವನ್ನು ಬೀರುತ್ತಿದ್ದರಿಂದ 'ಸ್ವಯಂಪ್ರಕಾಶ' ವೆಂಬ ಹೆಸರು ಅನ್ವರ್ಥ. ಅವರ ಸಂಪರ್ಕಕ್ಕೆ ಬಂದ ಆಬಾಲವೃದ್ಧರೆಲ್ಲರೂ ಆನಂದವನ್ನನುಭವಿಸುತ್ತಿದ್ದುದರಿಂದ 'ರಾಮಾನಂದ' (ರಾಮ=ರಮಂತೇ ಯೋಗಿನಃ ಅಸ್ಮಿನ್+ಆನಂದ) ಪದ ಸಾರ್ಥಕ. ಅವರ ಆಶುಕವಿತ್ವ ರಸಾಸ್ವಾದನೆ ಮಾಡಿದವರಿಗೆ 'ಸರಸ್ವತಿ' ಪದದ ಸಾರ್ಥಕತೆಯ ಅರಿವಾಗುತ್ತದೆ.

ನಾನು ಶ್ರೀ ಶ್ರೀಗಳವರನ್ನು ಮೊದಲು ಭೇಟಿಯಾದದ್ದು 1962ನೇ ಇಸವಿ ಆಗಸ್ಟ್ 16ರಂದು ಮಧ್ಯಾಹ್ನ 1.5ಕ್ಕೆ ಈಗಿನ ಶಾರದಾ ದೇವಾಲಯದ ಎದುರಿನ ಜಗುಲಿಯಲ್ಲಿ, ಬಡಗಿಗೆ ಅವರು ಸೂಚನೆ ನೀಡುತ್ತಿದ್ದರು. ಅಮ್ಮನವರ ಗುಡಿಯ ಮುಖ್ಯ ದ್ವಾರ ನಿರ್ಮಾಣ ಕಾರ್ಯ ನಡೆಯುತ್ತಿತ್ತು. ಅದರ ಕುಸುರಿ ಕೆತ್ತನೆಯ ಬಗೆಗೆ ಬಡಗಿಗೆ ಸಲಹೆ ನೀಡುತ್ತಿದ್ದರು. 'ದೇವದಾರು' ಹೆಸರಿನ ಮರದ ತುಂಡುಗಳ ಆಯ್ಕೆಯೂ ಅವರದೇ. (ದೇವಾಲಯದ ಉಪಯೋಗಕ್ಕೆ ಮರವನ್ನು ಆಯ್ಕೆ ಮಾಡುವಾಗಲೂ ಅದೆಂತಹ ಔಚಿತ್ಯ ಪ್ರಜ್ಞೆ!) ಜಗದ್ಗುರು ಸಂಸ್ಥಾನದಲ್ಲಿ ಸುಮಾರು 4 ವರ್ಷ ನೌಕರಿ ಮಾಡಿದ ನನಗೆ ಇಂತಹ ಸರಳ ಸಂನ್ಯಾಸಿಗಳೊಬ್ಬರು ಮಾಠಾಧಿಪತಿಗಳಿದ್ದಾರೆ ಎಂಬುದನ್ನು ಊಹಿಸಲೂ ಸಾಧ್ಯವಿರಲಿಲ್ಲ. ನಡು ಹೊತ್ತಿನಲ್ಲಿ ಅವರ ದರ್ಶನವಾದೀತೆಂಬ ನಿರೀಕ್ಷೆಯೂ ಇರಲಿಲ್ಲ. ಮಠದಲ್ಲಿ ಪುಕ್ಕಟೆ ಸಿಗಬಹುದಾದ ಮಡಿ ಊಟಕ್ಕಾಗಿಯೇ ಬರಿಗೈಯಿಂದ ಬಂದವನು ನಾನು. ಹಾಗಾಗಿ ಗುರುಗಳ ದರ್ಶನದ ಸಿದ್ಧತೆಯಿಂದ ಬಂದಿರಲಿಲ್ಲ. ಮಠದ ಗುರುಗಳು ಒಳಗಿರಬಹುದು, ಅಧಿಕಾರಿಗಳಂತಹವರು ಯಾರೂ ಕಾಣುತ್ತಿಲ್ಲ. ಯಾರನ್ನು



ಕೇಳಬೇಕೋ ಏನೋ ಎಂದು ಗೊಂದಲದಲ್ಲಿರುವಾಗ ಶ್ರೀ ಶ್ರೀಗಳವರು ನಸು ನಗುತ್ತಾ ನನ್ನ ಬಾಯಿಯಿಂದಲೇ ನನ್ನ ವಿಚಾರಗಳನ್ನೆಲ್ಲ ತಿಳಿದುಕೊಂಡಂತೆ ಮಾಡಿ ಅಡಿಗೆ ಕೆಲಸದ ವೆಂಕಟರಮಣನನ್ನು ಕೂಗಿ ನನಗೆ ಊಟ ಬಡಿಸುವಂತೆ ಹೇಳಿದರು. ಶ್ರೀ ಶ್ರೀಗಳವರೇ ಹರಿಹರಪುರ ಪ್ರೌಢಶಾಲೆಯ ಆಡಳಿತ ಮಂಡಳಿಯ ಸಂಸ್ಥಾಪಕ ಅಧ್ಯಕ್ಷರೆಂದೂ, ನನ್ನ ಪೂರ್ವೋತ್ತರಗಳೆಲ್ಲವೂ ಮೊದಲೇ ಅವರಿಗೆ ತಿಳಿದಿತ್ತೆಂದೂ ನನಗೆ ಆಮೇಲೆ ಗೊತ್ತಾಯಿತು.

ಶ್ರೀ ಶ್ರೀಗಳವರ ದೈನಂದಿನ ಚಟುವಟಿಕೆ ಪ್ರಾರಂಭವಾಗುತ್ತಿದ್ದುದು ಉಷಃಕಾಲ 4.00 ಗಂಟೆಗೆ. ಆ ದಿನಗಳಲ್ಲಿ ಜಮ್ಮಟಿಗೆ ವೆಂಕಟಗಿರಿ ಭಟ್ಟರು ಅಥವಾ ಶೀನಯ್ಯ ಪ್ರಾತರಾಹ್ನಿಕಾದಿಗಳಿಗೆ ಸಹಕರಿಸಬೇಕು. ಏನಾದರೂ ವ್ಯತ್ಯಯವಾದರೂ ಸಕಾಲದಲ್ಲಿ ಸ್ನಾನ ಆಹ್ನಿಕ ನಡೆಯಬೇಕು. 6.00 ಗಂಟೆಗೆ ಸರಿಯಾಗಿ ಆಹ್ನಿಕ ಮುಗಿಸಿ ಲಲಿತಾ ಸಹಸ್ರನಾಮ, ಕನಕಧಾರಾ ಸ್ತೋತ್ರಾದಿಗಳನ್ನು ಪಠಿಸುತ್ತಾ ಗೋಸೇವೆ ಮಾಡುತ್ತಿದ್ದರು. 6.30ಕ್ಕೆ ಗುರು ಸನ್ನಿಧಾನ ಶಾರದಾ ಲಕ್ಷ್ಮೀನೃಸಿಂಹ ದರ್ಶನ ಮಾಡಿ ಪೂಜೆ ಪ್ರಾರಂಭ. ಶ್ರೀ ಶ್ರೀಗಳವರ ಬದುಕಿನಲ್ಲಿ ಶಿಸ್ತು ಮತ್ತು ಸಮಯಪಾಲನೆಗೆ ಅತ್ಯಂತ ಪ್ರಾಶಸ್ತ್ಯವಿತ್ತು. ಶುಕ್ರವಾರ–ಮಂಗಳವಾರ ಮತ್ತು ಶ್ರೀ ಚಕ್ರಾರ್ಚನೆಯ ಇತರ ದಿನಗಳಲ್ಲಾದರೆ 8.45ಕ್ಕೆ ಮತ್ತು ಸಾಮಾನ್ಯ ದಿನಗಳಲ್ಲಾದರೆ 7.45ಕ್ಕೆ ಮಠದ ಮಂಗಳಾರತಿಯ ಜಾಗಟೆ ಧ್ವನಿಗೆ ಗಡಿಯಾರದ ಮುಳ್ಳನ್ನು ಸರಿಪಡಿಸಿಕೊಳ್ಳಬಹುದಾದಷ್ಟು ಕರಾರು ವಾಕ್ಕಾದ ಸಮಯ ಪಾಲನೆ ನವರಾತ್ರಿ ಮತ್ತಿತರ ಉತ್ಸವಾದಿಗಳ ವಿಶೇಷ ದಿನಗಳಲ್ಲೂ ಕೂಡ ಇದೇ ರೀತಿಯ ನಿಯಮ ಪಾಲನೆ.

ದೇವಾಲಯದ ಪೂಜೆ ಮೊದಲಾದ ಎಲ್ಲ ಕಾರ್ಯಕ್ರಮಗಳೂ ಎಂದೂ ಕ್ಲುಪ್ತ ಸಮಯಕ್ಕೆ ಮೊದಲೂ ಇಲ್ಲ! ಕಾಲತೀತವಾದುದೂ ಇಲ್ಲ! ಎಲ್ಲ ಕಾರ್ಯಕ್ರಮಗಳೂ ಶಿಸ್ತು ಬದ್ಧ. ಅಚ್ಚುಕಟ್ಟು ಶ್ರೀ ಶ್ರೀಗಳವರು ಸ್ವತಃ ನಿಯತ ಸಮಯದಲ್ಲಿ ತಮ್ಮನ್ನು ತೊಡಗಿಸಿಕೊಂಡಾಗ ಪರಿಚಾರಕರೂ ಹೊಂದಿಕೊಳ್ಳದೇ ಇರಲು ಸಾಧ್ಯವಿಲ್ಲವಲ್ಲ? ಆದರೆ ಅವರು ಇಂತಹ ಕೆಲಸ ಇಷ್ಟು ಅವಧಿಯಲ್ಲಿ ಮುಗಿಯಲೇಬೇಕೆಂದು ಆತರುಪಡುವುದು. ಆತುರ ಪಡಿಸುವುದು, ಕರ್ಮಾಂಗದಲ್ಲಿ ಲೋಪ, ಸ್ಖಾಲಿತ್ಯ–ಯಾವುದಕ್ಕೂ ಅವಕಾಶ ನೀಡುತ್ತಿರಲಿಲ್ಲ. ದೈನಂದಿನ ವ್ಯವಹಾರ, ಧಾರ್ಮಿಕ–ಸಾಂಸ್ಕೃತಿಕ ಸಭೆ ಸಮಾರಂಭ ಮೊದಲಾದಂತೆ ಅವರು ಭಾಗವಹಿಸುವ, ಅವರ ಉಪಸ್ಥಿತಿಯಲ್ಲಿ ನಡೆಯುವ ಯಾವುದೇ ಕಾರ್ಯಕ್ರಮವಾದರೂ ಗೊತ್ತಾದ ನಿರ್ದಿಷ್ಟ ಸಮಯದಲ್ಲಿ ಮುಗಿಯುವಂತೆ ಸಾಕಷ್ಟು ಮುಂಚಿತವಾಗೇ ಪ್ರಾರಂಭವಾಗಬೇಕಿತ್ತು. ಚಂಡಿಕಾಯಾಗದ ಪೂರ್ಣಾಹುತಿ ಮಧ್ಯಾಹ್ನ 1 ಗಂಟೆಗೆ. ಅದರ ಅವಧಿ 5 ಗಂಟೆ. ಅಂದರೆ 8 ಗಂಟೆಗೆ ಸರಿಯಾಗಿ ಪ್ರಾರಂಭವಾಗಲೇಬೇಕು. ರಾತ್ರಿ ರಂಗಪೂಜೆ ಮಂಗಳಾರತಿ 9 ಗಂಟೆಗೆ, 2 ಗಂಟೆಯ ಅವಧಿ. 7 ಗಂಟೆಗೆ ಪ್ರಾರಂಭವಾಗಲೇಬೇಕು. ಹೀಗೆ ಅವರು ಸ್ವತಃ ಆಚರಣೆ–ಅನುಷ್ಠಾನದ ಮೂಲಕವೇ ಶಿಷ್ಯರಿಗೆ ಸಮಯಪ್ರಜ್ಞೆಯನ್ನು ಬೋಧಿಸಿದ್ದರು. ಹೊರಗಡೆ

ಯಾವುದೇ ಸಭೆಯಲ್ಲಿ ಭಾಗವಹಿಸುವುದಿದ್ದರೆ ಪ್ರಯಾಣಕ್ಕೆ ಬೇಕಾಗುವ ಅವಧಿಗಿಂತ ಸಾಕಷ್ಟು ಮುಂಚಿತವಾಗಿಯೇ ಹೊರಟು ಗಮ್ಯಸ್ಥಾನಕ್ಕಿಂತ ಸ್ವಲ್ಪ ಹಿಂದೆ ವಾಹನದ ಗತಿಯನ್ನು ನಿಧಾನಿಸಿ ಅಥವಾ ಕೆಲವು ನಿಮಿಷ ನಿಲ್ಲಿಸಿ, ಒಂದು ನಿಮಿಷವೂ ಹಿಂದು ಮುಂದಿಲ್ಲದಂತೆ ಕರಾರುವಕ್ಕಾಗಿ ನಿಗದಿತ ಸಮಯದಲ್ಲಿ ಉಪಸ್ಥಿತರಿರುತ್ತಿದ್ದರು. ಆದುದರಿಂದ ಅವರನ್ನು ಆಹ್ವಾನಿಸಿದ ಕಾರ್ಯಕರ್ತರು ಸಾಕಷ್ಟು ಪೂರ್ವ ಸಿದ್ಧತೆಯೊಂದಿಗೆ ಜಾಗರೂಕರಾಗಿರಬೇಕಾಗುತ್ತಿತ್ತು.

ಪ್ರತಿದಿನ ತ್ರಿಕಾಲಗಳಲ್ಲಿ, ಗ್ರಹಣ ಸ್ಪರ್ಶ–ಮೋಕ್ಷ, ದಕ್ಷಿಣೋತ್ತರದ ಪುಣ್ಯಕಾಲದ ಆದಿ–ಅಂತ್ಯ ಮತ್ತು ವಿಶೇಷ ಪೂಜಾ ಸಂದರ್ಭಗಳಲ್ಲಿ ಮಠದೊಳಗೆ ಮಾತ್ರವಲ್ಲದೆ ಆಸುಪಾಸಿನ ಜನರು ಪೂಜಾನುಷ್ಠಾನಗಳಲ್ಲಿ ಜಾಗರೂಕರಾಗಿರಲು ಸಾಧ್ಯವಾಗುವಂತೆ ನಿಯತವಾಗಿ ನಗಾರಿ ಬಾರಿಸುವ ಸಂಪ್ರದಾಯವಿತ್ತು. (ಎಲ್ಲಿಂದಲೋ ಅಪಶ್ರುತಿ ಕೇಳಿಬಂದಿರಬೇಕು). ಕ್ರಮೇಣ ಈ ಸಂಪ್ರದಾಯ ನಿಂತು ಹೋಯಿತು.

ಸುಮಾರು 25–30 ವರ್ಷಗಳ ಹಿಂದಿನ ಘಟನೆ. ಕೊಪ್ಪದಲ್ಲಿ ಕ್ರೈಸ್ತ ಇಸ್ಲಾಂ ಮತ್ತು ಹಿಂದು  ಮೂರು ಧರ್ಮಗುರುಗಳ ಅಪೂರ್ವ ಸಮಾಗಮ ನಡೆದಿತ್ತು. ಹಿಂದೂ ಧರ್ಮಗುರುಗಳಾಗಿ ಉಪನ್ಯಾಸ ನೀಡಲು ಶ್ರೀ ಶ್ರೀಗಳವರು ಆಹ್ವಾನಿತರಾಗಿದ್ದರು. ನಿಗದಿತ ಸಮಯದಲ್ಲಿ ಶ್ರೀ ಶ್ರೀಗಳವರು ಸಭಾಂಗಣಕ್ಕೆ ಆಗಮಿಸಿದಾಗ ಸಮಾರಂಭದ ಸಿದ್ಧತೆಯ ಪ್ರಾರಂಭದಲ್ಲಿದ್ದ ಕಾರ್ಯನಿರ್ವಾಹಕರು ತಬ್ಬಿಬ್ಬು. ಈ ಪೇಚಿನ ಪ್ರಸಂಗವನ್ನು ನೇರವಾಗಿ ಪ್ರಸ್ತಾಪಿಸದೆ, ಆದರೆ ಪರೋಕ್ಷವಾಗಿ, ನಯವಾಗಿ, ಸ್ವಾರಸ್ಯಕರವಾಗಿ, ಸೂಕ್ಷ್ಮವಾಗಿ ಸಮಯಪಾಲನೆಯ ಮಹತ್ವವನ್ನು ಶ್ರೀ ಶ್ರೀಗಳವರು ಬೋಧಿಸಿದ್ದುದು ಹೀಗೆ "ಹಿಂದೂ ಧರ್ಮದ ಮೂಲ–ವೇದಗಳು. 'ಸ್ವಸ್ತಿ ಪಂಥಾಮನು ಚರೇಮ ಸೂರ್ಯಾ ಚಂದ್ರಮ ಸಾವಿವ" ಎಂಬುದು ಅವುಗಳಲ್ಲಿನ ಒಂದು ಮಂತ್ರ. ಸೂರ್ಯನ ಸಾರಥಿ ಅರುಣ ಹೆಳವ. ಅವನ ರಥಕ್ಕೆ ಒಂದೇ ಚಕ್ರ. ವಿಷಮ ಸಂಖ್ಯೆಯಲ್ಲಿ ಏಳು ಅಶ್ವಗಳು. ಇಂತಹ ವಿಸಂಗತಿಗಳ ನಡುವೆಯೂ ಅವನ ಗತಿಯಲ್ಲಿ, ಸಮಯದ ಏರುಪೇರಿಲ್ಲ. ಜಗತ್ತಿಗೆ ಅವನೇ ಸಮಯ ನಿರ್ದೇಶಕ. ನಾವೂ ಸಹ ಏನೇ ವಿಸಂಗತಿಗಳಿದ್ದರೂ ಸೂರ್ಯನನ್ನು ಆದರ್ಶವಾಗಿರಿಸಿಕೊಂಡು ಸಮಯ ಪರಿಪಾಲಿಸುತ್ತಾ ಸನ್ಮಾರ್ಗದಲ್ಲಿ ನಡೆಯಬೇಕು" (ಕಾರ್ಯಕ್ರಮ ಸಂಯೋಜಕರು ಎದೆ ಮುಟ್ಟಿಕೊಂಡಿರಬಹುದು) ಹಿಂದೂ ಧರ್ಮದ ಹಿರಿಮೆಯನ್ನು ಸರಳವಾದ ಭಾಷೆಯಲ್ಲಿ ಮತ್ತಷ್ಟು ವಿವರಿಸಿದ್ದರು.

ಆರ್ತ, ಜಿಜ್ಞಾಸು, ಅರ್ಥಾರ್ಥೀ, ಜ್ಞಾನೀ  ಎಂಬ ನಾಲ್ಕು ವರ್ಗದ ಜನರು ತನ್ನನ್ನು ಆರಾಧಿಸುತ್ತಾರೆಂದು ಭಗವಂತ ಅಪ್ಪಣೆ ಕೊಡಿಸಿದ. ಭಗವಂತನ ಸಾಕ್ಷಾತ್ಕಾರದ ಮಾರ್ಗ ವನ್ನು ತೋರಿಸುವವರಿಗೂ ಇದನ್ನು ಅನ್ವಯಿಸಿದರೆ ತಪ್ಪಲ್ಲ. ಅಂತೆಯೇ ಶ್ರೀ ಶ್ರೀಗಳ ವರಿಗೂ ಇದು ಪೂರ್ಣ ಅನ್ವಯವಾಗುತ್ತದೆ.

ಕೌಟುಂಬಿಕ, ಸಾಮಾಜಿಕ, ವ್ಯಾವಹಾರಿಕ ಮೊದಲಾದಂತೆ ಯಾವುದೇ ಸಮಸ್ಯೆಗಳನ್ನು ಜನರು ಶ್ರೀ ಶ್ರೀಗಳವರಲ್ಲಿ ನಿವೇದಿಸಿಕೊಂಡು ಸೂಕ್ತ ಪರಿಹಾರ ಕಂಡುಕೊಳ್ಳುತ್ತಿದ್ದರು.



ಯಾರಿಗೂ ನೋವಾಗದಂತೆ, ಉಭಯ ಪಕ್ಷಗಳ ಮನವೊಲಿಸಿ ಕೌಟುಂಬಿಕ ಜಗಳವನ್ನು ಪರಿಹರಿಸುವುದು ಶ್ರೀ ಶ್ರೀಗಳವರ ಜಾಣ್ಮೆ. ನ್ಯಾಯಾಲಯದ ಕಟಕಟೆ ಯನ್ನೇರುವ ಎಷ್ಟೋ ಸಮಸ್ಯೆಗಳು ಶ್ರೀ ಶ್ರೀಗಳವರ ಸಮ್ಮುಖದಲ್ಲಿ ಇತ್ಯರ್ಥವಾಗುತ್ತಿದ್ದವು.

ಭೂ ಸುಧಾರಣೆಯಿಂದಾಗಿ ಶ್ರೀಮಠದ ಆದಾಯ ಕುಂಠಿತವಾಯಿತಷ್ಟೆ. ಆಗ ಶ್ರೀಮಠದ ಶಿಷ್ಯರನ್ನು ಗುರುತಿಸಿ, ಅವರ ಎಲ್ಲಾ ಆಗುಹೋಗುಗಳಿಗೆ ಸ್ಪಂದಿಸಿ, ಅವರ ಸಮಸ್ಯೆಗಳಿಗೆ ಸೂಕ್ತ ಪರಿಹಾರ ದೊರಕಿಸಿ, ಪವಿತ್ರವಾದ ಗುರುಶಿಷ್ಯ ಸಂಬಂಧದ ಅರಿವನ್ನು ಮೂಡಿಸುವುದರ ಮೂಲಕ ಸಮಸ್ತ ಶಿಷ್ಯ ಸಮುದಾಯವನ್ನು ಸಂಘಟಿಸಿದುದಲ್ಲದೆ ಶ್ರೀಮಠ ಮತ್ತು ಶಿಷ್ಯವೃಂದದ ನಡುವೆ ಶಿಥಿಲವಾಗಿದ್ದ ಸಂಪರ್ಕಸೇತುವೆಯನ್ನು ಶಾಶ್ವತವಾಗಿ ಸದೃಢಗೊಳಿಸಿದ ಅವರ ಸಂಘಟನಾ ಕೌಶಲ ಅನ್ಯಾದೃಶ. ಇದರಿಂದಾಗಿ ಶ್ರೀಮಠದ ಎಲ್ಲ ಕಾರ್ಯಕ್ರಮಗಳಲ್ಲಿ ಎಲ್ಲ ವರ್ಗದ ಜನರು ಹೆಚ್ಚು ಹೆಚ್ಚು ಆಕರ್ಷಿತರಾಗಿ ಸಕ್ರಿಯವಾಗಿ ಭಾಗವಹಿಸುವಂತಾಯಿತು. ರಾಜಕೀಯ ಸಲಹೆಗಾಗಿ ಮತ್ತು ಆತ್ಮನಿವೇದನೆಗಾಗಿ ರಾಜಕಾರಣಿಗಳೂ ಇವರನ್ನು ಸಂಪರ್ಕಿಸು ತ್ತಿದ್ದರು. ಇವರು ತೋರಿದ ದಾರಿಯಲ್ಲಿ ಬದುಕನ್ನು ರೂಢಿಸಿಕೊಂಡ ಸಾವಿರಾರು ಕುಟುಂಬಗಳು ಈಗಲೂ ಇವರನ್ನು ಸ್ಮರಿಸುತ್ತವೆ.

ಶ್ರೀಮಠದ ಎದುರಿನ ಒಂದು ಎಕರೆಯಷ್ಟು ಸೀಮಿತ ವಿಸ್ತಾರದಲ್ಲಿನ ಅಡಕೆ ತೋಟವನ್ನು ಸಂದರ್ಶಿಸಿದ ವಿಟ್ಲದ ಅಡಕೆ ಸಂಶೋಧನಾ ಕೇಂದ್ರದ ಅಧಿಕಾರಿಗಳು ಶ್ರೀ ಶ್ರೀಗಳವರ ವ್ಯವಸಾಯ ಜ್ಞಾನಕ್ಕೆ ಬೆರಗಾಗಿದ್ದರು. ಇವರು ಇಂಜಿನಿಯರಿಂಗ್ ಶಿಕ್ಷಣ ಪಡೆದವರಲ್ಲ. ಆದರೂ ಸಾಂಪ್ರದಾಯಿಕ ಶಿಕ್ಷಣ ಪಡೆದವರಿಗೆ ಸರಿಸಾಟಿಯಾಗಿ ಕೆಲವೊಮ್ಮೆ ದುರಸ್ತಿ ಮಾಡುತ್ತಿದ್ದುದ್ದನ್ನು ಕಂಡಿದ್ದೇವೆ. ಮಠದಲ್ಲಿದ್ದ ಒಂದು ಹಳೆಯ ರೇಡಿಯೋ ಆಗಾಗ ಸತ್ಯಾಗಹ ಮಾಡುತ್ತಿತ್ತು. ಇವರು ಯಾವ್ಯಾವುದೋ ಲಭ್ಯವಿರುವ ಉಪಕರಣಗಳನ್ನೇ ಬಳಸಿ ಅದನ್ನು ಬಿಚ್ಚಿ ಜೋಡಿಸುತ್ತಿದ್ದರು. ಕೆಲವೊಮ್ಮೆ ತೀರಾ ಅನಿವಾರ್ಯವಾದಾಗ ಕೊಪ್ಪದ ಸೌಂಡ್ ಇಂಜಿನಿಯರ್ ಜೋಷಿಯವರನ್ನು ಕರೆಸುತ್ತಿದ್ದರು. ಬಹಳ ಕಾಲ ಆ ಹಳೆಯ ರೇಡಿಯೋವನ್ನು ಬದಲಿಸಲು ಶ್ರೀ ಶ್ರೀಗಳವರು ಒಪ್ಪಲಿಲ್ಲ. ಅವರಿಗೆ ಆಸಕ್ತಿಯಿಲ್ಲದ ಕ್ಷೇತ್ರವೇ ಇಲ್ಲ. ಹಳೆಯ ಅಪರೂಪದ ಸಂಗ್ರಾಹ್ಯ ವಸ್ತುಗಳ ಮೇಲಂತೂ ತುಂಬಾ ಅಭಿಮಾನ. ಅವರ ವಸ್ತುಸಂಗ್ರಹಾಲಯದಲ್ಲಿ ವಿಚಿತ್ರವಾದ ಪೆನ್ನು ಉತ್ತರಮುಖಿ–ರುದ್ರಾಕ್ಷಿ ನಾನಾ ಮುಖ ಬೆಲೆಯ ನಾಣ್ಯಗಳು ಮತ್ತಿತರ ಅತ್ಯಮೂಲ್ಯವಾದ, ಅಪೂರ್ವವಾದ ವಸ್ತುಗಳಿದ್ದವು. ಆಸಕ್ತಿಯುಳ್ಳ ಮಕ್ಕಳಿಗೆ ಅವುಗಳನ್ನು ಪ್ರೀತಿಯಿಂದ ತೋರಿಸಿ ವಿವರಿಸುತ್ತಿದ್ದರು.

ಮಣಿಪಾಲದಂತಹ ಬೆಂಗಾಡಿನಲ್ಲಲ್ಲದೆ ಅನೇಕ ಊರುಗಳಲ್ಲಿ ಮಹಾವಿದ್ಯಾಲಯ ಮಟ್ಟದ ನೂರಾರು ಶಿಕ್ಷಣ ಸಂಸ್ಥೆಗಳನ್ನು ಹುಟ್ಟು ಹಾಕಿ ಹೆಮ್ಮರವಾಗಿ ಬೆಳೆಸಿದ, ಶೈಕ್ಷಣಿಕ ಕ್ರಾಂತಿಯ ಬಿರುಗಾಳಿಯನ್ನೆಬ್ಬಿಸಿದ, ಮಣಿಪಾಲದ ಬ್ರಹ್ಮ ಡಾ॥ ಟಿ.ಎಂ.ಎ.ಪೈ ಮತ್ತು ಶ್ರೀ ಶ್ರೀಗಳವರು ಸಮಾನ ಚಿಂತಕರು. ವಿದ್ಯಾಪ್ರಸಾರ ಮತ್ತು ಸಾಮಾಜಿಕ ಬೆಳವಣಿಗೆ ಈ

ಎರಡು ಮುಖ್ಯ ಸಂಗತಿಗಳಲ್ಲಿ ಇವರಿಗೆ ವಿಶೇಷ ಕಾಳಜಿ. ಪೈಗಳು ಆಗಾಗ ಹೇಳುತ್ತಿದ್ದ 'Don't give them fish, but teach them to fish' ಎಂಬ ಧ್ಯೇಯ ವಾಕ್ಯ ಶ್ರೀ ಶ್ರೀಗಳವರಿಗೂ ಅತ್ಯಂತ ಪ್ರಿಯವಾಗಿತ್ತು. ಯಾರಿಗೇ ಆದರೂ ನೇರವಾಗಿ ದ್ರವ್ಯ ಸಹಾಯ ಮಾಡುವುದಕ್ಕಿಂತ ಆ ದ್ರವ್ಯವನ್ನು ಸಂಪಾದಿಸುವ ಬದುಕನ್ನು ರೂಪಿಸಿಕೊಳ್ಳುವ ಮಾರ್ಗದರ್ಶಿ ಶಿಕ್ಷಣ ನೀಡಬೇಕೆಂಬುದು ಶ್ರೀ ಶ್ರೀಗಳವರ ತತ್ತ್ವ. ಅದಕ್ಕೆಂದೇ ಅವರು ತಮ್ಮ ಸೀಮಿತ ಆದಾಯ ಕ್ಷೇತ್ರ ಮತ್ತು ವ್ಯಾಹಾರಿಕ ಮಿತಿಯೊಳಗೆ ಶಿಕ್ಷಣದ ಒಂದು ವಿಸ್ತೃತ ಪರಿಸರವನ್ನೇ ನಿರ್ಮಾ ಮಾಡಿದರು.

ಒಮ್ಮೆ ಶ್ರೀ ಶ್ರೀಗಳವರು ಕೊಪ್ಪ ಘಾಟಿಯಲ್ಲಿ ಹೋಗುತ್ತಿರುವಾಗ, ಕೆಲವರು ಬರಿಗಾಲಿನಲ್ಲಿ, ಕೆಲವರು ಚಪ್ಪಲಿ ಎಳೆಯುತ್ತಾ ಕೊಪ್ಪದ ಪ್ರೌಢಶಾಲೆಗೆ ಹೋಗುವ ಮಕ್ಕಳನ್ನು ಕಂಡು ಮರುಕಪಟ್ಟರಂತೆ. ಈಗ ಇದು ರಾಷ್ಟ್ರೀಯ ಹೆದ್ದಾರಿ. ಆದರೆ 1960ರ ಸುಮಾರಿನಲ್ಲಿ ಈ ಘಾಟಿಯಲ್ಲಿ, ಜಲ್ಲಿ ರಸ್ತೆಯ ಮೇಲೆ ನಡೆದಾಡುವ ಕಷ್ಟವನ್ನು ಕಾಡು ಪ್ರಾಣಿಗಳ, ಸಂಚಾರದ ಭಯದ ವಾತಾವರಣವನ್ನು ಹಿರಿಯರು ಊಹಿಸಬಲ್ಲರು. ಆಗಲೇ ಹರಿಹರಪುರದಲ್ಲೊಂದು ಪ್ರೌಢಶಾಲೆಯನ್ನು ಪ್ರಾರಂಭಿಸುವ ಯೋಚನೆ ಇವರ ಮನಸ್ಸಿನಲ್ಲಿ ರೂಪುಗೊಂಡಿತು. ಸರಕಾರಿ ಪ್ರೌಢಶಾಲೆಯ ಮಂಜೂರಾತಿಗಾಗಿ ಊರವರು ಮಾಡಿದ ಪ್ರಯತ್ನ ಫಲಿಸಲಿಲ್ಲ. ಶ್ರೀ ಶ್ರೀಗಳವರ ಆರ್ಥಿಕ ಸಹಾಯ, ಬೌದ್ಧಿಕ ಸಲಹೆ, ಸಹಕಾರಗಳೊಂದಿಗೆ ಬೇಳೆಗದ್ದೆ ಪುಟ್ಟಣ್ಣ ಗೌಡರ ಅಧ್ಯಕ್ಷತೆಯಲ್ಲಿ ರಚಿತವಾದ ಆಡಳಿತ ಮಂಡಳಿಯ ಆಶ್ರಯದಲ್ಲಿ ಖಾಸಗಿ ಪ್ರೌಢಶಾಲೆಯೊಂದು 1962ರ ಜುಲೈ 6 ರಂದು ಜನ್ಮ ತಾಳಿತು. ಶ್ರೀ ಶ್ರೀಗಳವರು ಮಹಾಪೋಷಕರಾಗಿದ್ದ ಈ ಆಡಳಿತ ಮಂಡಳಿಯಲ್ಲಿ ಊರಿನ ಅನೇಕ ಗಣ್ಯರು, ನಾರ್ವೆ, ಭಂಡಿಗಡಿ, ನಿಲುವಾಗಿಲು, ಹರಿಹರಪುರ, ಹೊಸಕೊಪ್ಪ ಪಂಚಾಯಿತಿಗಳ ಅಧ್ಯಕ್ಷರು ಸದಸ್ಯರಾಗಿದ್ದರು. ಈ ಆಡಳಿತ ಮಂಡಳಿಯಲ್ಲಿ ಹರಿಹರ ಪುರದ ಪಟೇಲ್ ಸಾಹೇಬರನ್ನು ಸಕ್ರಿಯ ಸದಸ್ಯರನ್ನಾಗಿ ಸೇರಿಸಿಕೊಂಡುದು ಶ್ರೀ ಶ್ರೀಗಳವರ ಕೋಮು ಸೌಹಾರ್ದ ಭಾವನೆಗೆ ನಿದರ್ಶನ. ಅದಕ್ಕೆ ಮೊದಲೂ ಆ ನಂತರವೂ ಹಿಂದೂ ಮುಸಲ್ಮಾನರ ಸೌಹಾರ್ದವನ್ನು ಶ್ರೀ ಶ್ರೀಗಳವರು ಪೋಷಿಸುತ್ತಾ ಬಂದಿದ್ದಾರೆ ಮತ್ತು ನಿರಂತರ ಆ ಸೌಹಾರ್ದವನ್ನು ಕಾಯ್ದುಕೊಂಡು ಬಂದಿದ್ದಾರೆ.

3–4 ವರ್ಷಗಳಿಂದ ಪ್ರೌಢಶಿಕ್ಷಣದಿಂದ ವಂಚಿತರಾದವರೂ ಸೇರಿದಂತೆ 38 ವಿದ್ಯಾರ್ಥಿಗಳಿಂದ ಅಂದು ಪ್ರಾರಂಭವಾದ ಪ್ರೌಢಶಾಲೆ ಈಗ ಪದವಿ ಪೂರ್ವ ಶಿಕ್ಷಣ ನೀಡುತ್ತಿದೆ. 1979ರಲ್ಲಿ ಪದವಿಪೂರ್ವ ವಿಭಾಗ ಪ್ರಾರಂಭಿಸಿದಾಗ ಪದವಿಪೂರ್ವ ಶಿಕ್ಷಣ ವಿಭಾಗಕ್ಕೆ ಮೂರು ವರ್ಷ ಸರಕಾರದ ಅನುದಾನವಿರಲಿಲ್ಲ. ನಂತರ ಈ ಅನುದಾನ ರಹಿತ ಅವಧಿಯನ್ನು 5 ವರ್ಷಕ್ಕೆ ವಿಸ್ತರಿಸಲಾಯಿತು. ಕೊನೆಗೆ 6ನೇ ವರ್ಷದ ಮಧ್ಯದಲ್ಲಿ ಅನುದಾನ ಬರುವ ತನಕ ಪದವಿಪೂರ್ವ ವಿಭಾಗದ ನೌಕರರಿಗೆ ವೇತನ ಮತ್ತು ಆ ವಿಭಾಗಕ್ಕೆ ಅವಶ್ಯಕವಾದ ಉಪಕರಣ–ಸಲಕರಣೆಗಳ ವೆಚ್ಚವನ್ನು ಪೂರ್ತಿಯಾಗಿ ಶ್ರೀ ಶ್ರೀಗಳವರೇ ಭರಿಸಿದ್ದರೆಂಬ ಸಂಗತಿ ಕೆಲವರಿಗೆ ಮಾತ್ರ ತಿಳಿದಿರಬಹುದು. ಶಾಲಾ



ದಿನಗಳಲ್ಲಿ ದೂರದಿಂದ ಬರುವ ನೂರಾರು ವಿದ್ಯಾರ್ಥಿ–ವಿದ್ಯಾರ್ಥಿನಿಯರಿಗೆ, ಜಾತಿಮತ ಭೇದವಿಲ್ಲದೆ ಮಧ್ಯಾಹ್ನ ಪುಕ್ಕಟೆಯಾಗಿ ರುಚಿಯಾದ ಊಟ ಬಡಿಸುವ ವ್ಯವಸ್ಥೆಯನ್ನು 15–20 ವರ್ಷ ಅವಿಚ್ಛಿನ್ನವಾಗಿ ನಡೆಸಿಕೊಂಡು ಬಂದಿದ್ದಾರೆ. ಈ ಸೌಲಭ್ಯವನ್ನು ಅನುಭವಿಸಿದ ಹಳೆಯ ವಿದ್ಯಾರ್ಥಿಗಳಲ್ಲಿ ಕೆಲವರು ಈಗಲೂ ಶ್ರೀ ಶ್ರೀಗಳ ಔದಾರ್ಯವನ್ನು ನೆನಪಿಸಿಕೊಳ್ಳುವವರಿದ್ದಾರೆ. ಆಡಳಿತ ಮಂಡಳಿ ನರ್ಸರಿ ಮತ್ತು ಪೂರ್ವ ಪ್ರಾಥಮಿಕ ಶಿಕ್ಷಣಾಲಯಗಳನ್ನು ಈಗ ನಡೆಸುತ್ತಿದೆ. ಶ್ರೀ ಶ್ರೀಗಳವರ ಪ್ರೇರಣೆ–ಸಲಹೆ–ಸಹಕಾರಗಳಿಂದಲೇ ನಾರ್ವೆ, ಕಿಗ್ಗಾಗಳಲ್ಲೂ ಪ್ರೌಢಶಾಲೆಗಳು ಪ್ರಾರಂಭವಾದವು. ಶೃಂಗೇರಿಯಲ್ಲಿ ಪ್ರಥಮ ದರ್ಜೆ ಕಾಲೇಜನ್ನು ತೆರೆಯಲಿಕ್ಕೂ ಶ್ರೀ ಶ್ರೀ ಗಳವರೇ ಮೂಲ ಪ್ರೇರಣೆ. ಹರಿಹರಪುರದಲ್ಲಿ ಸಿಂಡಿಕೇಟ್ ಬ್ಯಾಂಕಿನ ಉದ್ಘಾಟನೆಗೆ ಬಂದ ಶ್ರೀಯುತ ಪೈಗಳು ಶ್ರೀಮಠದಲ್ಲೇ ಉಳಿದುಕೊಂಡು ಮಠದ ಹೆಸರಿನಲ್ಲಿ ಒಂದನೇ ನಂಬರಿನ ಖಾತೆಯನ್ನು ತೆರೆದು ಆಶೀರ್ವಾದ ಪಡೆದಿದ್ದಾರೆ.

ವೈಯಕ್ತಿವಾಗಲೀ, ಸಂಘ ಸಂಸ್ಥೆಗಳವರಾಗಲೀ ಆರ್ತರಾಗಿ, ಆರ್ಥಾರ್ಥಿಗಳಾಗಿ ಶ್ರೀ ಶ್ರೀಗಳವರನ್ನು ಸಂಪರ್ಕಿಸಿದವರು ಯಾರೂ ನಿರಾಶರಾಗಿ, ಬರಿಗೈಯಲ್ಲಿ ಹಿಂದಿರುಗಿದ ಉದಾಹರಣೆಯಿಲ್ಲ. ಇಂದಿಲ್ಲ ನಾಳೆ ಎಂದು ಹೇಳಿಸಿಕೊಂಡವರೂ ಇಲ್ಲ. ಆಸ್ಪತ್ರೆ ಮೊದಲಾದ ಸಾರ್ವಜನಿಕ ಸಂಸ್ಥೆಗಳ ಸೌಲಭ್ಯ ವಿಸ್ತರಣೆಯಿರಬಹುದು. ಸಾಮಾಜಿಕ ಮಹತ್ವವುಳ್ಳ ಯಾವುದೇ ಹೊಸ ಸಂಸ್ಥೆಯನ್ನು ಹುಟ್ಟುಹಾಕುವ ಕಾಯಕವಿರಬಹುದು ಅಥವಾ ಜನಸಾಮಾನ್ಯರ ಹಿತಾಸಕ್ತಿಗೆ ಸಂಬಂಧಿಸಿದ ಯಾವುದೇ ಕಾರ್ಯ ಚಟುವಟಿಕೆ ಯಿರಬಹುದು, ಎಲ್ಲದರಲ್ಲೂ ಶ್ರೀ ಶ್ರೀಗಳವರ ಉದಾರ ಸಹಾಯ, ಅನುಗ್ರಹ, ಮಾರ್ಗ ದರ್ಶನ ಇದ್ದೇ ಇರುತ್ತಿತ್ತು.

ಶಿಕ್ಷಣ ವಿಜ್ಞಾನದಲ್ಲಿ "The teachers should go down to the level of the students" ಎಂಬ ಒಂದು ಹೇಳಿಕೆಯಿದೆ. (ಗುರು ಅಥವಾ ಅಧ್ಯಾಪಕ, ವಿದ್ಯಾರ್ಥಿಗಳ ಪೂರ್ವ ಜ್ಞಾನದ ಮಟ್ಟದ ಆಳಕ್ಕಿಳಿದು ಅವರನ್ನು ಮೇಲಕ್ಕೆತ್ತಬೇಕೆಂಬುದು ಇದರ ತಾತ್ಪರ್ಯ). ನಮ್ಮ ಗುರುಗಳು ಈ ಉಕ್ತಿಗೆ ಆದರ್ಶ ಗುರುಗಳು.

ಚಿಕ್ಕ ಮಕ್ಕಳು, ವಯೋವೃದ್ಧರು, ಮಹಾ ವಿದ್ವಾಂಸರು, ಶಾಲೆಯ ವಿದ್ಯಾರ್ಥಿ, ವಿದ್ಯಾರ್ಥಿನಿಯರು, ರಾಜಕಾರಣಿಗಳು, ರೈತರು ಎಲ್ಲರಿಗೂ ಅವರು ಗುರುಗಳು. ಯಾರೇ ಅವರನ್ನು ಸಮೀಪಿಸಿದಾಗ, ಅವರವರ ಬೌದ್ಧಿಕ, ಆರ್ಥಿಕ ಮಟ್ಟ ಸಾಮಾಜಿಕ ಸ್ಥಾನಮಾನಕ್ಕೆ ಅನುಗುಣವಾಗಿ ಮಾತನಾಡಿಸಿ ಅಗತ್ಯವಿದ್ದರೆ ಸಲಹೆ ಸಹಕಾರ ನೀಡುತ್ತಿದ್ದರು. ಅವರು ಮಕ್ಕಳೊಡನೆ ಮಕ್ಕಳಾಗಿರುತ್ತಿದ್ದರು. ಮಕ್ಕಳು ಮಠಕ್ಕೆ ಬಂದೊಡನೆ ಅಳುವನ್ನು ನಿಲ್ಲಿಸಿ ಅವರ ಸಮೀಪಕ್ಕೆ ಓಡುತ್ತಿದ್ದುದನ್ನು ಅನೇಕ ತಾಯಂದಿರು ಈಗಲೂ ನೆನೆಪಿಸಿಕೊಳ್ಳುತ್ತಾರೆ. ಚಿಕ್ಕಮಕ್ಕಳಿಗೆ ಏನಾದರೂ ಹಣ್ಣು ಹಂಪಲನ್ನೋ, ದ್ರಾಕ್ಷಿ–ಕಲ್ಲು ಸಕ್ಕರೆಯನ್ನೋ ಏನನ್ನಾದರೂ ನೀಡಿ ಸಂತೋಷಪಡಿಸಿದರೆ, ಇತರರಿಗೆ ಮನೋರಂಜಕ ಕಥೆಯನ್ನೋ ಹಾಸ್ಯ ಚಟಾಕಿಯನ್ನೋ ಹೇಳಿ ನಗಿಸುತ್ತಿದ್ದರು. ವಯೋವೃದ್ಧರೊಡನೆ

ಧಾರ್ಮಿಕ ಚಿಂತನೆ, ಪಂಡಿತರೊಡನೆ ಪಾಂಡಿತ್ಯ ಪೂರ್ಣ ಚರ್ಚೆ ನಡೆಸುತ್ತಿದ್ದರು. ಹಲವು ವಿಷಯುಗಳಲ್ಲಿ ವಿದ್ವಾಂಸರಾಗಿದ್ದ ಮಟಪಾಡಿ ರಾಜಗೋಪಾಲಾಚಾರ್ಯ ಮೊದಲಾದವರು ಆಗಾಗ ಇವರನ್ನು ಭೇಟಿ ಮಾಡುತ್ತಿದ್ದರು. ಡಾ॥ ಟಿ.ಎಂ.ಎ. ಪೈಗಳಂತಹ ಮುತ್ಸದ್ಧಿಗಳು ಶ್ರೀ ಶ್ರೀಗಳವರೊಂದಿಗೆ ಎಷ್ಟೋ ವಿಷಯಗಳನ್ನು ಗಂಭೀರ ವಾಗಿ ಚರ್ಚಿಸುತ್ತಿದ್ದರು. ಅಪರೂಪಕ್ಕೊಮ್ಮೆಮ್ಮೆ ರಾಜಕಾರಣಿಗಳೂ ಆಪ್ತಸ ಮಾಲೋಚನೆಗಾಗಿ ಮಠಕ್ಕೆ ಬರುತ್ತಿದ್ದುದುಂಟು. ಶ್ರೀ ಶ್ರೀ ಗಳವರು ಆಗಾಗ ಶೃಂಗೇರಿ ಜಗದ್ಗುರು ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರನ್ನು ಭೇಟಿ ಮಾಡುತ್ತಿದ್ದರು.

ಮಕ್ಕಳು ಹಾಳು ಹರಟೆಯಲ್ಲಿ ಕಾಲ ಕಳೆಯದೆ ಶಾಲೆಯ ವಿರಾಮ ವೇಳೆಯನ್ನು ಸದುಪಯೋಗಪಡಿಸಿಕೊಳ್ಳಲೆಂಬ ಆಶಯದಿಂದ ಶ್ರೀ ಮಠದಲ್ಲಿ 'ಶ್ರೀ ಶಾರದಾ ಹಿಂದೀ ಶಿಕ್ಷಣಾಲಯ' ವನ್ನು ತೆರೆದರು. ಶಾಲೆಯಂತೆಯೇ ಇದು ಕರಿಹಲಗೆ, ಮೇಜು, ಕುರ್ಚಿ, ಬೆಂಚು ಮೊದಲಾದಂತೆ ಪೂರ್ಣ ಸುಸಜ್ಜಿತವಾಗಿತ್ತು. ನಾಲ್ಕಾರು ವರ್ಷ ಪ್ರಾಥಮಿಕದಿಂದ ವಿಶಾರದದ ತನಕ ಉಚಿತ ಶಿಕ್ಷಣ ನೀಡಲಾಗುತ್ತಿತ್ತು. ಪ್ರತಿ 6 ತಿಂಗಳಿಗೊಮ್ಮೆ 70–80 ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತು ಕೊಳ್ಳುತ್ತಿದ್ದರು. ಉಚಿತವಾಗಿ ಪಠ್ಯಪುಸ್ತಕಗಳನ್ನು ನೀಡುತ್ತಿದ್ದುದೂ ಉಂಟು. ಪ್ರತಿ ತರಗತಿಯ ಪ್ರಾರಂಭದಲ್ಲೊಮ್ಮೆ ಹಾಜರಿ ಪುಸ್ತಕ, ಸೀಮೆಸುಣ್ಣ ಇತ್ಯಾದಿಗಳಿಗಾಗಿ ಪ್ರತಿ ವಿದ್ಯಾರ್ಥಿಯಿಂದ ರೂ.4.00 ಮಾತ್ರ ಶುಲ್ಕ ವಸೂಲು ಮಾಡಲಾಗುತ್ತಿತ್ತು. ಗುರುಗಳೇ ಕೆಲವು ತರಗತಿಗಳಿಗೆ ಪಾಠ ಬೋಧಿಸುತ್ತಿದ್ದರು. ತಿಳಿ ನೀರಿನ ಕೊಳದ ತಳದಲ್ಲಿ ಕೆಸರನ್ನು ಹುಡುಕುವುದೇ ಕೆಲವರ ಸ್ವಭಾವ. ಇಂತಹವರು ಬಣ್ಣದ ಗಾಜಿನ ಕನ್ನಡಕವನ್ನೇ ಧರಿಸುವುದರಿಂದ ಜಗತ್ತೆಲ್ಲ ಶುಭ್ರವಾಗಿ ಕಾಣಿಸದೆ, ವರ್ಣಮಯವಾಗಿಯೇ ಕಾಣಿಸಬೇಕಷ್ಟೆ. "ಈ ಹಿಂದೀ ಕ್ಲಾಸಿನಿಂದ ಯಾರಿಗೋ ಏನೋ ಲಾಭವಿರಬೇಕು. ಲಾಭವಿಲ್ಲದಿದ್ದರೆ ಇಷ್ಟೊಂದು ವಿದ್ಯಾರ್ಥಿಗಳಿಗೆ ಪುಸ್ತಕವನ್ನೂ ಕೊಟ್ಟು ಪುಗಸಟ್ಟೆ ಯಾಕೆ ಓದಿಸುತ್ತಾರೆ?" ಎಂದು ಕೆಲವರು ಟೀಕಿಸಿದರು. ಶ್ರೀ ಶಾರದಾ ಹಿಂದೀ ಶಿಕ್ಷಣಾಲಯ ಮುಚ್ಚಿತು.

'ಗುರು' ಶಬ್ದಕ್ಕೆ ದೊಡ್ಡದು. ಹಿರಿದು ಎಂಬ ಸಾಮಾನ್ಯ ಅರ್ಥಗಳಿವೆ. ಶ್ರೀ ಶ್ರೀಗಳವರು ನಿಜವಾದ ಅರ್ಥದಲ್ಲಿ 'ಗುರು'ಗಳಾಗಿದ್ದರು. ಜನಸಾಮಾನ್ಯರೊಡನೆ ಸಾಮಾನ್ಯರಂತೆ ಬೆರೆಯುವ ಸರಳತೆಯ ನಡುವೆಯೂ, ಅವರು ದೊಡ್ಡತನದ ಗೌರವ ಗಾಂಭೀರ್ಯ ಗಳನ್ನು ಕಾಯ್ದುಕೊಂಡು ಬಂದಿದ್ದಾರೆ. ಇದೇ ಅವರ ಹಿರಿಮೆಯ ಗರಿ. ಅವರನ್ನು ಸಮೀಪದಿಂದಾಗಲೀ, ದೂರದಿಂದಾಗಲೀ, ಕಂಡೊಡನೆಯೇ ಎಲ್ಲರಲ್ಲೂ ಭಕ್ತಿಮಿಶ್ರಿತ ಗೌರವ ತಾನಾಗಿ ಜಾಗೃತವಾಗುತ್ತಿತ್ತು. ಅದು ಅವರ ಅನುಷ್ಠಾನದ ತೇಜೋಬಲ. ಎಲ್ಲರನ್ನೂ ಆಕರ್ಷಿಸುವ ದೈವೀ ಶಕ್ತಿ, ಅದೇ ಅವರ ಗುರುತ್ವದ, ವ್ಯಕ್ತಿತ್ವದ ವೈಶಿಷ್ಟ್ಯ.

ಬೆಳಗಿನ ಪೂಜೆಯ ನಂತರ 11 ಗಂಟೆಯ ತನಕ ಮತ್ತು ಸಂಜೆ 3 ರಿಂದ 6ರ ತನಕ ಶ್ರೀ ಶ್ರೀಗಳವರನ್ನು ಯಾರು ಬೇಕಾದರೂ ಭೇಟಿಯಾಗಬಹುದಿತ್ತು. ತೀರಾ ಮಹತ್ವದ ಅಥವಾ ಅನಿವಾರ್ಯ ಪ್ರಸಂಗಗಳಲ್ಲಿ ಖಾಸಗಿ ಭೇಟಿಗೆ ಅವಕಾಶವಿತ್ತು. ಸಾಮಾನ್ಯವಾಗಿ



ಹೆಚ್ಚಿನವರು ಬೆಳಗಿನ ಪೂಜೆಯ ವೇಳೆಯಲ್ಲೇ ಬಂದು ತೀರ್ಥ ಪ್ರಸಾದ ಸ್ವೀಕರಿಸಿ ಗುರುಗಳನ್ನು ಭೇಟಿಯಾಗಿ ಹೋಗುತ್ತಿದ್ದುದು ರೂಢಿ. ಸಂಜೆ 3 ಗಂಟೆಯ ಮೇಲೂ ಭೇಟಿಗೆ ಬರುವವರಿರುತ್ತಿದ್ದರು. ಬೆಳಿಗ್ಗೆ ಹತ್ತು ಗಂಟೆಯ ವೇಳೆಯಾಯಿತೆಂದರೆ "ನೀವು ಮಧ್ಯಾಹ್ನ ಮನೆಗೇ ಹೋಗಬೇಕೋ ಏನೋ, ಅಡುಗೆ ಮಾಡಿಟ್ಟುಕೊಂಡು ಕಾಯುತ್ತಿರುತ್ತಾರೆಂದು ಕಾಣುತ್ತದೆ. ಆದರೆ ಅಪರೂಪಕ್ಕೆ ಮಠದ ಪ್ರಸಾದ ಬಿಟ್ಟು ಹೋಗಲು ಮನಸ್ಸಾದೀತೆ?" ಎಂದು ಆತ್ಮೀಯವಾಗಿ, ಅಭಿಮಾನದಿಂದ ನಗುತ್ತಾ ವಿನೋದದ ಮಾತುಗಳನ್ನಾಡುವಾಗ ಮತ್ತಷ್ಟು ಕಾಲ ಸತ್ಸಂಗದಲ್ಲಿದ್ದು ಪ್ರಸಾದವನ್ನು ಸ್ವೀಕರಿಸುವ ಪುಣ್ಯಾವಕಾಶವನ್ನು ಕಳೆದುಕೊಳ್ಳಲು ಯಾರಿಗೂ ಮನಸ್ಸಾಗುತ್ತಿರಲಿಲ್ಲ. ಮಧ್ಯಾಹ್ನ ಮಠದಲ್ಲಿ ಊಟ ಮುಗಿದ ಮೇಲೆ ಯಾರಾದರೂ ಕಾರ್ಯಾರ್ಥಿಯಾಗಿ ಬಂದರೆ ಶ್ರೀ ಶ್ರೀ ಗಳವರು ನೇರವಾಗಿ ಮೊದಲು ಕೇಳುತ್ತಿದ್ದ ಪ್ರಶ್ನೆ 'ನಿಮಗೆ ಊಟವಾಗಿದೆಯೇ? ಎಲ್ಲಿ ಊಟ ಮಾಡಿದಿರಿ? ಎಲ್ಲಿಂದ ಬಂದಿರಿ? ಎಂದು ಪರಿಚಾರಕರನ್ನು ಕರೆದು ಊಟಬಡಿಸುವಂತೆ ಹೇಳುತ್ತಿದ್ದರು. ಊಟ ಮಾಡಿ ದಣಿವಾರಿಸಿಕೊಂಡ ಮೇಲೆ ಅಗಂತುಕರನ್ನು ವಿಚಾರಿಸಿ ಅವರ ಸಮಸ್ಯೆ ಬಗೆಹರಿಸಿ ಕಳುಹಿಸುತ್ತಿದ್ದರು. ಮಠಕ್ಕೆ ಯಾವುದೇ ಹೊತ್ತಿನಲ್ಲಿ ಯಾರೇ ಬಂದರೂ ಬೇಸರದಿಂದ ಹಿಂದಿರುಗಿಸಿದ ಪ್ರಸಂಗವಿಲ್ಲ. ಇದೇ ಶ್ರೀ ಶ್ರೀಗಳವರ ಹಿರಿಮೆ.

"ಶೃಣು ಮಮ ವಚನಂ" (ನನ್ನ ಮಾತನ್ನು ಕೇಳು) ಎಂದು ಶ್ರೀ ಶ್ರೀಗಳವರು ಹೇಳುತ್ತಾರೆ. ತನ್ನಲ್ಲಿಲ್ಲದ ಯಾವುದನ್ನೂ ಯಾರೂ ಇತರರಿಗೆ ನೀಡಲಾರರು. ಹಾಗೆಯೇ ಸ್ವತಃ ಗೌರವಿಲ್ಲದವನು ಇತರರನ್ನು ಗೌರವದಿಂದ ಕಾಣಲಾರ. ಈ ಮಾತು ಗುರುಗಳ ಬದುಕಿಗೆ ಅಕ್ಷರಶಃ ಅನ್ವಯವಾಗುತ್ತದೆ. ಅವರು ಎಲ್ಲ ವರ್ಗದವರ, ಎಲ್ಲ ವಯಸ್ಸಿನವರ ಗೌರವಕ್ಕೆ ಪಾತ್ರರಾಗಿದ್ದರು. ಕಾರಣವೇನೆಂದರೆ ಅವರು ಎಲ್ಲ ವೃತ್ತಿಯನ್ನೂ ಗೌರವಿಸು ತ್ತಿದ್ದರು. ಜವಾನರೇ ಆಗಲಿರಲಿ, ಮಂತ್ರಿ ಮಹೋದಯರೇ ಆಗಿರಲಿ ಅಥವಾ ವಿದ್ವಾಂಸರೇ ಆಗಿರಲಿ – ಅವರವರ ವೃತ್ತಿ – ಸ್ಥಾನ ವಯಸ್ಸು–ಅರ್ಹತೆಗನುಗುಣವಾಗಿ ಮಠದಲ್ಲಿ ಗೌರವ ಸಲ್ಲುತ್ತಿತ್ತು. ಪದವಿಪೂರ್ವ ಕಾಲೇಜಿನಲ್ಲಿ ನಾಲ್ಕನೇ ದರ್ಜೆ ನೌಕರನಾಗಿದ್ದ. ಪರಿಶಿಷ್ಟ ಜಾತಿಯ ಸೂರಪ್ಪ ಎಂಬವನ ಮದುವೆಯ ಪೂರ್ಣ ಖರ್ಚನ್ನೂ ಮತ್ತು ಉಡುಗೊರೆಯನ್ನು ಶ್ರೀ ಮಠದಿಂದ ಕೊಡಿಸಿದ್ದರು. ನವರಾತ್ರಿ ಮೊದಲಾದ ಉತ್ಸವಗಳಲ್ಲಿ ನಾನಾ ಕ್ಷೇತ್ರದ ವಿದ್ವಾಂಸರನ್ನು ಸನ್ಮಾನಿಸಲಾಗುತ್ತಿತ್ತು. ಶ್ರೀ ಶ್ರೀಗಳವರ ವರ್ಧಂತಿ ಮೊದಲಾದ ವಿಶೇಷ ದಿನಗಳಲ್ಲಿ ಮಠದ ಎಲ್ಲ ನೌಕರರಿಗೆ ವಿಶೇಷ ಸಂಭಾವನೆ ದೊರಕುತ್ತಿತ್ತು. ಯಾವುದಾದರೂ ವಿಶೇಷ ಸಂದರ್ಭಗಳಲ್ಲಿ ಪೂಜೆಯ ನಂತರ ಶ್ರೀ ಶ್ರೀಗಳವರಿಗೆ ಗೌರವ ಪೂರ್ಣ ವಂದನೆ ಸಲ್ಲಿಸಿ, ಆಯಾ ವಿಭಾಗದಲ್ಲಿ ನಿಯುಕ್ತರಾದವರು ಕಾರ್ಯನಿತರರಾಗಿ ಬಿಡುತ್ತಿದ್ದರು. ಅಕಸ್ಮಾತ್ ಶ್ರೀ ಶ್ರೀಗಳವರು ಅಂತಹ ಕಾರ್ಯ ಸ್ಥಾನದ ಕಡೆಗೆ ಗಮನಹರಿಸಿದಾಗ, ಎಲ್ಲ ಕೆಲಸವನ್ನೂ ಅಲ್ಲಲ್ಲಿಗೇ ನಿಲ್ಲಿಸಿ ಎದ್ದು ನಿಂತು ಪುನಃ ಪುನಃ ನಮಸ್ಕರಿಸುತ್ತಿರಬೇಕೆಂದು ಅವರು

ನಿರೀಕ್ಷಿಸುತ್ತಿರಲಿಲ್ಲ. ಬದಲಿಗೆ "ಹಾಂ...ನೀವು ಪಾಕ ಪ್ರವೀಣರು. ನೀವು ಅಡುಗೆ ಮನೆಯ ಮಹಾರಾಜರು... ಈ ಕುಂಬಳಕಾಯಿ ಕಡಿಯುವವರು ನಿಮ್ಮ ಮಂತ್ರಿಗಳು...ಪಾಯಸಕ್ಕೆ ಸಾಕಷ್ಟು ಉಪ್ಪು ಹಾಕಿದ್ದೀರೋ.." ಎಂದು ಹೇಳುತ್ತಾ ಕೆಲಸದ ಆಯಾಸವೇ ಗೊತ್ತಾಗದಂತೆ, ನಗಿಸುತ್ತಿದ್ದರು. ಯಾವುದೇ ವಿಭಾಗದಲ್ಲಿ, ದೈಹಿಕ ಶ್ರಮದ ಕೆಲಸವೇ ಇದ್ದರೂ, ದಣಿವೇ ಅರಿವಾಗದಂತೆ ಮತ್ತಷ್ಟು ಚುರುಕಾಗಿ ಕಾರ್ಯನಿರ್ವಹಿಸುವಂತೆ, ಮಧುರ ವಚನಗಳಿಂದ ಪ್ರೋತ್ಸಾಹಿಸುತ್ತಿದ್ದರು. ಆದರೆ ಅವರ ಈ ಸಲುಗೆಯ ದುರ್ಲಾಭ ಪಡೆದು ಅವರನ್ನು ಯಾರೂ ಎಂದೂ ಲಘುವಾಗಿ ಪರಿಗಣಿಸಿದುದಿಲ್ಲ, ಎಂದೂ ಅವರ ಗಾಂಭೀರ್ಯ ಗೌರವಗಳಿಗೆ ಕುಂದುಂಟಾದ ಸನ್ನಿವೇಶಗಳು ಸಂಭವಿಸಲಿಲ್ಲ.

ಶ್ರೀ ಶ್ರೀಗಳವರು ತುಂಬಾ ಸೂಕ್ಷ್ಮಗ್ರಾಹಿಗಳು. ಶ್ರೀಮಠದ ಆವರಣದಲ್ಲಿ ಎಲ್ಲೆಲ್ಲಿ ಯಾವುದೇ ಕಾರ್ಯಚಟುವಟಿಕೆ ನಡೆಯುತ್ತಿದ್ದರೂ ಅಲ್ಲೆಲ್ಲ ಅವರು ಏಕಕಾಲಕ್ಕೆ ಗಮನ ಹರಿಸುತ್ತಿದ್ದರು. ಪೂಜೆ-ಪಾರಾಯಣಾದಿಗಳಲ್ಲಿ ಯಾವುದಾದರೊಂದು ಸ್ವರ ವ್ಯತ್ಯಾಸವಾದರೆ, ಅಪಶಬ್ಧ ಕೇಳಿಸಿತೆಂದರೆ, ಸಮಾರಂಭವೆಲ್ಲ ಮುಗಿದ ಮೇಲೆ ಸಂಬಂಧಿಸಿದ ವ್ಯಕ್ತಿಯನ್ನು ಪ್ರತ್ಯೇಕವಾಗಿ ಕರೆಯಿಸಿ ಅಂತಹ ತಪ್ಪನ್ನು ತಿದ್ದಿಕೊಳ್ಳುವಂತೆ ಸೂಚಿಸುತ್ತಿದ್ದರು. "ನೀನು ಇಂತಹ ತಪ್ಪನ್ನು ಮಾಡಿದ್ದಿ ಸರಿಯಾಗಿ ತಿದ್ದಿಕೊ. ಇನ್ನೆಂದೂ ತಪ್ಪು ಮಾಡಕೂಡದು" ಎಂದು ಗದರಿಸಿ ಎಲ್ಲರ ಎದುರಿನಲ್ಲಿ ತೇಜೋವಧೆ ಮಾಡುತ್ತಿರ ಲಿಲ್ಲ. ಹೀಗಾಗಿ ಎಲ್ಲರೂ ಜಾಗರೂಕರಾಗಿರುತ್ತಿದ್ದರು. ಅವರ ಶುದ್ಧವಾದ ಆಚಾರ-ಅನುಷ್ಠಾನಕ್ಕೆ ಒಂದು ವಿಶಿಷ್ಟವಾದ ಶಕ್ತಿಯಿತ್ತು. ಅವರು ಅಭಿಮಂತ್ರಿಸಿ ನೀಡಿದ ಪೂಜಾ ಪ್ರಸಾದ, ಯಂತ್ರ ಮೊದಲಾದ ರಕ್ಷೆಯಿಂದ ಭೂತ ಚೇಷ್ಟೆ ಮನೋರೋಗ ಮೊದಲಾದಂತೆ ಅಗೋಚರವಾದ ಅನೇಕ ವ್ಯಾಧಿಗಳು ದೂರವಾಗುತ್ತಿದ್ದ ಅನುಭವ ಜನಜನಿತವಾಗಿದೆ.

ಶ್ರೀ ಶ್ರೀಗಳವರು ಸಂನ್ಯಾಸ ಸ್ವೀಕರಿಸಿ ಮಠಕ್ಕೆ ಬಂದಾಗಿನ ಅಂದಿನ ಸ್ಥಿತಿಗೆ ಸಾಕ್ಷೀಭೂತರಾಗಿದ್ದ ಕಂಚೀತೋಟದ ಶೀನಯ್ಯ, ಜಮ್ಮಟ್ಟಿಗೆ ವೆಂಕಟಗಿರಿ ಭಟ್ಟರು ಮೊದಲಾದ ಅನೇಕ ಹಿರಿಯರು ಇತ್ತೀಚಿನ ದಿನಗಳವರೆಗೂ ಬದುಕಿದ್ದರು. ತೆಂಗಿನಗರಿಯ ಮರೆಯೇ ಸ್ನಾನಗೃಹ. ಏಕಾಗ್ರತೆಗೆ ಪೂರಕವಾದ ಅನುಷ್ಠಾನದ ಕೋಣೆಯಿಲ್ಲ. ತುಂಬಾ ಶಿಥಿಲವಾದ ಮಠದ ಕಟ್ಟಡ. ದೇವರ ಗುಡಿಗಳು, ಎಲ್ಲವನ್ನೂ ನವೀಕರಿಸಿ, ಪ್ರವಾಸಿ ತಾಣವೋ ಎಂಬಂತೆ ಶ್ರೀಮಠಕ್ಕೆ ಆಕರ್ಷಕ ರೂಪವನ್ನು ನೀಡಿದುದು ಶ್ರೀ ಶ್ರೀಗಳವರ ಸಾಧನೆಗಳಲ್ಲೊಂದು.

ಯಾವುದಾದರೊಂದು ಸಂದರ್ಭದ ನೆಪದಲ್ಲಿ ಬೇರೊಬ್ಬರ ಸ್ಥಿತಿಯನ್ನು ಕುರಿತು ಪ್ರಸ್ತಾಪಿಸಿದಾಗ "ಬೆಳಿಗ್ಗೆ ತಿಂಡಿಗೆ ಏನು ಮಾಡಲಿ, ಮಧ್ಯಾಹ್ನಕ್ಕೇನು? ರಾತ್ರಿಗೇನು? ಇಂತಹ ದುರ್ಗತಿ ಬಂತಲ್ಲ ಎಂಬ ಕಾಲವೊಂದಿತ್ತು. ಈಗ ಬೆಳಿಗ್ಗೆ ತಿಂಡಿಗೆ ಏನೇನು, ಮಧ್ಯಾಹ್ನಕ್ಕೆ ಏನೇನು, ರಾತ್ರಿಗೆ ಏನೇನು ಮಾಡೋಣ ಎಂಬುದು ಗೊತ್ತಾಗುತ್ತಿಲ್ಲ" ಎಂದು ಪರೋಕ್ಷವಾಗಿ ಮಠದ ಒಂದು ಕಾಲದ ಪರಿಸ್ಥಿತಿಯನ್ನು ನೆನಪಿಸಿಕೊಳ್ಳುತ್ತಿದ್ದರು.

ಸಂಚಾರದಲ್ಲಿದ್ದು, ಆಂಧ್ರದ ಪುಂಗನೂರಿನಲ್ಲಿ ಸಮಾಧಿ ಹೊಂದಿದ ಅವರ ಗುರುಗಳ ಸಮಾಧಿಯ ಕಲಾಕರ್ಷಣ ಮಾಡಿ ಶಾರದಾ ದೇವಾಲಯದ ಪಕ್ಕದಲ್ಲಿ ಸಮಾಧಿ



ನಿರ್ಮಾಣ ಮಾಡಿಸಿ ಪ್ರತಿದಿನ ದರ್ಶನ ಮಾಡುತ್ತಿದ್ದರು. ಭಂಡಿಗಡಿಯ ಸ್ವಾಮಿಗಳವರು ಬ್ರಹ್ಮೀಭೂತರಾದಾಗ ಪಾರ್ಥೀವ ಶರೀರದ ಸಂಸ್ಕಾರಕ್ಕೆ ಸ್ಥಳೀಯರಿಗೆ ದಿಕ್ಕು ತೋಚದಂತಾದಾಗ ಪರಿಸ್ಥಿತಿಯನ್ನು ಅರ್ಥೈಸಿಕೊಂಡು ಸ್ವಯಂ ಸ್ಫೂರ್ತಿಯಿಂದ ಶ್ರೀಯುತ ಮಂಜುನಾಥ ಜೋಯ್ಸ್ ಮೊದಲಾದವರನ್ನು ಪ್ರೇರಿಸಿ ಕರೆದೊಯ್ದು ಧಾರ್ಮಿಕ ವಿಧಿ ವಿಧಾನಗಳನ್ನು ನೆರವೇರಿಸಲು ಕಾರಣೀಭೂತರಾದರು. ಇದು ಓರ್ವ ಮಠಾಧಿಪತಿಗಳಾದ ಅವರ ಧಾರ್ಮಿಕ ಅನುಷ್ಠಾನದ ವ್ಯಾಪ್ತಿಗೆ ಬರುವ ಜವಾಬ್ದಾರಿಯೇನಲ್ಲ. ಆದರೂ ಮಾನವ ಸಹಜವಾದ ಅವರ ಈ ಕಳಕಳಿ ಅದೆಷ್ಟು ಜನರಿಗೆ ಅರ್ಥವಾಯಿತೋ ಗೊತ್ತಿಲ್ಲ, ಟೀಕಿಸಿದವರೂ ಇದ್ದರು.

ಶ್ರೀ ಶ್ರೀಗಳವರು ಹಿಂದೊಮ್ಮೆ ಹೊರನಾಡು ಅನ್ನಪೂರ್ಣೇಶ್ವರೀ ದರ್ಶನಕ್ಕೆ ಹೋದಾಗ ಸನ್ನಿಧಿಯಲ್ಲೇ "ಅನ್ನಪೂರ್ಣೇಶ್ವರೀ ಸ್ತೋತ್ರ" ವನ್ನು ರಚಿಸಿ ಸ್ತುತಿಸಿದುದು ಅವರ ಅಶು ಕವಿತ್ವ ಪ್ರತಿಭೆಗೆ ಉದಾಹರಣೆ. ಲಲಿತಾ ಸಹಸ್ರನಾಮವನ್ನು ಕುರಿತ "ಸೌದಾಮಿನೀ" ಶ್ರೀ ಶ್ರೀಗಳವರ ಸಂಶೋಧನಾತ್ಮಕ ಕೃತಿ. "ದೇವೀ ಪೂಜಾಸ್ತುತಿ" ಶ್ರೀಸೂಕ್ತ ಮಂತ್ರ ಮುದ್ರೆಯನ್ನೊಳಗೊಂಡಿರುವ ಸರಳ ಅರ್ಥಗರ್ಭಿತವಾದ ಒಂದು ಅಪೂರ್ವ ರಚನೆ. "ಅತ್ಯುನ್ನತಿಃ ಪತನಃ ಹೇತುಃ" ಎಂಬ ಸಂಸ್ಕೃತದ ಒಂದು ಗಾದೆಯನ್ನು ವಿಸ್ತರಿಸಿ "ಏರದಿರು, ಏರದಿರು ನೇಸರದ ತುದಿಗೆ" ಎಂಬ ಸಾಲುಗಳಿಂದ ಪ್ರಾರಂಭವಾಗುವ ಕನ್ನಡದ ಒಂದು ಕವಿತೆ ಮಕ್ಕಳ ಪಠ್ಯವಸ್ತುವಾಗವಷ್ಟು ಅರ್ಥಗರ್ಭಿತವಾಗಿದೆ. ಅನೇಕ ಕೃತಿಗಳು ಶ್ರೀಮಠದಿಂದ ಪ್ರಕಟಿಸಲ್ಪಟ್ಟಿವೆ. ಮೈಸೂರಿನ 'ಸುಧರ್ಮಾ'ದಲ್ಲಿ ಪ್ರಕಟವಾದ ಒಂದೆರೆಡು ಸಂಸ್ಕೃತ ಲೇಖನಗಳು ಮೆಚ್ಚುಗೆ ಪಡೆದಿವೆ. ಅನೇಕ ಅಪ್ರಕಟಿತ ಬಿಡಿ ಬರಹಗಳು ಶ್ರೀಮಠದ ಸಂಗ್ರಹದಲ್ಲಿವೆ. (ಆಸಕ್ತರಿಗೆ ಆ ದಿನಗಳಲ್ಲಿ ಶ್ರೀ ಮಠದ ಪ್ರತಿನಿಧಿಯಾಗಿದ್ದ ಶ್ರೀ ಹರಿಹರಪುರ ಬಿ. ಸುಬ್ರಹ್ಮಣ್ಯಂರವರ 'ತೋರು ಬೆಳಕು' ಗ್ರಂಥದಲ್ಲಿ ಹೆಚ್ಚಿನ ಮಾಹಿತಿ ಲಭ್ಯವಿದೆ).

ಶ್ರೀ ಶ್ರೀಗಳವರು ದಕ್ಷ ಆಡಳಿತಗಾರರೂ ಆಗಿದ್ದರು. ಶ್ರೀಮಠದ ಮತ್ತು ಆಸುಪಾಸಿನ ಎಲ್ಲ ಸಂಘ ಸಂಸ್ಥೆಗಳ ಧಾರ್ಮಿಕ ಸಾಮಾಜಿಕ, ಶೈಕ್ಷಣಿಕ ಚಟುವಟಿಕೆಗಳ ಪ್ರೇರಕಶಕ್ತಿಯಾಗಿದ್ದರು. ಆದರ್ಶ 'ಗುರು'ವಾಗಿದ್ದರು. ಅವರು ಮುಕ್ತರಾದಾಗ ನೆರೆದ ಅಪಾರ ಜನಸ್ತೋಮವೇ ಅವರ ಜನಪ್ರಿಯತೆಗೆ, ಸಮಾಜದ ಎಲ್ಲ ಜನ ಸಮುದಾಯದ ಮೇಲೆ ಆವರಿಸಿದ್ದ ಸಮಾನ ಅಭಿಮಾನಕ್ಕೆ, ಅವರ ಆದರ್ಶ ಬದುಕಿಗೆ, ಉದಾಹರಣೆಯಾಗಿದೆ. ಅವರು ಸದಾ ಜನರ ಏಳಿಗೆಯನ್ನೇ ಚಿಂತಿಸುತ್ತಿದ್ದುದರಿಂದ ಅವರ ಮೇಲೆ ಎಲ್ಲರಿಗೂ ಎಲ್ಲಿಲ್ಲದ ಗೌರವ. ಭಕ್ತಿಯಿತ್ತು. ಪ್ರಸ್ತುತ ಪೀಠಾಧಿಪತಿಗಳು ಶ್ರೀ ಶ್ರೀಗಳವರ ಆದರ್ಶದ ಕಂಪನ್ನು ಸ್ವಂತಿಕೆಯ ಪನ್ನೀರಿನೊಡನೆ ಆಧುನಿಕತೆಯ ಸೋಂಕನ್ನು ಬೆರೆಸಿ ಎಲ್ಲೆಡೆ ಪಸರಿಸಲು ಶ್ರಮಿಸುತ್ತಿರುವುದು ಮಹಾಭಾಗ್ಯ.



# ಸ್ತ್ರೀ ಮತ್ತು ಪುರ್ನವಿವಾಹ

ಮದುವೆ ಸ್ವರ್ಗದಲ್ಲಿ ನಿರ್ಣಯಿಸಲ್ಪಡುತ್ತದೆ ಎಂಬುದೊಂದು ಆಂಗ್ಲ ಗಾದೆ. ಹಾಗೆಯೇ "ಗಂಡಿಗೊಂದು ಹೆಣ್ಣು ಹೆಣ್ಣಿಗೊಂದು ಗಂಡು" ಎಂಬುದು ವಿಧಿಲಿಖಿತ ವೆಂದು ಎಲ್ಲರೂ ಉದಾಹರಿಸುವುದುಂಟು. ಆದರೆ ಇತ್ತೀಚಿನ ದಿನಗಳಲ್ಲಿ ಎಲ್ಲ ಗಂಡುಗಳಿಗೂ ಒಂದೊಂದು ಹೆಣ್ಣು ಸಿಕ್ಕೀತೆಂಬ ಮಾತು ಅರ್ಥ ಕಳೆದುಕೊಂಡಿದೆ ಯೆಂಬುದು ಸಾರ್ವತ್ರಿಕ ಅನುಭವ. ಜನಗಣತಿಯ ಆಧಾರದಂತೆ ಗಂಡು ಹೆಣ್ಣುಗಳ ದಾಮಾಶೆಯಲ್ಲಿರುವ ಅಸಾಂಗತ್ಯ ಇದಕ್ಕೆ ಮುಖ್ಯ ಕಾರಣ. ಇತರೆ ಹಲವು ಕಾರಣಗಳೂ ಇವೆ. "ನಾನು ಗಂಡು, ನೀನು ಇದ್ದರೂ, ಸತ್ತರೂ, ಎಷ್ಟೋ ಹೆಣ್ಣುಗಳನ್ನು ಬೇಕಾದರೆ, ಮುದುವೆಯಾಗುತ್ತೇನೆ. ಆದರೆ ನೀನು ಹೆಣ್ಣು ಮರುಮದುವೆಯಾಗುವಂತಿಲ್ಲ" ಎಂದು ಗಂಡ ಹೆಂಡತಿಯನ್ನು ಧಿಮಾಕಿನಿಂದ ಗದರಿಸುವ ಕಾಲವೊಂದಿತ್ತು. ಇದಕ್ಕೆ ಶಾಸ್ತ್ರಗಳ ಸಮ್ಮತಿಯ ಮುದ್ರೆಯೂ ಇತ್ತು. "ರಾಜಾನೋ ಬಹುವಲ್ಲಭಾಃ" ಕ್ಷತ್ರಿಯ ರಾಜರಿಗೆ ಅನೇಕ ಪತ್ನಿಯರಿರುತ್ತಿದ್ದರೆಂಬುದು ಪ್ರಾಚೀನ ಸಾಹಿತ್ಯಗಳ ಸತ್ಯ. ಆದರೆ ಬಹುಪತಿತ್ವ (ಪಾಂಡವರ ಹೊರತಾಗಿ) ವಿಧವಾ ಪತಿತ್ವ ಉದಾಹರಣೆಗಳನ್ನು ಹುಡುಕುವುದು ಕಷ್ಟ.

ಈಗ ಕಾಲದೊಂದಿಗೆ ಜನರ ಜೀವನ ಶೈಲಿಯೂ ಬದಲಾಗಿದೆ. ಭಾರತೀಯ ಸಾಂಸ್ಕೃತಿಕ ಪರಂಪರೆಯ ಆಧಾರ ಸ್ಥಂಭಗಳಾದ ಧರ್ಮಶಾಸ್ತ್ರಗಳು, ಅವುಗಳನ್ನಾ ಧರಿಸಿದ ಆಚಾರ ವಿಚಾರಗಳು, ತಮ್ಮ ಸಾರ್ವಕಾಲಿಕ ಮಹತ್ವವನ್ನು ಕಳೆದುಕೊಂಡಿವೆ. ಈ ದಿಸೆಯಲ್ಲಿ (ವಿಶೇಷವಾಗಿ ಬ್ರಾಹ್ಮವಿವಾಹ ಪದ್ಧತಿಯನ್ನು ಗಮನದಲ್ಲಿರಿಸಿಕೊಂಡು) ಜಿಜ್ಞಾಸುಗಳೊಂದಿಗೆ ಒಂದು ಚಿಂತನೆ.

ಪುರುಷ ರಚಿತವಾದ ಧರ್ಮಶಾಸ್ತ್ರ ಗ್ರಂಥಗಳು (ಪುರುಷ ಪಕ್ಷಪಾತಿ ಗಳಾಗಿದ್ದು ದರಿಂದ) ವಿಧುರರು ಮತ್ತು ಪತ್ನಿಯನ್ನು ತ್ಯಜಿಸಿದ ಗಂಡಸರು ಮಾತ್ರ ಪುನರ್ವಿವಾಹ ವಾಗಲು ಅನುಮತಿಸುತ್ತವೆ. ಆದರೆ ಸ್ತ್ರೀಯರ ಪುನರ್ವಿವಾಹದ ಬಗ್ಗೆ ಧರ್ಮಶಾಸ್ತ್ರಗಳಲ್ಲಿ ಸಂಪೂರ್ಣ ನಿಷೇಧವಿಲ್ಲದಿದ್ದರೂ ಏಕಾಭಿಪ್ರಾಯವೂ ಸ್ಪಷ್ಟತೆಯೂ ಇಲ್ಲ. ಹಾಗಾಗಿ ಈ ಧರ್ಮಶಾಸ್ತ್ರ ವಚನಗಳು ಈಗಿನ ಯುಗ ಧರ್ಮಕ್ಕೆ ಎಷ್ಟು ಪ್ರಸ್ತುತ?

ಭಾರತದ ಸನಾತನ ಧಾರ್ಮಿಕ ಪರಂಪರೆಯಲ್ಲಿ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸವೆಂದು ಮನುಷ್ಯನ ಬದುಕನ್ನು ನಾಲ್ಕು ಮುಖ್ಯ ಹಂತಗಳಾಗಿ (ಆಶ್ರಮಗಳೆಂಬುದಾಗಿ) ವರ್ಗೀಕರಿಸಲಾಗಿದೆ. ಹೆಣ್ಣು ಗಂಡುಗಳು ಸತಿಪತಿಗಳಾಗಿ ಜೀವನದ ಅತಿ ಮಹತ್ವದ ಮತ್ತು ಪವಿತ್ರವಾದ ಜವಾಬ್ದಾರಿಯನ್ನು ಜತೆಜತೆಯಾಗಿ ನಿರ್ವಹಿಸಬೇಕಾಗಿರುವುದರಿಂದ "ಧನ್ಯೋಗೃಸ್ಥಾಶಮ್ರಃ" ಎಂದು ಮಹಾಕವಿ ಉದ್ಗರಿಸು ತ್ತಾನೆ. ಗುರುಕುಲ ವಾಸಿಯಾದ ಬ್ರಹ್ಮಚಾರಿಯು ಮನೆಮನೆಗಳಲ್ಲಿ ಭಿಕ್ಷಾಟನೆಯಿಂದ ಸಂಗ್ರಹಿಸಿದ ಆಹಾರವನ್ನು ಗುರುವಿಗೆ ಅರ್ಪಿಸಬೇಕು. ಹೀಗೆ ಎಲ್ಲ ಶಿಷ್ಯರಿಂದ ಸಂಗ್ರಹಿತ ವಾದುದನ್ನು ಗುರು ಶಿಷ್ಯರಿಗೆ ಹಂಚಬೇಕು. ವಾನಪ್ರಸ್ಥಾಶ್ರಮಿಯದು ವಿಶ್ರಾಂತ ಜೀವನ.



ಒಂದು ವಿಧವಾದ ಪರಾಶ್ರಯದ ಬದುಕು. ಸಂನ್ಯಾಸಿಗಳಂತೂ "ಕರತಲಭಿಕ್ಷಃ ತರುತಲವಾಸಃ" ಎಂಬಂತೆ ಶಿಷ್ಯರು ನೀಡಿದುದನ್ನಷ್ಟೇ ಸ್ವೀಕರಿಸಬೇಕು. ಹೀಗೆ ತನ್ನನ್ನೇ ಆಶ್ರಯಿಸಿದ ಮೂರೂ ಆಶ್ರಮಗಳವರನ್ನೂ ಪೋಷಿಸುವ ಗುರುತರ ಹೊಣೆಗಾರಿಕೆ ಗೃಹಸ್ಥಾಶ್ರಮಿಯದು. ಈತ ತನ್ನ ಆಶ್ರಮ ಧರ್ಮವನ್ನು ಸುಸೂತ್ರವಾಗಿ ನಿರ್ವಹಿಸಲು ಈತನಿಗೆ ಸಹಕರಿಸುವವಳು. ಈತನ ಸಹಧರ್ಮಿಣಿ, ಅರ್ಧಾಂಗಿನಿ, ಗೃಹಿಣಿ, ಇವರಿಬ್ಬರಿಗೂ ಸಾಮಾಜಿಕ, ಧಾರ್ಮಿಕವಾದ ಸಮಾನ ನ್ಯಾಯ ಸಿಗಬೇಕೆಂದು ನಿರೀಕ್ಷಿಸುವುದು ತಪ್ಪಲ್ಲ.

"ಧರ್ಮೇಚ, ಅರ್ಥೇಚ, ಕಾಮೇಚ ನಾತಿ ಚರಾಮಿ" ಎಂಬ ಪ್ರತಿಜ್ಞೆಯೊಂದಿಗೆ ವರ ಆಕೆಯ ಪಾಣಿಗ್ರಹಣ ಮಾಡಿರುತ್ತಾನೆ. ಮುಂದೆ ಸಪ್ತಪದಿಯೊಂದಿಗೆ ಇವರ ದಾಂಪ್ಯಕ್ಕೆ ಕಾನೂನಿನ ಸಮ್ಮತಿಯ ಮುದ್ರೆ ಬೀಳುತ್ತದೆ.

The cremonies are essential for the validity of a maggirage. (a) Invocation before the scared fire, (b) Saptapadi, i.e., The taking of seven steps by the bridegroom and bride jointly before the sacred fire. The marriage becomes completed only when the seventh steps taken. Till then it is imperfect and revocable.

Hindu marriage act section 437

ವಾಗ್ದಾನ, ಕನ್ಯಾವರಣ, ಮಧುಪರ್ಕ, ಕನ್ಯಾದಾನ, ಅಕ್ಷತಾರೋಪಣ ಇವು ಬ್ರಾಹ್ಮ ವಿವಾಹದಲ್ಲಿ ಸಪ್ತಪದಿಗಿಂತ ಮೊದಲಿನ ಮುಖ್ಯ ಪ್ರಕ್ರಿಯೆಗಳು. ಕಾನೂನಿನಂತೆ ಸಪ್ತಪದಿ ಯತನಕ ವೈವಾಹಿಕ ವಿಧಿಯು ಪೂರ್ಣವಾಗಿಲ್ಲದಿರುವುದರಿಂದ ಅದಕ್ಕಿಂತ ಮೊದಲಿನ ಯಾವುದೇ ಹಂತದಲ್ಲೂ ಮದುವೆ ಮುರಿದು ಬಿತ್ತೆಂದಾದರೆ ಹುಡುಗ–ಹುಡುಗಿ ತಮಗಿಷ್ಟ ಬಂದವರೊಡನೆ ವಿವಾಹವಾಗುವುದರಲ್ಲಿ ಯಾವುದೇ ತೊಡಕಿಲ್ಲ. ವಿವಾಹವೇ ಸಂಪನ್ನ ವಾಗದಿದ್ದ ಮೇಲೆ ಇದು ಪುನರ್ವಿವಾಹವಾಗುವುದಿಲ್ಲ. ಹಾಗಾಗಿ ಶಾಸ್ತ್ರ ವಿರೋಧ–ಸಮ್ಮತಿಯ ಪ್ರಶ್ನೆಯೇ ಉದ್ಭವಿಸುವುದಿಲ್ಲ.

ಪ್ರಾಚೀನ ಗ್ರಂಥಗಳಲ್ಲಿ ಸ್ತ್ರೀಯ ವಿಧವಾತ್ವವನ್ನು ವೈಭವೀಕರಿಸಲಾಗಿದೆ.

**"ಯಾ ನಾರೀತು ಪತಿಂ ತ್ಯಕ್ತ್ವಾ ಮನೋವಾಕ್ಕಾಯಕರ್ಮಭಿಃ।**
**ರಹಃ ಕರೋತಿ ವೈ ಜಾರಂ ಗತ್ವಾವಾ ಪುರುಷಾಂತರಂ।**
**ತೇನ ಕರ್ಮವಿಪಾಕೇನ ಸಾ ನಾರೀ ವಿಧವಾ ಭವೇತ್॥ –ಸ್ಕಂದ ಪುರಾಣ**

ಸ್ವೇಚ್ಛಾಚಾರಿಣಿಯಾಗಿ ಗಂಡನನ್ನು ಬಿಟ್ಟು ಗುಟ್ಟಾಗಿ ವ್ಯಭಿಚಾರ ಮಾಡುವ ಮತ್ತು ಪರಪುರುಷನ ಸಂಗ ಮಾಡುವ ನಾರಿಯು ಅಂತಹ ಕರ್ಮವಿಪಾಕದಿಂದ ಮರುಜನ್ಮದಲ್ಲಿ ವಿಧವೆಯಾಗುತ್ತಾಳೆ.

ಪುರುಷನೂ ಧರ್ಮಪತ್ನಿಯನ್ನು ಬಿಟ್ಟು ಪರಸ್ತ್ರೀ ಸಂಗ ಮಾಡಿದರೆ, ಮುಂದಿನ ಜನ್ಮದಲ್ಲಿ ಸ್ತ್ರೀಯಾಗಿ ಜನಿಸಿ ವಿಧವೆಯಾಗುತ್ತಾಳೆಂಬುದಾಗಿ ಶಿವಪಾರ್ವತಿಯರ ಸಂವಾದದಲ್ಲಿ ಈಶ್ವರನು ಉಮೆಯನ್ನು ಕುರಿತು ಹೇಳುತ್ತಾನೆ.

**“ಯಃ ಸ್ವನಾರೀಂ ಪರಿತ್ಯಜ್ಯ ನಿರ್ದೋಷಾಂ ಕುಲ ಸಂಭವಾಮ್ ।**
**ಪರದಾರರತೋ ಹಿ ಸ್ಯಾತ್ ಅನ್ಯಾಂ ವಾ ಕುರುತೇ ಸ್ತ್ರೀಯಮ್**
**ಸೋ ನ್ಯ ಜನ್ಮನಿ ದೇವೇಶಿ ಸ್ತ್ರೀ, ಭೂತ್ವಾ ವಿಧವಾ ಭವೇತ್ ॥**

ನಿರ್ದುಷ್ಟಳೂ, ಸತ್ಕುಲ ಪ್ರಸೂತಳೂ ಆದ ತನ್ನ ಪತ್ನಿಯನ್ನು ತ್ಯಜಿಸಿ ಬೇರೊಬ್ಬನ ಹೆಂಡತಿಯೊಡನೆ ರಮಿಸುವವನು ಅಥವಾ (ತನ್ನ ಪತ್ನಿ ಬದುಕಿರುವಾಗಲೇ) ಇನ್ನೊಬ್ಬ ಹೆಂಗಸನ್ನು ಮದುವೆಯಾಗುವವನು ಮುಂದಿನ ಜನ್ಮದಲ್ಲಿ ಹೆಣ್ಣಾಗಿ ಹುಟ್ಟಿ ವಿಧವೆ ಯಾಗುತ್ತಾನೆ/ಳೆ.

ಸ್ತ್ರೀ, ಪತಿವ್ರತೆಯಾಗಿರಬೇಕು. ಗಂಡನ ಮರಣಾನಂತರ ಸಹಗಮನ ಮಾಡಿ ಮೋಕ್ಷ ಪಡೆಯಬೇಕು (ಮದುವೆಯಾಗುವಂತಿಲ್ಲ) ಎಂದು ಈ ಮುಂದಿನ ಉಕ್ತಿಗಳು ಹೇಳುತ್ತಿವೆ.

**ಆರ್ತಾರ್ತೇ ಮೋದಿತಾಹೃಷ್ಟೇ ಪ್ರೋಷಿತೇ ಮಲಿನಾ ಕೃಶಾ ।**
**ಮೃತೇ ಚ ಮ್ರಿಯತೇ ಪತ್ಯೌ ಸಾಸ್ತ್ರೀ, ಜ್ಞೇಯಾ ಪತಿವ್ರತಾ ।**
**ನಾರೀ ಭರ್ತಾರಮಾಸಾದ್ಯ ಯಾವನ್ನ ದಹತೇ ತನುಮ್ ।**
**ತಾವನ್ನ ಮುಚ್ಯತೇ ಸಾ ಹಿ ಸ್ತ್ರೀ ಶರೀರಾತ್ ಕಥಂಚನ ।**

ಪತಿಯು ಕಷ್ಟ ರೋಗ ರುಜಿನಗಳಿಂದ ಪೀಡಿತನಾದಾಗ ಅಂತಹ ಕಷ್ಟಗಳು ತನಗೇ ಪ್ರಾಪ್ತವಾದಂತೆ ಮಾನಸಿಕವಾಗಿ ಅನುಭವಿಸುವವಳು, ಗಂಡನ ಸಂತೋಷವನ್ನು ತಾನೂ ಹಂಚಿಕೊಂಡು ಆನಂದಿಸುವವಳು, ಗಂಡ ಪ್ರವಾಸಾದಿಗಳಿಗೆ ತೆರಳಿದಾಗ ಉದಾಸೀನಳೂ, ಕೃಶಳೂ ಆಗಿ ಆತನ ನಿರೀಕ್ಷೆಯಲ್ಲೇ ಇರುವವಳು ಮತ್ತು ಆತನ ಮರಣಾನಂತರ ಸಹಗಮನ ಮಾಡುವವಳು ಪತಿವ್ರತೆ. ಹೀಗೆ ಸಹಗಮನದೊಂದಿಗೆ ಶರೀರ ತ್ಯಾಗ ಮಾಡಿ ಗಂಡನನ್ನು ಸೇರುವ ತನಕ ಸ್ತ್ರೀ ಮೋಕ್ಷಕ್ಕೆ ಹೋಗಲಾರಳು.

ಘೋರ ನರಕ ಯಾತನೆಯ ಬದುಕಿಗಿಂತ ಸಹಗಮನದ ಸಾವೇ ಲೇಸೆಂಬಂತೆ ವಿಧವೆಯ ಶೋಚನೀಯ ಸ್ಥಿತಿಯ ಕಾಲವೊಂದಿತ್ತು. ಉನ್ನತ ವ್ಯಾಸಂಗದ ಮಾತಿರಲಿ, ಸಾಮಾನ್ಯ ಶಿಕ್ಷಣಕ್ಕೂ ಆಕೆಗೆ ಅವಕಾಶವಿರಲಿಲ್ಲ. ಹಾಗಾಗಿ ನೌಕರಿ ಮಾಡಿ ಸ್ವತಂತ್ರ ಬದುಕನ್ನು ಸಾಗಿಸುವ ಪ್ರಶ್ನೆಯೇ ಇರಲಿಲ್ಲ. “ಕೊಟ್ಟ ಹೆಣ್ಣು ಕುಲದ ಹೊರಗೆ” ಎಂಬ ಮಾತಿನಂತೆ ಅವಳು ತವರು ಮನೆಯನ್ನೇ ಆಶ್ರಯಿಸಿ ಕೊಂಡಿರುವ ರೂಢಿಯಿರಲಿಲ್ಲ. ಗಂಡನ ಮನೆಯಲ್ಲಿ ಹಸು–ನಾಯಿ–ಬೆಕ್ಕು ಮುಂತಾದ ಪ್ರಾಣಿಗಳ ಸೇವೆಯೊಂದಿಗೆ ಮನೆಯ 'ಕಸ–ಮುಸರೆ' ಮೊದಲಾಗಿ ಎಲ್ಲ ಮನೆ ಮಂದಿಯ ಚಾಕರಿ ಮಾಡುವು ದೊಂದೇ ಅವಳ ಜೀವಿತದ ಗುರಿಯಾಗಿರಬೇಕಿತ್ತು. ಆಟ ಪಾಠಗಳ ನಡುವೆ ನಲಿಯುವ ವಯಸ್ಸಿನಲ್ಲಿ ಬಾಲ ವಿಧವೆಯಾದರಂತೂ ಆಕೆಯ ದಯನೀಯ ಸ್ಥಿತಿಯನ್ನು ಊಹಿಸಲೂ ಸಾಧ್ಯವಿಲ್ಲ. ವಿವಿಧ ಮನೋಧರ್ಮದ ಅತ್ತೆ ಮಾವ, ಭಾವ, ಮೈದುನ, ಅತ್ತಿಗೆ, ನಾದಿನಿ ಮತ್ತು ಬಂಧುಗಳೆಲ್ಲರಿಂದಲೂ ಯಾವಾಗಲೂ ಬೈಗುಳದ ಸುರಿಮಳೆ. “ಪಿಶಾಚಿ, ನಮ್ಮ ಮನೆಯ ಹೊಸಲು (ಹೊಸ್ತಿಲು) ತುಳಿದ ಕೂಡಲೇ ಗಂಡನನ್ನು ನುಂಗಿ ನೀರು ಕುಡಿದವಳು” ಎಂಬ ಕೊಂಕುಮಾತು. ಪರಿಚಿತರೊಡನೆಯಾದರೂ ಸ್ವಲ್ಪ



ಸಲುಗೆಯಿಂದ ಮಾತನಾಡಿದರೆ ಪಾಪಿ, ಸಮಾನ ವಯಸ್ಸಿನ ಹುಡುಗಿಯರೊಂದಿಗೆ ಮುಗಳ್ನಗೆ ಬೀರಿದರೂ ಬಜಾರಿ, ಬೈಗುಳಗಳಿಂದ ಬೇಸತ್ತು ನಾಲಗೆಯ ತುದಿಯಲ್ಲಿ ಬೇಸರ ತೋರಿಸಿಕೊಂಡರೆ ವಾಚಾಳಿ, ಗಯ್ಯಾಳಿ, ಚಿಕ್ಕಮಕ್ಕಳ ಅನುಚಿತವಾದ ತಂಟೆಯ ವರ್ತನೆಗೆ ಬೆರಳು ತೋರಿಸಿದರೂ, ಸಣ್ಣ ಮಕ್ಕಳನ್ನು ನೋಡಿ ಕುರುಬುವ ಮಕ್ಕಳಿಲ್ಲದ ಬಂಜೆ. ನೌಕರರೊಂದಿಗೆ ಕೆಲಸ ಹೇಳುವ ನೆಪದಲ್ಲಿ ಬಾಯಿ ಕಳೆದರೆ ಹಾದರಗಿತ್ತಿ, ಒಳ್ಳೆಯ ಬಟ್ಟೆ ಧರಿಸಿದರೆ ವಯ್ಯಾರಿ, ಏನನ್ನಾದರೂ ತಿನ್ನುವ ಚಪಲವಾದರೆ ಹೊಟ್ಟೆಬಾಕಿ, ಮದುವೆ ಮುಂಜಿ ಮೊದಲಾದ ಮಂಗಲ ಸ್ಥಳಗಳಲ್ಲಿ ಕಾಣಿಸಿಕೊಂಡರೆ ಅಪಶಕುನದ ಮಾರಿ, ಏನಾದರೂ ಜಪ–ಧ್ಯಾನ ಮಾಡಿದರೆ ಕೆಲಸಗಳ್ಳಿ – ಹೀಗೆ ಪ್ರತಿಯೊಂದು ವಿಷಯದಲ್ಲೂ ಹೇಸಿಗೆ ಹುಟ್ಟಿಸುವ ಬಿರುನುಡಿಗಳು. ಸುಮಂಗಲಿಯರ ಮುಂದೆ ಎಲ್ಲಾದರೂ ಕಾಣಿಸಿಕೊಂಡರೆ ಅವರ ಮಾಂಗಲ್ಯವನ್ನೇ ಕಸಿದುಕೊಂಡಳೋ ಎಂಬಂತೆ ಗದರಿಕೆ, ಕೂತರೆ ತಪ್ಪು, ನಿಂತರೆ ಅಪರಾಧ. ಸುಖದ ಕಲ್ಪನೆಯಿಲ್ಲ, ಸಂತೋಷ–ನಗು ಹಾಸ್ಯಗಳ ಕೂಟದ ಸಮೀಪ ಸುಳಿಯುವಂತಿಲ್ಲ. ಅವಳ ಮದುವೆಯಲ್ಲಿ ಉಡುಗೊರೆ ಯಾಗಿ ಬಂದ ಹಣ ಒಡವೆ ವಸ್ತುಗಳು ಯಾವುದೂ ಅವಳದ್ದಾಗಿ ಉಳಿದಿರುವುದಿಲ್ಲ. ಉಳಿದಿದ್ದರೂ ಸಿಗುವುದಿಲ್ಲ. ಕಾಯಿಲೆ ಕಸಾಲೆಯಿಂದ ವಿಶ್ರಾಂತಿ ಬಯಸಿದರೆ ಸೋಮಾರಿಯ ಪಟ್ಟ. ಎಲ್ಲರ ಚಾಕರಿ ಮಾಡಿಕೊಂಡು ಬೊಗಳಲೂ ಬಾರದ ಮೂಕ ನಾಯಿಯಂತೆ ಮೂಲೆಯಲ್ಲಿ ಬಿದ್ದಿರುವುದಾದರೆ ಯವಾಗಲೋ ಒಂದು ತುತ್ತು ಕೂಳು. ಉಸಿರೆತ್ತಿದರೆ ಅದೂ ಇಲ್ಲ. ಈ ನಿತ್ಯ ನರಕವನ್ನು ಕಲ್ಪಿಸಿಕೊಂಡು ಅಥವಾ ನೆರೆಹೊರೆಯಲ್ಲಿ ಕಣ್ಣಾರೆ ಕಂಡೂ ಸಹಿಸುವ ಕಲ್ಲು ಮನಸ್ಸೂ ಘಾಸಿಗೊಂಡರೆ ಸತ್ತು ಸ್ವರ್ಗ ಸೇರುವ ನಿರ್ಧಾರ ಮಾಡುವುದರಲ್ಲಿ ಆಶ್ಚರ್ಯವಿಲ್ಲ. ಏಕೆಂದರೆ ಶಾಸ್ತ್ರ ವಿರೋಧ, ಹಿರಿಯರ ಅಸಮ್ಮತಿಯ ನಡುವೆ ವಿಧವೆ ಮರುಮದುವೆಯಾಗುವಂತಿಲ್ಲ.

ಆದರೆ ಈಗ ಕಾಲ ಬದಲಾಗಿದೆ. ವೈದಿಕ ಕಾಲದಲ್ಲಿ (ನಿರ್ದಿಷ್ಟ ನಿಬಂಧನೆಗೊಳ ಪಟ್ಟಂತೆ ಸ್ತ್ರೀ, ಪುನರ್ವಿಹವಾಹಕ್ಕೆ) ಅವಕಾಶವಿತ್ತೇ? ಶಾಕಲ ಋಕ್ಸಂಹಿತೆಯ 7ನೇ ಅಷ್ಟಕದ 6ನೇ ವರ್ಗದ 27ನೇ ಮಂತ್ರ ಹೀಗಿದೆ.

**ಉದೀರ್ಷ್ವ ನಾರ್ಯಬಿ ಜೀವಲೋಕಂ ಗತಾಸು ಮೇತ ಮುಪಶೇಷ ಏಹಿ ।**
**ಹಸ್ತಗ್ರಾಭಸ್ಯ ದಿಧಿಪೋಸ್ತವೇದಂ ಪತ್ಯುರ್ಜನಿತ್ವಮಭಿ ಸಂಬಭೂಥ ॥**
**ತಾಮುತ್ಥಾಪಯೇತ್ ದೇವರಃ । ಪತಿ ಸ್ಥಾನೀಯಃ । ಅಂತೇವಾಸೀ, ಜರದ್ದಾಸೋವಾ**
**ಉದೀರ್ಷ್ವ ನಾಯರ್ತಾಭಿ ಜೀವಲೋಕಂ ವ್ಯಾಖ್ಯಾನ**

ಪತಿಸ್ಥಾನೀಯನಾದ ಮೈದುನನು (ಗಂಡನ ಚಿತೆಯಿಂದ) ಮುಂದಿನ ಬದುಕಿಗಾಗಿ ಅವಳನ್ನು ಕೈ ಹಿಡಿದು ಎಬ್ಬಿಸಬೇಕು. ಶಿಷ್ಯನೋ ವಯಸ್ಸಾದ ದಾಸನೋ ಆಗಬಹುದು.

**ನಾರೀತು ಪತ್ಯಭಾವೇ ವೈ ದೇವರಂ ಕುರುತೇ ಪತಿಮ್ ।**
**ಪೃಥಿವೀ ಬ್ರಾಹ್ಮಣಾಲಾಭೇ ಕ್ಷತ್ರಿಯಂ ಕುರುತೇ ಪತಿಮ್ ॥**

**–ಮಹಾಭಾರತದ ಅನುಶಾಸನ ಪರ್ವ**

(ಮಹಾಭಾರತದ ಐತಿಹಾಸಿಕ ಘಟನೆಯ ಕಾಲವನ್ನು ಸುಮಾರು ಕ್ರಿ.ಪೂ.ಹತ್ತನೇ ಶತಮಾನವೆಂದು ವಿಮರ್ಶಕರು ಊಹಿಸುತ್ತಾರೆ)

ಪತಿಯ ಮರಣಾನಂರ ಸ್ತ್ರೀಯು ಪತಿಯ ತಮ್ಮನನ್ನು ವರಿಸುತ್ತಾಳೆ. (ಅಂತೆಯೇ ಭೂದೇವಿಯು ಬ್ರಾಹ್ಮಣರಿಲ್ಲದಿದ್ದರೆ ಕ್ಷತ್ರಿಯನನ್ನು ಅಧಿಪತಿಯನ್ನಾಗಿ ವರಿಸುತ್ತಾಳೆ) ಅಂದರೆ ಸುಮಾರು 3 ಸಾವಿರ ವರ್ಷಗಳ ಹಿಂದಿನಿಂದ ಹಾಗೂ ವೈಧಿಕ ಕಾಲದಲ್ಲೂ ಸ್ತ್ರೀ, ಪುನರ್ವಿವಾಹ ಲೋಕಾಚರಣೆಯಲ್ಲಿದ್ದು ನಂತರದ ಧರ್ಮಶಾಸ್ತ್ರಗಳಲ್ಲಿ ನಿರ್ಬಂಧಿಸಲಾಯಿತೆಂದು ತಿಳಿಯುತ್ತದೆ.

Burial was practiced as well as cremation by the Vedic Indians. The widow is called upon to raise from the fire and take the hand of the new husband doubtedly a brother of the deceased in accordance with an ancient marriage custom.

Macdonell History of Sanskrit Literature.

(ಭಾರತೀಯ ವೈದಿಕ ಪರಂಪರೆಯಲ್ಲಿ ಸಮಾಧಿ ಕ್ರಿಯೆ ಹಾಗೂ ದಹನಕ್ರಿಯೆ ಎರಡೂ ಪ್ರಚಲಿತವಿತ್ತು. ಪ್ರಾಚೀನ ವೈವಾಹಿಕ ವಿಧಿಯಂತೆ ಮದುವೆಯಾಗುವ ಸಲುವಾಗಿ, ವಿಧವೆಯನ್ನು ಸಮಾಧಿಯಿಂದ ಮೇಲೆದ್ದು ಬಂದು ಪ್ರಾಯಶಃ ಗತಿಸಿದ ಗಂಡನ ಸಹೋದರನ ಕೈ ಹಿಡಿಯುವಂತೆ ಕೇಳಲಾಗುತ್ತಿತ್ತು)

ಸುಮಾರು 2200 ವರ್ಷಗಳ ಹಿಂದಿನ ಧರ್ಮಶಾಸ್ತ್ರಗಳಲ್ಲಿ ನಿಯೋಗ ಮತ್ತು ಬಾಲವಿಧವೆಯ ಪುನರ್ವಿವಾಹಕ್ಕೆ ಅವಕಾಶವಿತ್ತು.

Vasista Dharma Shastra mentions only six forms of marriage, allows NIYOGA (levirate) and the remarriage of child widows.

Encyclopedia of Hinduism

By Swami Harshananda.

ನಿಯೋಗವೆಂದರೆ (ದೇವರೇಣ ಸುತೋತ್ಪತ್ತಿ?) ಕುಟುಂಬದ ಹಿರಿಯರ ಸಮ್ಮತಿಯ ಮೇರೆಗೆ ಗಂಡನ ಆಸ್ತಿಯಲ್ಲಿ ಪಾಲು ಅನಿವಾರ್ಯವಾದಾಗ ಗಂಡನ ಸಹೋದರ / ಸಹೋದರ ಜ್ಞಾತಿಯಿಂದ ಗಂಡು ಸಂತಾನವನ್ನು ಪಡೆಯುವುದು. ಸಂತಾನವಾದ ಮೇಲೆ ಸಂಬಂಧ ಮುಂದುವರಿಸುವಂತಿಲ್ಲ. ಕಲಿವರ್ಜ್ಯವೆಂದು ಮುಂದೆ ಈ ನಿಯೋಗ ಪದ್ಧತಿಯನ್ನು ನಿಷೇಧಿಸಲಾಯಿತು. ಇತ್ತೀಚಿನ ದಿನಗಳವರೆಗೆ ಕೇರಳದ ಒಂದು ವರ್ಗದವರಲ್ಲಿ ಈ ನಿಯೋಗ ಪದ್ಧತಿ ರೂಢಿಯಲ್ಲಿತ್ತು.

ಹತ್ತೊಂಭತ್ತನೇ ಶತಮಾನದ ಆದಿಯಲ್ಲಿ ರಾಜಾರಾಮ ಮೋಹನರಾಯರು ಸ್ಥಾಪಿಸಿದ ಬ್ರಹ್ಮ ಸಮಾಜದ ಮೂಲಕ ನೈತಿಕ ಮೌಲ್ಯವನ್ನು ಜಾಗ್ರತೆಗೊಳಿಸಿದರು ಮತ್ತು ಸ್ತ್ರೀ ಶಿಕ್ಷಣ, ವಿಧವಾ ವಿವಾಹ, ಪಿತ್ರಾರ್ಜಿತ ಆಸ್ತಿಯಲ್ಲಿ ಹೆಣ್ಣು ಮಕ್ಕಳಿಗೆ ಸಮಪಾಲು ಮೊದಲಾದ ಅನೇಕ ಸಮಾಜ ಸುಧಾರಣೆಗಳನ್ನು ಪ್ರತಿಪಾದಿಸಿದರು. 19ನೇ ಶತಮಾನದ ಮಧ್ಯಭಾಗದಲ್ಲಿ ಸ್ವಾಮಿ ದಯಾನಂದ ಸರಸ್ವತಿಗಳೂ ಆರ್ಯ ಸಮಾಜದ ಅಂದೋಲನಗಳ ಮೂಲಕ ವಿಧವಾ ಪುನರ್ವಿವಾಹ ಮತ್ತು ಬಾಲ್ಯ ವಿವಾಹ ನಿಷೇಧದಂತಹ ಸಮಾಜ ಸುಧಾರಣೆಯನ್ನು ಪ್ರೋತ್ಸಾಹಿಸಿದರು.



ಪ್ರಾಯಶಃ ಎಲ್ಲ ಧರ್ಮ ಶಾಸ್ತ್ರಗಳೂ ವಿವಾಹವನ್ನು ಅತಿಪವಿತ್ರವಾದ ಮತ್ತು ಅನುಲ್ಲಂಘನೀಯವಾದ ಬಂಧನವೆಂದು ಪ್ರತಿಪಾದಿಸಿವೆಯಾದ್ದರಿಂದ ಆಗಿನ ಕಾಲದಲ್ಲಿ ವಿವಾಹವಿಚ್ಛೇದನ ಅಥವಾ ಸ್ತ್ರೀ ಪುನರ್ವಿವಾಹದಂತಹ ಪ್ರಶ್ನೆಗಳಿಗೆ ವಿಶೇಷ ಮಹತ್ವ ವಿರಲಿಲ್ಲ. 1955ರ ಹಿಂದೂ ವಿಆಹ ಕಾಯಿದೆಯ ತಿದ್ದುಪಡಿಯಲ್ಲಿ ವಿವಾಹ ಪದ್ಧತಿ ಮತ್ತು ವಿಚ್ಛೇದನದ ಬಗ್ಗೆ ಅನೇಕ ಸುಧಾರಣೆಗಳನ್ನು ತರಲಾಯಿತು.

Re-marriage of widows seems to have been permitted in the ancient days under certain conditions. Such woman was known as PUNARBHOO. A puranrbhoo was of three kinds.

1.A maiden whose marriage was not consummated and whose husband died suddenly.

2.A woman accused of adultery but returned to her parents.

3.A widow re-married to a close relative of her husband (whether she was chidless or not, is not clear in the case.

Encyclopedia.

1.ವೈವಾಹಿಕ ವಿಧಿ ಶಾಸ್ತ್ರೀಯವಾಗಿ ಮುಗಿಯದೆ ಅಕಸ್ಮಾತ್ ವಿಧವೆಯಾದವಳು.

2.ಹಾದರದ ಆಪಾದನೆಯ ಮೇಲೆ ತವರು ಮನೆಗೆ ವಾಪಸಾದವಳು.

3.ಗಂಡನ ಹತ್ತಿರದ ಸಂಬಂಧಿಯೊಂದಿಗೆ ಪುನರ್ವಿವಾಹವಾದ ವಿಧವೆ ಯೆಂಬುದಾಗಿ 'ಪುನರ್ಭೂ' ಮೂರು ವರ್ಗ.

ಇಂತಹ ಕನ್ಯೆಯನ್ನು ಮದುವೆಯಾಗಬೇಕು ಎಂದು ವಿವಾಹಯೋಗ್ಯಳಾದ ಕನ್ಯೆಯ ಲಕ್ಷಣವನ್ನು ವಿವರಿಸಿ ಅಂತಹ ಲಕ್ಷಣಕ್ಕಿಂತ ಭಿನ್ನವಾದ ಕನ್ಯೆಯನ್ನು ಮದುವೆಯಾಗ ಕೂಡದೆಂದು ಪರ್ಯಾಯವಾಗಿ ನಿಷೇಧಿಸುವ ಯಾಜ್ಞವಲ್ಕ್ಯ ಸ್ಮೃತಿ ಹೀಗಿದೆ.

**ಅನನ್ಯಪೂರ್ವಿಕಾಂ ಕಾಂತಾಂ ಅಸಂಪಿಡಾಂ ಯವೀಯಸೀಂ**
**ಅರೋಗಿಣೀಂ ಭ್ರಾತೃಮತೀಂ ಅಸಮಾನಾರ್ಷಗೋತ್ರಜಾಂ ॥**

ಸುಂದರಿಯೂ, ಅಸಪಿಂಡಿಯೂ, ಕಿರಿಯಳೂ, ರೋಗರಹಿತಳೂ ಅಣ್ಣ–ತಮ್ಮಂದಿರಿದ್ದವಳೂ, ಅಸಮಾನ ಗೋತ್ರದವಳೂ ಆಗಿರಬೇಕೆಂಬುದು ವಿವಾಹ ಯೋಗ್ಯಳಾದ ಕನ್ಯೆಯ ಲಕ್ಷಣ.

ಅನನ್ಯ ಪೂರ್ವಿಕಾ ಅಂದರೆ ಈ ಮೊದಲು ಬೇರೆಯವರನ್ನು ಹೊಂದಿರಬಾರದು, ಬೇರೆ ಪುರುಷರಿಂದ ವರಿಸಲ್ಪಟ್ಟಿರಬಾರದು. ಮನಃಪೂರ್ವಕವಾಗಿ ಅಥವಾ ವಾಗ್ದಾನದ ಮೂಲಕ ಇನ್ನೊಬ್ಬರಿಗೆ ಕೊಡಲ್ಪಟ್ಟವಳಾಗಿರಬಾರದು, ಅಗ್ನಿಸಾಕ್ಷಿಕವಾಗಿ ವರಿಸಲ್ಪಟ್ಟ ವಳಾಗಿರಬಾರದು, ಸಪ್ತಪದಿ ಪರ್ಯಂತ ವಿವಾಹಿತಳಾಗಿರಬಾರದು, ಗರ್ಭಿಣಿಯಾಗಿರಬಾರದು ಮತ್ತು ಮಕ್ಕಳನ್ನು ಹಡೆದವಳಾಗಿರಬಾದೆಂದು ವ್ಯಾಖ್ಯಾನಿಸಲಾಗಿದೆ. 'ಅನನ್ಯ

ಪೂರ್ವಿಕಾ' ಅರ್ಥವ್ಯಾಪ್ತಿಯೊಳಗೆ ಬಾರದವಳು, ವಿವಾಹಯೋಗ್ಯ ಕನ್ಯೆಯಾಗಿರುವುದಿಲ್ಲ. ಅವಳ ವಿವಾಹ ಪುನರ್ವಿವಾಹವೆನಿಸುವು ದರಿಂದ ಈ ವಿವಾಹಕ್ಕೆ ಶಾಸ್ತ್ರ ಸಮ್ಮತಿಯಿಲ್ಲ ವೆಂಬುದು ಸ್ಮೃತ್ಯುಕ್ತಿಯ ವಿವರಣೆ.

ಮನೋದತ್ತಾ, ವಾಗ್ದಾತ್ತಾ ಮತ್ತು ಅಗ್ನಿಸಾಕ್ಷಿಕವಾಗಿ ವಿವಾಹವಾದವಳನ್ನೂ ಸಹ, ಸಪ್ತಪದಿಯಾಗದಿದ್ದರೆ ಆಕೆಯನ್ನು ವರಿಸುವುದರಿಂದ ಸ್ತ್ರೀ, ಪುನರ್ವಿವಾಹ ದೋಷ ವುಂಟಾಗುವುದಿಲ್ಲವೆಂಬ ಅಪವಾದ ಶಾಸ್ತ್ರವೂ ಇದೆ. ಆದರೆ ಸಪ್ತಪದಿಯ ನಂತರ ಬಲಾತ್ಕಾರವಾಗಿಯೂ ಸಹ ಇನ್ನೊಬ್ಬರಿಗೆ ಅವಳನ್ನು ದಾನ ಮಾಡುವಂತಿಲ್ಲ. ಕಲಿಯುಗ ದಲ್ಲಿ ನಿಷೇಧಿತವಾದ ನೌಕಾಪ್ರವಾಸ (ಕಲಿಯುಗ ನಿಷಿದ್ಧ ಪಂಕ್ತಿಯಲ್ಲಿ 'ನೌಕಾ ಪ್ರವಾಸ' ಎಂದಿದೆ. ಆದರೆ ವಿಮಾನಯಾನದ ಪ್ರಸ್ತಾಪವಿಲ್ಲ. ಆಗ ವಿಮಾನ ಪ್ರಯಾಣ ಪ್ರಚಲಿತ ವಾಗಿಲ್ಲದಿರುವುದು ಕಾರಣವಿರಬಹುದೆ?) ಅಂತರ್ಜಾತೀಯ ವಿವಾಹ, ಮೈದುನನಿಂದ ಸಂತಾನೋತ್ಪತ್ತಿ (ನಿಯೋಗ) ಮಧುಪರ್ಕದಲ್ಲಿ ಪಶುವಧೆ, ಶ್ರಾದ್ಧದಲ್ಲಿ ಮಾಂಸದ ಉಪಯೋಗ, ವಾನಪ್ರಸ್ಥಾಶ್ರಮ ಸ್ವೀಕಾರ ಮೊದಲಾದ ನಿಷೇಧಗಳಂತೆಯೇ ಜಲಧಾರಾ ಪೂರ್ವಕವಾಗಿ ದಾನ ಮಾಡಿದ ಕನ್ಯೆ "ಅಕ್ಷತಯೋನಿ" ಯಾಗಿದ್ದರೂ ಆಕೆಯ ಪುನರ್ವಿವಾಹವನ್ನು ನಿಷೇಧಿಸಲಾಗಿದೆ. ಇಂತಹ ವಿವರಣೆಗಳನ್ನೊಳಗೊಂಡ ಕಮಲಾಕರ ಭಟ್ಟ ಕೃತ ನಿರ್ಣಯ ಸಿಂಧು ಸುಮಾರು ಮೂರೂವರೆ ಸಾವಿರ ವರ್ಷಗಳ ಹಿಂದಿನದ್ದಾದರೆ ಅದರ ಸಂಕ್ಷಿಪ್ತ ರೂಪದಂತಿರುವ ಧರ್ಮ ಸಿಂಧು ತೀರಾ ಇತ್ತೀಚಿನದು. ಅಂದರೆ ಸುಮಾರು 200 ವರ್ಷಗಳ ಹಿಂದಿನ ಕೃತಿ.

ವ್ಯಾಕರಣ ಶಾಸ್ತ್ರದಂತೆ ಕನ್ಯಾದಾನವಾದ ಕೂಡಲೇ ಆಕೆ ವರನ ಸ್ವತ್ತಾಗಿ ಬಿಡುತ್ತಾಳೆ. (ಮುಂದಿನ ವೈವಾಹಿಕ ಪ್ರಕ್ರಿಯೆಗಳು ಗೌಣವಾಗುತ್ತವೆ) ಹಾಗಾಗಿ "ಕನ್ಯಾದಾನ" ಮುಗಿದ ನಂತರ ಧಾರ್ಮಿಕವಾಗಿ ಆ ಕನ್ಯೆಯ ಪುನರ್ವಿವಾಹ ಸ್ವರೂಪ ಇತ್ಯಾದಿ ಎಲ್ಲವೂ ತುಂಬಾ ಗೊಂದಲಮಯ, ಅರ್ಥಹೀನ. ಧಾಣ್ ದಾನೇ ಎಂಬ ಧಾತುವಿನೊಂದಿಗೆ ದಾನ ಎಂಬ ಪದ ಸಿದ್ಧಿಸುತ್ತದೆ. ದಾ ಧಾತುವಿನ ಅರ್ಥವನ್ನು ಹೀಗೆ ವಿವರಿಸಲಾಗಿದೆ.

**ಸ್ವಸ್ವತ್ವ ನಿವೃತ್ತಿಪೂರ್ವಕ ಪರಸ್ವತ್ವ ಆಪಾದನ ರೂಪೋ ವ್ಯಾಪಾರಃ।**

ಸಂಪ್ರದಾನಮ್ (1–4–32) ಸೂತ್ರದ ತತ್ವಬೋಧಿನೀ ಟೀಕಾಕಾರಕ ವ್ಯಾಖ್ಯಾನವೂ ದಾನಂ ಚ ಅಪುನರ್ಗ್ರಹಣಾಯ – ಸ್ವಸ್ವತ್ವ ನಿವೃತ್ತಿ ಪೂರ್ವಕಂ ಪರಸ್ವತ್ವ ಉತ್ಪಾದನಂ ಇದನ್ನೇ ಸಮರ್ಥಿಸುತ್ತದೆ. ಅದರಂತೆ "ಸಕೃತ್ ಕನ್ಯಾಪ್ರದೀಯತೇ" ಎಂಬ ಉಕ್ತಿ ಪ್ರಚಲಿತವಾಗಿದೆ.

ಮದ್ಯವ್ಯಸನಿ, ದೀರ್ಘರೋಗಿ, ಬಂಜೆ, ಅಪ್ರಿಯವಾದಿನಿ, ಕೋಪಿಷ್ಟಳಾಗಿ ಗೃಹತ್ಯಾಗ ಮಾಡುವವಳು ಇಂತಹ ಪತ್ನಿಯನ್ನು (ಮೂರನೇ ಒಂದಂಶ ಆದಾಯವನ್ನು ನೀಡಿ) ತ್ಯಜಿಸಿ ಪುರುಷನು ನಿರ್ದುಷ್ಟಳಾದ ಬೇರೊಬ್ಬ ಕನ್ಯೆಯನ್ನು ಪುನರ್ವಿವಾಹವಾಗಬಹುದು (ಆದರೆ ಮೂರನೇ ಮದುವೆಗೆ ಪ್ರೋತ್ಸಾಹವಿಲ್ಲ. ಹಾಗೆಯೇ ಸ್ತ್ರೀ, ಪುನರ್ವಿವಾಹಕ್ಕೆ ಸಂಬಂಧಿಸಿದ ಕೆಲವು ಸ್ಮೃತ್ಯುಕ್ತಿಗಳು.



**ಉದ್ವಾಹಿತಾಪಿ ಸಾ ಕನ್ಯಾ ನ ಚೇತ್ ಸಂಪ್ರಾಪ್ತ ಮೈಥುನಾ।**
**ಪುನಃ ಸಂಸ್ಕಾರ ಮರ್ಹೇತ ಯಥಾ ಕನ್ಯಾ ತಥೈವ ಸಾ॥**

**–ನಾರದ ಸ್ಮೃತಿ**

ಮದುವೆಯಾಗಿದ್ದರೂ ಪತಿಯ ದೈಹಿಕ ಸಂಪರ್ಕವಾಗಿಲ್ಲದವಳು ಕನ್ಯಾದಾನಾದಿ ಪುನಃ ಸಮಸ್ಕಾರಕ್ಕೆ ಅರ್ಹಳಾಗಿರುತ್ತಾಳೆ.

**ವರಯಿತ್ವಾಯಃ ಕಶ್ಚಿತ್ ಪ್ರಣಶ್ಯೇತ್ ಪುರುಷೋ ಯದಾ।**
**ಋತ್ವಾಗಮಾನ್ ತ್ರೀನ ತೀತ್ಯ ಕನ್ಯಾನ್ಯಂ ವರಯೇದ್ವರಂ॥**

**–ಕಾತ್ಯಾಯನ ಸ್ಮೃತಿ**

**ಪ್ರತಿಗೃಹ್ಯತು ಯಃ ಕನ್ಯಾಂ ವರೋ ದೇಶಾಂತರಂ ವ್ರಜೇತ್।**
**ತ್ರೀನ್ ಋತೂನ್ ಸಮತಿ ಕ್ರಮ್ಯ ಕನ್ಯಾನ್ಯಂ ವರಯೇದ್ವರಂ॥**

**–ನಾರದ ಸ್ಮೃತಿ**

ವರನು ಮರಣಿಸಿದರೆ ದೇಶಾಂತರ ಹೋಗಿ ಕಾಣೆಯಾದರೆ ವಧು ಮೂರು ಬಾರಿ ಋತು ಸ್ನಾತಳಾದ ನಂತರ ಬೇರೆ ವರನನ್ನುವರಿಸಬಹುದು.

**ನಷ್ಟೇಮೃತೇ ಪ್ರವ್ರಜಿತೇ ಕ್ಲೀಬೇ ಚ ಪತಿತೇ ಪತೌ।**
**ಪಂಚಸ್ವಾಪತ್ಸು ನಾರೀಣಾಂ ಪತಿರನ್ಯೋ ವಿಧೀಯತೇ॥**

**–ಪರಾಶರ ಸ್ಮೃತಿ**

(ಅರ್ಥಾತ್ ವಾಗ್ದಾನಾನಂತರಂ ಪಾಣಿಗ್ರಹಣಾತ್ ಪ್ರಾಕ್ ಪತೌ ಸಂಭಾವಿತೋತ್ಪತ್ತಿಕ ಪತಿತ್ವಕೇ ನಷ್ಟೇ, ದೂರದೇಶ ಗಮನೇವಾ ಅಪರಿಜ್ಞಾತವೃತ್ತಾಂತೇ) ಅಂದರೆ ವಾಗ್ದಾನಾ ನಂತರ ಪಾಣಿಗ್ರಹಣಕ್ಕೆ ಮೊದಲು ವರನು ದೇಶಾಂತರಕ್ಕೆ ಹೋದವನ ಸಮಾಚಾರವೇ ಸಿಗದಿದ್ದಾಗ, ಮರಣ ಹೊಂದಿದರೆ, ಸಂನ್ಯಾಸಗ್ರಹಣ ಮಾಡಿದರೆ, ನಪುಂಸಕನಾದರೆ, ಪತಿತನಾಗಿ ತನ್ನ ಪತಿತ್ವವನ್ನೇ ಕಳೆದುಕೊಂಡರೆ ವಧು ಬೇರೊಬ್ಬನನ್ನು ವರಿಸಬಹುದು.

ಮೇಲೆ ಉದಾಹರಿಸಿದ "ಉದ್ವಾಹಿತಾಪಿ ಸಾ ಕನ್ಯಾ" ಎಂದು ಮೊದಲಾಗಿ ಎಲ್ಲ ಉಕ್ತಿಗಳೂ ಕೆಲವು ವಿಶೇಷ ಸನ್ನಿವೇಶಗಳಲ್ಲಿ ಸ್ತ್ರೀ, ಪುನರ್ವಿವಾಹಕ್ಕೆ ಶಾಸ್ತ್ರ ಸಮ್ಮತಿಯ ಮುದ್ರೆ. ಈ ಶಾಸ್ತ್ರ ಸಮ್ಮತಿಯನ್ನು ಸಾರ್ವಕಾಲಿಕವೆಂದು ಪರಿಗಣಿಸಬೇಕಾದುದು ಇಂದಿನ ಅವಶ್ಯಕತೆ.

ಶ್ರುತಿ, (ವೇದ) ಸ್ಮೃತಿ, ಪುರಾಣಗಳ ಕಾಲಾನುಕ್ರಮದಲ್ಲಿ ವೇದಗಳಿಗೆ ಪ್ರಾಚೀನತೆ, ಸ್ಮೃತಿಗಳು, ಪುರಾಣಗಳು ದೃಷ್ಟಾಂತಗಳ ಮೂಲಕ ವೇದಗಳ ಅರ್ಥವನ್ನೇ ಪ್ರತಿ ಪಾದಿಸುವ ನಂತರದ ಕೃತಿಗಳು. ಇವೆಲ್ಲವೂ ಪ್ರತಿ ಪಾದಿಸುವ ತತ್ತ್ವಗಳನ್ನು ಧಾರ್ಮಿಕ ಆಚರಣೆಗಳಿಗೆ ಹೊಂದಿಸಿ ಶಾಸ್ತ್ರಗಳ ಚೌಕಟ್ಟಿನಲ್ಲಿ ನಿರೂಪಿಸುವ ಗ್ರಂಥಗಳೇ ಧರ್ಮಶಾಸ್ತ್ರ ಗ್ರಂಥಗಳು. ಕರ್ತೃ, ಕಾಲ, ದೇಶಗಳ ಭಿನ್ನತೆಯಿಂದಾಗಿ ಈ ಧರ್ಮಶಾಸ್ತ್ರಗಳಲ್ಲಿ ಏಕಾಭಿಪ್ರಾಯವಿಲ್ಲ ದಿರುವುದರಿಂದ ಈ ಧರ್ಮ ಶಾಸ್ತ್ರಗಳ ನಿಯಮಗಳನ್ನು ಪ್ರಸ್ತುತ ಸನ್ನಿವೇಶಕ್ಕೆ ಯಥಾವತ್ತಾಗಿ ಅನ್ವಯಿಸುವಂತಿಲ್ಲ. ಹಾಗೆಂದು ಧರ್ಮಶಾಸ್ತ್ರದ ಮಿತಿಯನ್ನು

ಮೀರಿ ಧಾರ್ಮಿಕ ಆಚರಣೆಗಳನ್ನು ಸಂಪೂರ್ಣವಾಗಿ ಆಚರಣೆಗೊಳಪಡಿಸಿದರೆ ನಾವು ಭಾರತೀಯತೆಯನ್ನೇ ಕಳೆದುಕೊಳ್ಳುವ ಅಪಾಯವಿದೆ. ವೇದಕಾಲೀನ ಪರಂಪರೆಯಿಂದ ಪೌರಾಣಿಕ ಯುಗದ ತನಕವೂ ಸತೀ ಸಹಗಮನ, ಸ್ತ್ರೀ ಪುನರ್ವಿವಾಹ ಮತ್ತು ವಿಧವಾ ವಿವಾಹದ ಕಲ್ಪನೆಗಳಿದ್ದುವೆಂಬುದು ಸ್ಪಷ್ಟ. ಆದರೆ ಯುಗಧರ್ಮಕ್ಕನುಗುಣವಾಗಿ ಕಲಿಯುಗದಲ್ಲಿ ಕೆಲವನ್ನು ಶಾಸ್ತ್ರ ನಿಷಿದ್ಧವೆಂದು ಹೆಸರಿಸಲಾಗಿದೆ. ಪ್ರಾಚೀನ ಕಾಲದಲ್ಲಿ ಕನ್ಯೆ ಋತುಮತಿಯಾಗುವ ಮೊದಲೇ (....ಪಾಲಿತಾ ವತ್ಸ ರಾಷ್ಟಕಂ) ಕನ್ಯಾ ಗೃಹದಲ್ಲಿ ನಾಲ್ಕೈದು ದಿನಗಳ ಕಾಲ ವಿವಾಹ ನಡೆಯುವುದಿತ್ತು. ವಾಗ್ದಾನ, ಕನ್ಯಾವರಣ ಹಾಗೂ ಕನ್ಯಾದಾನದಲ್ಲಿ ವಧೂವರರ ಮೂರು ತಲೆಮಾರಿನವರ ಹೆಸರನ್ನು ಗೋತ್ರಪ್ರವರ ಗಳೊಂದಿಗೆ ಗಟ್ಟಿಯಾಗಿ ಉಚ್ಚರಿಸುವಾಗ ನೆರೆದ ಬಂಧುಗಳ ಅಥವಾ ಹಿರಿಯರ ಗುಸುಗುಟ್ಟುವ ಆಕ್ಷೇಪಣೆಯಿಂದಾಗಿ ವಧುವಿನಲ್ಲಾಗಲೀ, ವರನಲ್ಲಾಗಲೀ ದೋಷಗಳಿವೆ ಎಂಬ ಭಾವನೆ ಉಂಟಾದಲ್ಲಿ ಯಾವುದೇ ಹಂತದಲ್ಲೂ ವಿವಾಹ ಪ್ರಕ್ರಿಯೆ ಅಪೂರ್ಣ ವಾಗಿ ನಿಂತೇ ಹೋಗುವ ಸಂಭವವಿತ್ತು. ಅಂತಹ ಸಂದರ್ಭಗಳಲ್ಲಿ ಪುನರ್ವಿವಾಹಕ್ಕೆ ಸಂಬಂಧಿಸಿದ ಇಂತಹ ಉಕ್ತಿಗಳಿಗೆ ಸಾರ್ಥಕತೆಯಿದ್ದೀತು. ಧಾರಾ ಪೂರ್ವಕ ಕನ್ಯಾದಾನವಾದ ಕೂಡಲೇ "ಕನ್ಯಾಂಪ್ರತಿಗೃಹ್ಣಾತು ಭವಾನ್" ಎಂಬ ವಧು ಪಿತನ ಕೋರಿಕೆಯಂತೆ "ಪ್ರತಿಗೃಹ್ಣಾಮಿ" ಎಂದು ವಚನವಿತ್ತ ಮಾತ್ರಕ್ಕೆ ಅಥವಾ "ಧರ್ಮೇಚ, ಅರ್ಥೇಚ, ಕಾಮೇಚ ನಾತಿ ಚರಾಮಿ" ಎಂದು ವಚನವಿತ್ತ ಮಾತ್ರಕ್ಕೆ ವಿವಾಹ ಪ್ರಕ್ರಿಯೆ ಮುಗಿದಂತಾಗುವುದಿಲ್ಲ. ಲಾಜಾ ಹೋಮದ ನಂತರ "ಸಪ್ತಪದಿ" ಯಾದ ಮೇಲೆ ವಧೂವರರು ನಿಜವಾದ ಸತಿಪತಿಗಳಾಗುತ್ತಾರೆ. ಆದುದರಿಂದ ವಿವಾಹ ಪ್ರಕ್ರಿಯೆ ಮುಗಿಯುವ ಮೊದಲೇ ಸಂಭವಿಸಬಹುದಾದ ಘಟನೆಗಳನ್ನು ಲಕ್ಷಿಸಿ ಮಾತ್ರ ಈ ಸ್ಮೃತಿ–ಪುರಾಣ–ಶಾಸ್ತ್ರ–ವಚನಗಳನ್ನು ಅನ್ವಯಿಸಬೇಕೇ ಹೊರತು ಸಾರ್ವಕಾಲಿಕವಾಗಿ ಅನ್ವಯಿಸಬಾರದೆಂಬ ಮತ್ತೊಂದು ತರ್ಕವನ್ನು ಪೂರ್ತಿ ಅಲ್ಲಗಳೆಯುವಂತಿಲ್ಲ. "ವಾದೇ ವಾದೇ ಜಾಯತೇ ತತ್ತ್ವ ಬೋಧಃ" ಯಾವುದಾದರೊಂದು ವಿಷಯವನ್ನು ಕುರಿತು ತರ್ಕ ಚಿಂತನೆಗಳಿಗೆ ತೊಡಗಿದಾಗ ಬೇಕಾಗಿಯೋ, ಬೇಡವಾಗಿಯೋ ಅನೇಕ ಸಂಗತಿಗಳು ಬೆಳಕಿಗೆ ಬರುತ್ತವೆ. ನಮ್ಮ ಪ್ರಾಚೀನ ಸಂಪ್ರದಾಯಗಳನ್ನು ತರ್ಕಬದ್ಧವಾಗಿ ಚಿಂತನೆಗೊಳ ಪಡಿಸುವ ಏಕೈಕ ಉದ್ದೇಶದಿಂದ ಈ ಲೇಖನವನ್ನು ಪ್ರಸ್ತುತಪಡಿಸಲಾಗಿದೆ. ಗ್ರಾಹ್ಯಾಂಶವಿದ್ದರೆ ಸಹೃದಯರು ಸ್ವೀಕರಿಸಲಿ, ಜೊಳ್ಳನ್ನು, ಅನವಶ್ಯಕವೆನಿಸಿದುದನ್ನು ತೂರಿಬಿಡಲಿ. ಹಳೆಯ ಕಂದಾಚಾರಗಳನ್ನು ಹೊಸ ವೈಜ್ಞಾನಿಕ ಭಾವನೆಗಳೊಂದಿಗೆ ಸಮನ್ವಯಗೊಳಿಸಬೇಕಾದುದು ಇಂದಿನ ಅನಿವಾರ್ಯತೆಯೆನಿಸುತ್ತದೆ.





# ಶಾಸ್ತ್ರ ಮತ್ತು ಆಚಾರ

'ಶಾಸ್ತ್ರ' ಪದದ ಅರ್ಥವ್ಯಾಪ್ತಿ ತುಂಬಾ ವಿಸ್ತಾರವಾದುದು, ವ್ಯಾವಹಾರಿಕವಾಗಿ ಶಾಸ್ತ್ರ ಎರಡು ರೀತಿಯದು. ವಿಧಿ ಮತ್ತು ನಿಷೇಧ, ಸರಳವಾಗಿ ಹೇಳುವುದಾದರೆ, 'ಇದು ಮಾಡಬೇಕಾದುದು, ಹೀಗೆಯೇ ಮಾಡಬೇಕು" ಎಂದು ನಿಯಮನ ಮಾಡುವ ಶಾಸ್ತ್ರ–ವಿಧಿ. ಶಾಬ್ದಿಕ ಅರ್ಥವೇ ಹೇಳುವಂತೆ 'ಇದು ಮಾಡಬಾರದುದು, ಇದನ್ನು ಮಾಡ ಕೂಡದು' ಎಂಬ ವಿವರಣೆಯುಳ್ಳದ್ದು ನಿಷೇಧ ಶಾಸ್ತ್ರ. ಶಾಸ್ತ್ರ ವಿಹಿತವಾದುದನ್ನು ಅನುಷ್ಠಾನಕ್ಕೆ ತರುವುದು ಅಂದರೆ ಆಚರಿಸುವುದು–ಆಚಾರ. ಶಾಸ್ತ್ರಸಮ್ಮತವಾದ ಆಚಾರ ಸದಾಚಾರ, ಹಾಗಲ್ಲದುದು ದುರಾಚಾರ.

ಈ ಶಾಸ್ತ್ರದ ಮೂಲ–ಧರ್ಮ, ಆದ್ದರಿಂದ ಧಾರ್ಮಿಕ ಕಾರ್ಯಗಳಲ್ಲಿ ಶಾಸ್ತ್ರ ಮತ್ತು ಆಚಾರಗಳಿಗೆ ತುಂಬಾ ಮಹತ್ವವಿದೆ. "ವೇದೋ ऽ ಖಿಲೋ ಧರ್ಮಮೂಲಮ್" ಎಂಬುದು ಗೌತಮ ಧರ್ಮಸೂತ್ರದಲ್ಲಿ ಮೊದಲನೆಯದು. ಮುಂದಿನ ಸೂತ್ರ 'ತದ್ವಿದಾಂ ಚ ಸ್ಮೃತಿ ಶೀಲೇ" ಈ ಎರಡು ಸೂತ್ರಗಳ ಒಟ್ಟಾರೆ ತಾತ್ಪರ್ಯವಿಷ್ಟೆ–ನಮ್ಮ ಸಮಸ್ತ ಧಾರ್ಮಿಕ ಆಚರಣೆಗಳಿಗೆ ಅನಂತವಾದ ವೇದಗಳೇ ಪ್ರಮಾಣ. ವೇದವಿಹಿತವಾದ ಕರ್ಮಾನುಷ್ಠಾನಗಳಿಗೆ ಸುಲಭವಾಗಿ ಮಾರ್ಗದರ್ಶನ ಮಾಡುವ ಸ್ಮೃತಿಗಳೂ ಮತ್ತು ವೇದಾಧ್ಯಯನ ಸಂಪನ್ನರಾದ ವಿದ್ವಾಂಸರ ಸ್ಮೃತ್ಯುಕ್ತವಾದ ಆಚಾರ–ವಿಚಾರಗಳೂ ನಮ್ಮ ಜನಸಾಮಾನ್ಯರಿಗೆ ಪ್ರಮಾಣ, ನಡವಳಿಕೆಗಳಿಗೆ, ಪೂಜಾದಿ ಕೈಂಕರ್ಯಗಳಿಗೆ ದಿಗ್ದರ್ಶನ. ಆದರೆ ಕಾಲದ ಆಘಾತಕ್ಕೆ ಸಿಕ್ಕಿದ ನಮ್ಮ ಎಷ್ಟೋ ಆಚಾರಗಳು ಈಗ ತಮ್ಮ ಔಚಿತ್ಯವನ್ನೂ ಯಥಾರ್ಥತೆಯನ್ನೂ ಕಳೆದುಕೊಂಡಿವೆ. ವಿಪರ್ಯಾಸವೆಂದರೆ ಇತ್ತಿಚಿನ ದಿನಗಳಲ್ಲಿ, ವೈಜ್ಞಾನಿಕ ಮನೋಭಾವ ಹೆಚ್ಚಾಗುತ್ತಿರುವುದರಿಂದ ಜನರಲ್ಲಿ ಎಲ್ಲವನ್ನೂ ಪ್ರಶ್ನಿಸುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಹೀಗಾಗಿ ವಿಮರ್ಶೆಯ ದೃಷ್ಟಿಯಿಂದ ಸ್ಮೃತಿ ವಾಕ್ಯಗಳು ಮತ್ತು ಹಿರಿಯರ ಆಚಾರ ವಿಚಾರಗಳು ಮತ್ತೊಮ್ಮೆ ಮಹತ್ವ ಪಡೆಯುತ್ತಿವೆ.

ಧರ್ಮಕಾರ್ಯದಲ್ಲಿ ಯಜಮಾನ ಪತ್ನಿಯನ್ನು ಕೆಲವು ಸಲ ತನ್ನ ಎಡಗಡೆಯೂ, ಮತ್ತೆ ಕೆಲವು ಸನ್ನಿವೇಶಗಳಲ್ಲಿ ಬಲಗಡೆಯೂ ಕೂರಿಸಿಕೊಳ್ಳುವುದು ಆಚಾರ.

**ಸರ್ವೇಷು ಧರ್ಮಕಾರ್ಯೇಷು ಪತ್ನೀ ದಕ್ಷಿಣತಃ ಸ್ಥಿತಾ।**
**ವಿಪ್ರ ಪಾದಕ್ಷಾಲನೇ ಚ ಅಭಿಷೇಕೇ ಚ ವಾಮತಃ॥**

ಸಪತ್ನೀಕನಾದ ಗೃಹಸ್ಥನ ಧಾರ್ಮಿಕ ಕಾರ್ಯಗಳಲ್ಲಿ, ಷೋಡಶ ಕರ್ಮಗಳಲ್ಲಿ, ಪತ್ನಿ ಯಜಮಾನನ ಬಲಗಡೆಯಲ್ಲೂ (ಮಧುಪರ್ಕಾದಿಗಲ್ಲಿ) ವಿಪ್ರಪಾದ ಪ್ರಕ್ಷಾಳನೆ ಹಾಗೂ ಕಲಶಮಾರ್ಜನೆ ಮೊದಲಾದಂತೆ ಅಭಿಷೇಕ ಸ್ನಾನ ಸಂದರ್ಭಗಳಲ್ಲಿ ಎಡಗಡೆಯೂ ಇರಬೇಕು ಎಂದು ಮೇಲಿನ ಉಕ್ತಿ ಹೇಳುತ್ತದೆ. 'ವಾಮಾಂಗೀ' ಎನ್ನುವ ಒಂದು ಪದ

ಬಳಕೆಯಲ್ಲಿದೆ. ಪತ್ನಿಯ ಸ್ಥಾನ ಪುರುಷನ ಎಡಭಾಗ ಎಂದು ಇದರ ಅರ್ಥ ಧ್ವನಿಸುತ್ತದೆ.

**ವಂದೇಹರಂ ವರದ ಶೂಲಕಪಾಲಹಸ್ತಂ**
**ಸಾಭೀತಿಮದ್ರಿಸುತಯಾ ಜ್ವಲದೇಹಕಾಂತ್ಯಾ।**
**ವಾಮೋರುಪೀಠಗತಯಾ ನಿಜವಾಮಹಸ್ತ**
**ನ್ಯಸ್ತಾರುಣೋತ್ಪಲಯುಜಾಪರಿರಬ್ಧ ದೇಹಮ್ ॥**

ಶಿವನ ಎಡತೊಡೆಯ ಮೇಲೆ ಪಾರ್ವತೀ ಆಸೀನಳಾಗಿದ್ದಾಳೆ ಎಂದು ಪರಶಿವನ ಮೇಲಿನ ಧ್ಯಾನಶ್ಲೋಕವೊಂದಿದೆ.

ಪಟ್ಟಾಭಿಷಿಕ್ತನಾದ ಶ್ರೀರಾಮಚಂದ್ರನ ಪರಿವಾರವನ್ನು ವರ್ಣಿಸುವ ಒಂದು ಶ್ಲೋಕ ಹೀಗೆ ಪ್ರಾರಂಭವಾಗುತ್ತದೆ.

**ವಾಮೇಭೂಮಿಸುತಾ ಪುರಶ್ಚ ಹನುಮಾನ್...**

ಇಲ್ಲಿಯೂ ಶ್ರೀರಾಮನ ಎಡಭಾಗದಲ್ಲಿ ಜಾನಕಿಯಿದ್ದಾಳೆ. ಅಂದರೆ ಭಗವತ್ಸ್ವರೂಪ ಕಲ್ಪನೆಯಿಂದ ದಂಪತಿ ಪೂಜೆಯಂತಹ ಸಂದರ್ಭಗಳಲ್ಲೂ ಪತ್ನಿ ವಾಮಭಾಗ ದಲ್ಲಿರುವುದು ಸಮಂಜಸವೆಂದಾಯಿತು. ಧಾರ್ಮಿಕ ಕಾರ್ಯಗಳಲ್ಲಿ ಪತ್ನಿ ಯಜಮಾನನ ಬಲಭಾಗದಲ್ಲಿರಬೇಕೆಂಬ ಶಾಸ್ತ್ರ ಸಮ್ಮತವಾದ ಆಚಾರಕ್ಕೆ ಲೌಕಿಕವಾದ ಇನ್ನೂ ಒಂದು ಕಾರಣವಿದೆ. ಧಾರ್ಮಿಕ ಕಾರ್ಯಕ್ರಮಗಳಲ್ಲಿ ಆಚಾರ್ಯ ಅಥವಾ ಪುರೋಹಿತ ಯಜಮಾನನ ಎಡಭಾಗದಲ್ಲಿ ಕೂರುವುದು ಬಹುಸಮ್ಮತವಾದ ಶಿಷ್ಟಾಚಾರ. (ಅಡ್ಡಲಾಗಿ, ದಕ್ಷಿಣಾಭಿಮುಖವಾಗಿ ಪುರೋಹಿತರು ಕೂರುವ ಸಂಪ್ರದಾಯವೂ ಇದೆ. ಇದಕ್ಕೆ ಶಾಸ್ತ್ರಸಮ್ಮತಿಯೂ ಇದೆಯೆಂದು ಒಬ್ಬ ವಿದ್ವಾಂಸರು ಒಮ್ಮೆ ಸಮರ್ಥಿಸಿಕೊಂಡಿದ್ದರು. ಆದರೆ ದಕ್ಷಿಣಾಭಿಮುಖವಾಗಿ ಕುಳಿತು ಮಾಡುವ ಅನುಷ್ಠಾನಗಳು ನಿಷ್ಪ್ರಯೋಜಕವೆಂಬ ಶಾಸ್ತ್ರೋಕ್ತಿ ಪ್ರಚಲಿತವಿದೆ. ಇರಲಿ) ಒಂದು ವೇಳೆ ಯಜಮಾನನ ಪತ್ನಿ ಎಡಭಾಗದಲ್ಲೇ ಕೂರುವಂತೆ ಶಾಸ್ತ್ರವಚನವಿರುತ್ತಿದ್ದರೆ, ಆಕೆ ಪುರೋಹಿತ ಮತ್ತು ಪತಿಯ ಮಧ್ಯದಲ್ಲಿ ಕರ್ಮಸಮಾಪ್ತಿಯ ತನಕ ಕುಳಿತಿರುವುದು ತುಂಬಾ ಮುಜುಗರವನ್ನುಂಟು ಮಾಡುತ್ತಿತ್ತಲ್ಲವೇ?

ಉಪವೀತ ಧಾರಣೆಯಲ್ಲೂ ಇನ್ನೊಂದು ರೀತಿಯ ಗೊಂದಲವಿದೆ. ಬ್ರಹ್ಮಚಾರಿ ಒಂದು ಉಪವೀತವನ್ನೂ, ಗೃಹಸ್ಥ ಅಂದರೆ ಮದುವೆಯಾದವನು ಎರಡು ಉಪವೀತ ವನ್ನೂ ಧರಿಸುವುದು ಸಾಮಾನ್ಯ ಸಂಪ್ರದಾಯ. ಮಧುಪರ್ಕ ಪೂಜೆಯಲ್ಲಿ ವರನಿಗೆ ಒಂದು ಅಥವಾ ಜೋಡಿ ಉಪವೀತವನ್ನು ಕೊಡುವ ಪದ್ಧತಿಯಿದೆ. ಹೀಗಾಗಿ ಗೃಹಸ್ಥನು ಎರಡು ಅಥವಾ ಮೂರು ಉಪವೀತ ಧರಿಸುವ ಬಗ್ಗೆ ಸಮರ್ಥನೆಯಿದೆ. ಆದರೆ ಇದು ಒಂದು ರೀತಿಯ ಯುಕ್ತಿವಾದ ಅಷ್ಟೆ. ಈ ವಿಚಾರದಲ್ಲಿ ಶಾಸ್ತ್ರೀಯವಾದ ಆಧಾರ ಹೀಗಿದೆ.

**ಯಜ್ಞೋಪವೀತೇ ದ್ವೇ ಧಾರ್ಯೇ ಶ್ರೌತೇ ಸ್ಮಾರ್ತೇ ಚ ಕರ್ಮಸು।**
**ತೃತೀಯಮುತ್ತರೀಯಾರ್ಥಂ ವಸ್ತ್ರಾಭಾವೇ ಚತುರ್ಥಕಮ್ ॥**



ಅಂದರೆ ಬಲತೋಳಿನ ಅಡಿಗಡೆಯಿಂದ ಎಡಹೆಗಲ ಮೇಲೆ ಗಂಟು ಹಾಕಿ ಉಪವೀತದಂತೆ ಧರಿಸುವ ಬಟ್ಟೆಯ ಬದಲಿಗೆ ಧರಿಸುವುದು ಮೂರನೇಯ ಉಪವೀತ. ಮಕ್ಕಾದಲ್ಲಿ ಪ್ರಾರ್ಥನೆ ಸಲ್ಲಿಸುವಾಗ ಮುಸಲ್ಮಾನರು ನಿಲುವಂಗಿಯ ಮೇಲೆ ಬಿಳಿಯ ಉತ್ತರೀಯ ವಸ್ತ್ರವನ್ನು ಕಡ್ಡಾಯವಾಗಿ ಧರಿಸುತ್ತಾರೆ. ಆದರೆ ನಾವು ಉತ್ತರೀಯವನ್ನು ಧರಿಸಲೇಬೇಕೆಂಬ ನಿಯಮವನ್ನು ಪಾಲಿಸುತ್ತಿಲ್ಲ. ಮೇಲುಹೊದಿಕೆಯ ಇನ್ನೊಂದು ವಸ್ತ್ರದ ಬದಲಿಗೆ ಚತುರ್ಥ ಉಪವೀತ ಧಾರಣೆಯನ್ನು ಹೇಳಲಾಗಿದೆ. ಈ ನಾಲ್ಕನೆಯ ಉಪವೀತದ ಬದಲಿನ ವಸ್ತ್ರವನ್ನು ಕೆಲವರು ಸೊಂಟಕ್ಕೆ ಸುತ್ತಿಕೊಳ್ಳುವ ಸಂಪ್ರದಾಯವೂ ಇದೆ. ಆದರೆ ತೃತೀಯ ಮತ್ತು ಚತುರ್ಥ ಉಪವೀತಧಾರಣೆ ಹೆಚ್ಚು ರೂಢಿಯಲ್ಲಿಲ್ಲ.

ಮಲಮೂತ್ರ ವಿಸರ್ಜಿಸುವಾಗ ಉಪವೀತವನ್ನು ನಿವೀತಿಯಾಗಿ ಅಥವಾ ಬಲಕಿವಿಯ ಮೇಲೆ ಸುತ್ತಿಕೊಳ್ಳುವ ಪದ್ಧತಿಯಿದೆ. ಇದಕ್ಕೆ ಎರಡು ಕಾರಣಗಳಿವೆ. ಒಂದು ಭಾವುಕತೆ, ಎರಡನೆಯದು ವೈಜ್ಞಾನಿಕ. ಭಗೀರಥನ ಪ್ರಾರ್ಥನೆಗೆ ಓಕೊಟ್ಟ ಸುರಗಂಗೆ ಜಹ್ನು ಮಹರ್ಷಿಯ ಬಲಗಿವಿಯ ಮೂಲಕ ಭೂಮಿಗೆ ಅವತರಿಸಿದುದರಿಂದ ಪವಿತ್ರವಾದ ಬಲಗಿವಿಯ ಮೇಲಿರಿಸಿದ ಉಪವೀತ ಮಲಮೂತ್ರಾದಿ ವಿಸರ್ಜನೆಯ ವೇಳೆ ತನ್ನ ಪಾವಿತ್ರ್ಯವನ್ನು ಕಳೆದುಕೊಳ್ಳುವುದಿಲ್ಲವೆಂಬ ಭಾವನೆ ಇದಕ್ಕೆ ಒಂದು ಕಾರಣ. ಉಪವೀತವನ್ನು ಬಲಕಿವಿಯ ಮೇಲೆ ಸುತ್ತಿಕೊಂಡು, ಕುಕ್ಕುರುಗಾಲಿನಲ್ಲಿ ಕುಳಿತುಕೊಳ್ಳುವ ದರಿಂದ, ಬೇರೆ ಯಾವುದೇ ಭಂಗಿಯ ಸ್ಥಿತಿಗಿಂತ ಸುಸೂತ್ರವಾಗಿ ಮಲ–ಮೂತ್ರ ವಿಸರ್ಜನೆಯಾಗುತ್ತದೆಂಬುದು ಅನೇಕ ಸಂಶೋಧನೆಗಳಿಂದ ದೃಢೀಕರಿಸಲ್ಪಟ್ಟಿದೆ. ಯಜ್ಞೋಪವೀತದ ಬದಲಿಗೆ ಸಾಮಾನ್ಯ ದಾರವನ್ನು ಕಿವಿಗೆ ಸುತ್ತಿಕೊಳ್ಳಬಾರದೇಕೆ ಎಂಬ ಕುತರ್ಕದ ಪ್ರಶ್ನೆಯೊಂದು ಬರಬಹುದು. ಆದರೆ ಮಂತ್ರೋಚ್ಚಾರಣೆಯೊಂದಿಗೆ ಧರಿಸಿದ ಉಪವೀತದ ಪಾವಿತ್ರ್ಯ ಮತ್ತು ಅದು ಮಲಿನವಾಗದೆ ಶುಚಿಯಾಗಿಯೇ ಇರಬೇಕೆಂಬ ಭಾವನೆಗಳ ಹಿನ್ನೆಲೆಯಿರುವುದಾದರೆ ಇಂತಹ ಮೂರ್ಖ ಪ್ರಶ್ನೆಗಳೇಳುವುದಿಲ್ಲ.



# ತೇ ಹಿ ನೋ ದಿವಸಾಃ ಗತಾಃ

**"ತೇ ಹಿ ನೋ ದಿವಸಾಃ ಗತಾಃ"** ಎಮಬುದು ಬಾಲ್ಯದ ದಿನಗಳ ಮಧುರ ಸ್ಮೃತಿಯನ್ನು ಕುರಿತು ಮಹಾ ಕವಿಯೊಬ್ಬರ ಭಾವಪೂರ್ಣ ಉದ್ಗಾರ. 'ಉಪ್ ಕಲ್ ಕಟ್ಟೆ' ಶಾಲೆಯ ಪ್ರಾಥಮಿಕ ಶಿಕ್ಷಣಾವಧಿಯ ಆ ದಿನಗಳ ನೆನಪು ಮೈನವಿರೇಳಿಸುತ್ತದೆ. ವಾರದ ಪ್ರತಿದಿನ ಒಂದೇ ಬಗೆಯ ಬಟ್ಟೆ ಧರಿಸಿ ಹರಕು ಚೀಲದಲ್ಲಿ ಕಿವಿ ಬಂದಿರುವ ಹಳೆಯ ಪುಸ್ತಕ, ಒಡಕು ಸ್ಲೇಟು, ಚೂರು ಬಳಪದೊಂದಿಗೆ ಮನೆಯಿಂದ ಹೊರಟರೆ ದಾರಿಯ ಪ್ರತಿ ಮನೆಯ ಸಂಗಡಿಗರನ್ನು ಕೂsss ಎಂದು ಕರೆದು ಜತೆಗೆ ಸೇರಿಸಿಕೊಳ್ಳುತ್ತಾ, ಶಾಲೆಯ ದಾರಿಯನ್ನು ಕ್ರಮಿಸುವುದೇ ಒಂದು ರೀತಿಯ ಮಜ.

ಗದ್ದೆ ದಾಟಿ ಗಾಡಿ ರಸ್ತೆ ಸೇರುವ ಜಾಗದಲ್ಲಿ ಪಮ್ಮಣ್ಣ ಮಲ್ಯರ ಮನೆ. ಶಾಲೆಯ ಮಕ್ಕಳಿಗೆ ಯಾವುದೇ ಹೊತ್ತಿನಲ್ಲೂ ಇಲ್ಲಿ ಬೆಲ್ಲ–ನೀರು ಸಿದ್ಧವಾಗಿರುತ್ತಿತ್ತು. ಬೆಲ್ಲ ತಿನ್ನುವುದಕ್ಕಾಗಿಯೇ ನಮಗೆ ಸ್ವಲ್ಪ ಬಾಯಾರಿಕೆಯಾಗುವದಿತ್ತು. ನೀರಿಗಿಂತ ಬೆಲ್ಲದ ಪ್ರಮಾಣವೇ ಹೆಚ್ಚು ಸೇವಿಸುವ ನಮ್ಮ ಗುಟ್ಟು ಅವರಿಗೂ ತಿಳಿದುಒಳಗೊಳಗೇ ನಗುತ್ತಿದ್ದ ನೆನಪು ಇನ್ನೂ ಹಸುರಾಗಿದೆ. ಶಾಲೆಯ ಪಕ್ಕದಲ್ಲಿ ಒಂದು ಹೋಟೇಲು. (ಮುದ್ದಣ್ಣಯ್ಯ ಎಂತಲೋ ಏನೋ ಮಾಲೀಕರ ಹೆಸರು,..) ಒಂದುರುವಿ=$^{1}/_{92}$ ರೂಪಾಯಿ) ಕೊಟ್ಟರೆ ಇವರು, ತಿನ್ನುವಷ್ಟು ತಿಂಡಿ ಕೊಡುತ್ತಿದ್ದರೆಂಬುದು ಈಗಲೂ ನೆನಪಿದೆ.

ಮುಖ್ಯೋಪಾಧ್ಯಾಯರಾದ ಗುಂಡು ಮಾಸ್ತರರ ಬಗ್ಗೆ ಎಲ್ಲರಿಗೂ ಭಯ ಮಿಶ್ರಿತ ಭಕ್ತಿ. ಅವರು ನಮಗೆ 3ನೇ ತರಗತಿಯಲ್ಲಿ ಗಣಿತ ಮತ್ತು ಕನ್ನಡ ಬೋಧಿಸಿದ ನೆನಪು. ಅವರ ಗಣಿತ ಪಾಠ 10–15 ನಿಮಿಷ ಮಾತ್ರ. ನಂತರ ಅವರು ಆಫೀಸಿಗೆ ಹೋಗಿ ಕುಳಿತರೆ ಮುಂದಿನ ಪಾಠ ಮಾನಿಟರ್‌ನದು. ಮಗ್ಗಿ, ಪದ್ಯ ಬಾಯಿಪಾಠ ಮಾಡಿಸುವುದು, ಅಭ್ಯಾಸದ ಲೆಕ್ಕ ಮಾಡಿಸುವುದು, ಪ್ರಶ್ನೋತ್ತರ ಹೇಳಿಸುವುದು, ಇವೆಲ್ಲ ಇವನ ಜವಾಬ್ದಾರಿ. ಈ ಮಾನಿಟರ್‌ನ ಮೇಲೆ ದೂರು ಹೋದರೆ ವಿಚಾರಣೆಯ ನಂತರ ಮತ್ತೊಬ್ಬ ಮಾನಿಟರ್‌ನ ನೇಮಕ. ಮಾನಿಟರ್ ಆಗಲು ತರಗತಿಯಲ್ಲಿ ಮೊದಲ 3 ಸ್ಥಾನ ಪಡೆದವರು ಮಾತ್ರ ಅರ್ಹರು. ಕೆಲವೊಮ್ಮೆ ಮೇಲಿನ ತರಗತಿಯ ಮಾನಿಟರ್ ಕೆಳಗಿನ ತರಗಿತಯಲ್ಲಿ ಈ ಎಲ್ಲ ಕೆಲಸಗಳನ್ನೂ ನಿರ್ವಹಿಸುವುದುಂಟು.

"ಮಕ್ಕಳಿಗೆ ತಂದೆ ಬಾಲ್ಯದೊಳಕ್ಕರ ವಿದ್ಯೆಗಳನರಿಪದಿರ್ದೊಡೆ ಕೊಂದಂ" ಎಂಬ ಸುಭಾಷಿತವನ್ನು ಅರ್ಥಪೂರ್ಣವಾಗಿ ಬೋಧಿಸುತ್ತಿದ್ದ ವಾಸು ಮಾಸ್ತರರು ವಿದ್ಯಾರ್ಥಿಗಳಿಗೆ ತಂದೆಯಂತೆಯೇ ಕಾಣುತ್ತಿದ್ದರು. ಸದಾಹಸನ್ಮುಖಿಯಾಗಿದ್ದ ಅವರು ಮುಖ ಗಂಟಿಕ್ಕಿದುದಾಗಲೀ, ಕೋಪಿಸಿಕೊಂಡುದಾಗಲೀ ನನಗೆ ನೆನಪಿಲ್ಲ. ಅವರಂತಹ ಆದರ್ಶ ಪ್ರಾಥಮಿಕ ಶಿಕ್ಷಕರನ್ನು ನಾನು ಕಂಡಿಲ್ಲ. ಇವರ ಶಿಷ್ಯನೆಂದು ಹೇಳಿಕೊಳ್ಳಲು ನನಗೆ



ಈಗಲೂ ಹೆಮ್ಮೆ. ಇವರನ್ನು ಉತ್ತಮ ಶಿಕ್ಷಕರೆಂದು ಗೌರವಿಸುವವರು ನಿಜಕ್ಕೂ ತಮ್ಮನ್ನು ತಾವೇ ಗೌರವಿಸಿಕೊಂಡಂತೆ.

ಈಗ ಸುಮಾರು 7–8 ವರ್ಷಗಳ ಹಿಂದಿನ ಘಟನೆ. ನೇಷನಲ್ ಜೂನಿಯರ್ ಕಾಲೇಜಿನ ಎದುರಿನ ರಸ್ತೆ ಬದಿಯಲ್ಲಿ ನಡೆಯುತ್ತಿದ್ದ ಗುರುಗಳ ಪಾದ ಸ್ಪರ್ಶಿಸಿ ನಮಸ್ಕರಿಸಿದೆ. ಥಕ್ಕನೆ ಗುರುತು ಸಿಗಲಿಲ್ಲವೆಂದು ಕಾಣುತ್ತದೆ. ಒಂದೆರಡು ನಿಮಿಷಗಳಲ್ಲಿ ಪೂರ್ವೋತ್ತರಗಳನ್ನು ತಿಳಿದುಕೊಂಡವರೇ ತಬ್ಬಿಕೊಂಡು "ತುಂಬ ಸಂತೋಷವಪ್ಪ. ದೇವರು ಇನ್ನೂ ಚೆನ್ನಾಗಿ ಇಟ್ಟಿರಲಿ" ಎಂದು ಗದ್ಗದಿಸುತ್ತಾ ಗಳಗಳನೆ ಅತ್ತು ಬಿಟ್ಟರು. ಇದು ವಾತ್ಸಲ್ಯವೊ, ಆನಂದವೋ, ಹೆಮ್ಮೆಯೋ ಅಥವಾ ಅವರ್ಣನೀಯವಾದ ಭಾವೋದ್ವೇಗವೋ! ಈಗ ವಿದ್ಯಾರ್ಥಿಗಳ ಸರ್ವತೋಮುಖ ಬೆಳವಣಿಗೆಗಾಗಿ ಶ್ರಮಿಸುವ, ಅವರ ಉತ್ಕರ್ಷವನ್ನು ಕಂಡು ಹೆಮ್ಮೆಪಡುವ ಅಧ್ಯಾಪಕರು ಎಷ್ಟು ಜನರಿದ್ದಾರೆ!

ಜಗತ್ತಿನ ಇತರೇ ದೇಶಗಳು ನಾಗರಿಕತೆಯನ್ನು ಪ್ರವೇಶಿಸುವ ಮೊದಲೇ ಭಾರತ ಜ್ಞಾನದ ಬೆಳಕನ್ನು ಬೀರುತ್ತಿದ್ದ ಕಾಲವೊಂದಿತ್ತು. ದೇಶಾಂತರದ ಶಿಕ್ಷಣಾರ್ಥಿಗಳಲ್ಲಿ ವ್ಯಾಸಂಗಕ್ಕಾಗಿ ಪ್ರವೇಶ ದೊರಕಿಸಿಕೊಳ್ಳುವುದೇ ವಿಶೇಷ ಅರ್ಹತೆಯೆನಿಸಿದ್ದ ಕಾಲವೊಂದಿತ್ತು. ಪ್ರಾಚೀನ ಗುರುಕುಲ ಶಿಕ್ಷಣ ಪದ್ಧತಿಯನ್ನು ಬಿಟ್ಟು ಇಸ್ಟ್ ಇಂಡಿಯಾ ಕಂಪನಿಯವರು ಮತ್ತು ಮಿಶನರಿಗಳು ಪ್ರಚಾರಕ್ಕೆ ತಂದ ಆಧುನಿಕ ಶಿಕ್ಷಣ ಪದ್ಧತಿಯ ಬೆನ್ನಟ್ಟಿದೆವು. ನಮ್ಮ ದೇಶದ ಸಾಂಸ್ಕೃತಿಕ ಪರಂಪರೆಗೆ, ವಾತಾವರಣಕ್ಕೆ, ಜೀವನ ವಿಧಾನಕ್ಕೆ ಹೊಂದಿಕೆಯಾಗದ ಕೆಲವು ಅಂಶಗಳನ್ನು ಮಾತ್ರ ಅಳವಡಿಸಿಕೊಂಡು ಪ್ರಾಚೀನ ಪದ್ಧತಿಯನ್ನು ಅವಗಣಿಸಿ ತಪ್ಪು ಮಾಡಿದೆವು. ಹಿಂದಿನದನ್ನು ಮರೆತಾಗಿದೆ. ಹೊಸ ದಾರಿಯಲ್ಲಿ ಪೂರ್ತಿ ಮುನ್ನಡೆಯಲು ಸಾಧ್ಯವಾಗಿಲ್ಲ. ಇದೇ ನಮ್ಮ ದೌರ್ಭಾಗ್ಯ.

ಇಂಗೆಂಡ್‌ನಂತಹ ಪಾಶ್ಚಾತ್ಯ ದೇಶದವರು ಶಿಕ್ಷಣ ಕ್ಷೇತ್ರದಲ್ಲಿ ನಮಗಿಂತ ಎಷ್ಟು ಮುಂದಿದ್ದಾರೆಂದು ನಾವು ನಾಚಿಕೆ ಪಡಬೇಕಾಗಿದೆ. ಒಂದು ಮಗು ಹುಟ್ಟಿದ ದಾಖಲೆ ಸಿಕ್ಕಿದಂದಿನಿಂದ 19 ವರ್ಷವಾಗುವ ವರೆಗಿನ ಪೋಷಣೆ, ರಕ್ಷಣೆ, ಶಿಕ್ಷಣದ ಪೂರ್ಣ ಜವಾಬ್ದಾರಿ ಸರಕಾರ ಹೊರುತ್ತದೆ. ನಿಯತಕಾಲಕ್ಕೆ ಆರೋಗ್ಯ ಇಲಾಖೆಯವರು ಭೇಟಿ ನೀಡಿ ಸಲಹೆ, ಚಿಕಿತ್ಸೆ, ಪೋಷಕಾಂಶವುಳ್ಳ ಆಹಾರ ಪದಾರ್ಥಗಳನ್ನು ನೀಡುತ್ತಾರೆ. ಎರಡು ವರ್ಷವಾದೊಡನೆ ಶಿಶು ವಿಹಾರ, ಪೂರ್ವ ಪ್ರಾಥಮಿಕ ಶಿಕ್ಷಣ ಮತ್ತು ಅಭಿರುಚಿಗೆ ತಕ್ಕುದಾದ ಉನ್ನತ ವ್ಯಾಸಂಗಕ್ಕೆ ವ್ಯವಸ್ಥೆ ಇದೆ. ಇಲ್ಲಿನ ಲೈಬ್ರಗಳಂತು ಅದ್ಭುತ, ವಿಚಿತ್ರ. ನಾಲ್ಕೈದು ವರ್ಷದ ಮಕ್ಕಳೂ ಇಲ್ಲಿನ ಲೈಬ್ರರಿಯ ಸದಸ್ಯರು. ಅವರವರ ವಯಸ್ಸಿಗೆ ತಕ್ಕ ಆಟ, ಪಾಠ, ಓದು–ಬರಹದ ಸಲಕರಣೆಗಳು ಇಲ್ಲಿ ದೊರೆಯುತ್ತವೆ. ನಮ್ಮೂರಿನಲ್ಲಿ ಮುಖ ತೊಳೆಯಲೂ ಬಾರದ ವಯಸ್ಸಿನ ಮಕ್ಕಳು ಇಲ್ಲಿ ಕಂಪ್ಯೂಟರ್‌ಗಳ ಮುಂದೆ ಕುಳಿತು ಬೆರಳಾಡಿಸುವುದನ್ನು ನೋಡಿದರೆ ಆಶ್ಚರ್ಯವೆನಿಸುತ್ತದೆ. ಇಲ್ಲಿನ ವಾತಾವರಣವೇ ತಮ್ಮ ತಮ್ಮ ಅಭಿರುಚಿಗನುಗುಣವಾದ ಹಾಗೂ ಆಸಕ್ತಿಗೆ ತಕ್ಕ ವಿಷಯ

ಗಳನ್ನು ಆಯ್ಕೆ ಮಾಡಿ ಸಂತೋಷವಾಗಿ ಅಧ್ಯಯನ ಮಾಡಲು ಪ್ರೇರಕವಾಗಿರುವುದರಿಂದ ಹೋಮ್‌ವರ್ಕ್‌ಗಾಗಿ ಒತ್ತಾಯಿಸುವ, ಅಶಿಸ್ತಿಗಾಗಿ–ಸೋಮಾರಿತನಕ್ಕಾಗಿ ಶಿಕ್ಷಿಸುವ ಪ್ರಮೇಯವೇ ಬರುವುದಿಲ್ಲ. ಸಾಮಾನ್ಯ ಶಿಕ್ಷಣ, ವೈದ್ಯಕೀಯ, ವಿಜ್ಞಾನ, ಕಥೆ, ಕಾದಂಬರಿ, ಸಾಹಿತ್ಯ, ಧಾರ್ಮಿಕ, ವೈಚಾರಿಕ, ರಾಜನೀತಿ – ಹೀಗೆ ಎಲ್ಲ ವಿಷಯಗಳಿಗೆ ಸಂಬಂಧಿಸಿದ ಎಲ್ಲಾ ತರಹೆಯ ಪುಸ್ತಕಗಳು, ಕ್ಯಾಸೆಟ್‌ಗಳು, ಡಿಸ್ಕ್‌ಗಳು ಎಲ್ಲ ವಯಸ್ಸಿನವರಿಗೂ ಕ್ರಮವಾಗಿ ಜೋಡಿಸಲ್ಪಟ್ಟಿರುತ್ತವೆ. ಬೇಕಾದವುಗಳನ್ನು ಆರಿಸಿಕೊಳ್ಳಬಹುದು ಅಥವಾ ಇಲ್ಲಿನ ಸಹಾಯಕರನ್ನು ಕೇಳಿದರೆ ಕಂಪ್ಯೂಟರ್ ನಲ್ಲಿ ಹುಡುಕಿ ಅವರೇ ನಿರ್ದಿಷ್ಟ ಜಾಗದಿಂದ ತಂದುಕೊಡುತ್ತಾರೆ. ಅಲ್ಲಿಯೇ ಓದಬಹುದು. 20 ಪುಸ್ತಕಗಳ ತನಕ ಮನೆಗೆ ಒಯ್ಯಬಹುದು. ನಾಲ್ಕು ವಾರಗಳಲ್ಲಿ ಹಿಂದಿರುಗಿಸಿದರಾಯಿತು. ಕಂಪ್ಯೂಟರ್ ನಲ್ಲಿ ದಾಖಲಿಸದೆ ಒಯ್ದರೆ ಮಾತ್ರ ಬಾಗಿಲಲ್ಲಿ ಇಲೆಕ್ಟ್ರಾನಿಕ್ ಗಂಟೆ ಬಾರಿಸುತ್ತದೆ. ಇಂತಹ ನಂಬರಿನ, ಇಂತಿಷ್ಟು ಪುಸ್ತಕಗಳನ್ನು ಕದ್ದೊಯ್ಯುತ್ತಿದ್ದೀರೆಂದು ಒಳಗಿನ ಲೈಬ್ರರಿಯನ್‌ಗೆ ಕೂಡಲೇ ಸೂಚನೆ ನೀಡುತ್ತದೆ. ಇಂತಹ ಲೈಬ್ರರಿಗೆ ಯಾರೂ ಸದಸ್ಯರಾಗಬಹುದು. ಸದಸ್ಯತ್ವ ಶುಲ್ಕವಿಲ್ಲ. ನಮ್ಮ ಊರುಗಳಲ್ಲೂ ಇಂತಹ ಲೈಬ್ರರಿಗಳಿರುವುದಾದರೆ ಮಕ್ಕಳು ಖಂಡಿತ ಬುದ್ಧಿವಂತರಾಗುತ್ತಾರೆ.

ಇಲ್ಲಿ ಶಿಕ್ಷಣ ಮುಗಿದೊಡನೆ ಅಗತ್ಯ ತರಬೇತಿ ಮತ್ತು ನೌಕರಿ ದೊರೆಯುತ್ತದೆ ಅಥವಾ ನಿರುದ್ಯೋಗ ಭತ್ಯೆ ಸಿಗುತ್ತದೆ.

ಇಲ್ಲಿನ ಶಿಕ್ಷಕರು ವರ್ಷಕ್ಕೆ ಸರಾಸರಿ 30,000 ಪೌಂಡ್ (ಅಂದರೆ ಸುಮಾರು 30,000 x75=22,50,000ರೂ.) ನಷ್ಟು ವೇತನ ಪಡೆಯುತ್ತಾರೆ. ಆದರೆ ಇವರು ನಿರಂತರ ಅಧ್ಯಯನಶೀಲರಾಗಿರಬೇಕು. ಕಾಲಕಾಲಕ್ಕೆ ಅರ್ಹತೆ ಮತ್ತು ದಕ್ಷತೆಯ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿರಬೇಕು. ಇಲ್ಲವಾದರೆ ಹಿಂಬಡ್ತಿಗೊಳಗಾಗಬೇಕು. ಅಥವಾ ನೌಕರಿ ಕಳೆದುಕೊಳ್ಳಬೇಕು. ಸ್ಟಾಫ್ ರೂಂನಲ್ಲಿ ಕುಳಿತು ಕೌಟುಂಬಿಕ ಸಮಸ್ಯೆ, ವೇತನ ಏರಿಕೆ, ಮುಂಬಡ್ತಿ, ಕೊಳಕು ರಾಜಕೀಯಗಳ ಬಗ್ಗೆ ಹರಟೆ ಹೊಡೆಯುವ ಮತ್ತು ತರಗತಿಗಳಲ್ಲಿ ಕೆಲವೇ ನಿಮಿಷ ಹಳೇ ಕಾಲದ ಅಸಾಮಯಿಕ (out dated) ಪಠ್ಯಾಂಶವನ್ನು ಮಕ್ಕಳ ಮೆದುಳಿಗೆ ತುರುಕಿಸುವ ಅನಿವಾರ್ಯತೆಯ ಶಿಕ್ಷಕರಿಂದ ಶಿಕ್ಷಣದ ಪ್ರಗತಿಯನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಉದ್ದೇಶಪೂರ್ವಕವಾಗಿ 'ಅನಿವಾರ್ಯತೆ' ಶಬ್ದ ಬಳಸಿದ್ದೇನೆ. ಯಾಕೆಂದರೆ ಇಲಾಖೆ ಗೊತ್ತುಪಡಿಸಿದ ಪಠ್ಯವಿಷಯದ ವ್ಯಾಪ್ತಿಯನ್ನು ಮೀರಿ ಇವರು ಬೋಧಿಸು ವಂತಿಲ್ಲ. ಬೋಧಿಸಿದರೆ ಮಕ್ಕಳು ಉತ್ತೀರ್ಣರಾಗುವುದಿಲ್ಲ. ಒಟ್ಟಾರೆ ನಮ್ಮ ಶಿಕ್ಷಣ ವ್ಯವಸ್ಥೆಗೆ ಗೆದ್ದಲು ಹಿಡಿದಿದೆ. ಈ ಗೆದ್ದಲಿನ ಮೂಲ ಹುಡುಕುವುದು ಕಷ್ಟ. ಹಿಂದಿನ ಪಠ್ಯಪುಸ್ತಕಗಳಲ್ಲಿ ಎಳೆಯ ಮಕ್ಕಳ ಮನಸ್ಸಿನ ಮೇಲೆ ಶಾಶ್ವತ ಪ್ರಭಾವ ಬಿರುವ ನ್ಯಾಯ, ನೀತಿ, ಸತ್ಯ, ಅಹಿಂಸೆ, ಧರ್ಮ, ಪ್ರಾಮಾಣಿಕತೆ, ಸದಾಚಾರ ಮೊದಲಾದ ಉನ್ನತ ವಿಚಾರಗಳಿಗೆ ಆಕರವಾದ ರಾಮಾಯಣ, ಮಹಾಭಾರತ, ವೇದ, ಉಪನಿಷತ್ತುಗಳಿಂದ



ಆಯ್ದದೃಷ್ಟಾಂತ ಕಥೆಗಳು, ಘಟನೆಗಳು, ಕಥಾನಕಗಳು ಧಾರಾಳವಾಗಿರುತ್ತಿದ್ದವು. ಇಂದಿನ ಹೆಚ್ಚಿನ ಮಕ್ಕಳಿಗೆ ಸಮಾಜದಲ್ಲಿ ಗೌರವದಿಂದ ಬದುಕಲು ಬೇಕಾದ ಆತ್ಮವಿಶ್ವಾಸವನ್ನು ಹೆಚ್ಚಿಸುವ ಪಠ್ಯಾಂಶಗಳು ಸಿಗುತ್ತಿಲ್ಲ. ಮಕ್ಕಳ ಬೌದ್ಧಿಕ ಮಟ್ಟ ಮತ್ತು ಅಭಿರುಚಿಗೆ ತಕ್ಕ ಶಿಕ್ಷಣಕ್ಕೆ ನಮ್ಮಲ್ಲಿ ಅವಕಾಶ ಕಡಿಮೆ. ಓದಿನ ಗುರಿ ಮತ್ತು ಪ್ರಯೋಜನ ಅವರಿಗೆ ಗೋಚರಿಸುತ್ತಿಲ್ಲ. ಈಗಿನ ವಿದ್ಯಾರ್ಥಿಗಳಲ್ಲಿ ಅಶಿಸ್ತು, ಅವಿಧೇಯತೆ, ಮಾನಸಿಕ ತೊಳಲಾಟ (mental frustration) ಮೊದಲಾದ ಭಾವನೆಗಳು ಬೆಳೆಯಲು ಇದೇ ಕಾರಣವಿರಬೇಕು.

ನಾವು ಸುಖವಾಗಿ ಬದುಕಲು ಬಯಸುವುದು ಸಹಜ. ಅಂತಹ ಬದುಕಿಗೆ ಹಣ ಅಗತ್ಯ. ಈ ಹಣಕ್ಕಾಗಿಯೇ ನಮಗೆ ನೌಕರಿ ಬೇಕು. ಹಣದ ನೌಕರಿಗೋಸ್ಕರ ಇಂಜಿನಿಯರಿಂಗ್ ಅಥವಾ ವೈದ್ಯಕೀಯ ಶಿಕ್ಷಣವನ್ನೇ ಪಡೆಯುವುದು ಅನಿವಾರ್ಯ, "ಗೋಲ್ ಸೂರಾಖ್ ಮೇ ಚೌಕೋರ್ ಖೂಂಟಾ" ಅಂದರೆ ಉರುಟಾದ ರಂಧ್ರದಲ್ಲಿ ಚೌಕದ ಮೊಳೆ ಕೂರಿಸಿದಂತೆ ಆಭಾಸ. ಮುಂದುವರಿದ ರಾಷ್ಟ್ರಗಳಲ್ಲಿರುವಂತೆ ಶೈಕ್ಷಣಿಕ ವಾತಾವರಣ, ಸೌಲಭ್ಯ, ಸಲಕರಣೆಗಳು ಸಿಗುವ ತನಕ ನಮ್ಮ ಶಿಕ್ಷಣ ಸಫಲವಾಗದು.

ಯು.ಆರ್.ಶೆಣೈಯವರ 3ನೆಯ ತರಗತಿಯ ಕನ್ನಡ ಪುಸ್ತಕದಲ್ಲಿ ಓದಿದ ನಳಚರಿತ್ರೆಯ ಭಾಗವನ್ನೇ 8ನೆಯ ತರಗತಿಯ ಮತ್ತು ಡಿಗ್ರಿಯ ಪಠ್ಯಪುಸ್ತಕದಲ್ಲಿ ಓದಿದ್ದೇನೆ. ಇದು ನಮ್ಮ ಶಿಕ್ಷಣದ ಮಟ್ಟ ಕುಸಿಯುತ್ತಿರುವುದಕ್ಕೆ ಒಂದು ಉದಾಹರಣೆ. ಇದೇ ಶಾಲೆಯಲ್ಲಿ ಮೂರನೇ ತರಗತಿ ಓದಿ ವ್ಯಾಸಂಗ ನಿಲ್ಲಿಸಿದ ನನ್ನ ಸೋದರಮಾವ, ನಾನು 8ನೆಯ ತರಗತಿಯ ಲೆಕ್ಕವೊಂದಕ್ಕೆ ತಲೆ ತುರಿಸುತ್ತಿರುವಾಗ "ಇಲ್ಲೇ ಎಲ್ಲೋ ತಪ್ಪಿತ್ತ್ ಕಾಣ್" ಎಂದು ಹೇಳಿದುದು ನೆನಪಿದೆ. ಇದು ಎರಡನೆಯ ಉದಾಹರಣೆ. ಬ್ರಹ್ಮೀಭೂತರಾದ ಹರಿಹರಪುರದ ಶ್ರೀ ಶ್ರೀಗಳವರು ಒಂದು ಸಮಸ್ಯೆ ಹೇಳುತ್ತಿದ್ದರು. 100 ಅಂಕ ಪಡೆದ ಅಧ್ಯಾಪಕನ ಶಿಷ್ಯ 35% ಅಂಕ ಗಳಿಸಿ ಅಧ್ಯಾಪಕನಾಗುತ್ತಾನೆ. ಈ ಶಿಷ್ಯನ ವಿದ್ಯಾರ್ಥಿ 35% ಅಂಕ ಪಡೆದು ಉತ್ತೀರ್ಣನಾಗಿ ಶಿಕ್ಷಕನಾದರೆ ಆತನ ವಿದ್ಯಾಥಿಗಳ ಶಿಕ್ಷಣದ ಮಟ್ಟವೇನು? ಇದು ಹಾಸ್ಯ ಚಟಾಕಿಯಂತಿದ್ದರೂ ಇದರಲ್ಲಿ ಎಷ್ಟೊಂದು ಮಾರ್ಮಿಕವಾದ ಸತ್ಯ ಅಡಗಿದೆ! ಶಿಕ್ಷಣದ ಮಟ್ಟ ಹೇಗೆ ಕುಸಿಯುತ್ತಿದೆಯೆಂಬುದಕ್ಕೆ ಇದು ಇನ್ನೊಂದು ಉದಾಹರಣೆ. ದಿವಂಗತ ಡಾ। ಟಿ.ಎಂ.ಎ.ಪೈಯವರು ಶಿಕ್ಷಕರಿಗೆ ಯಾವಾಗಲೂ "Don't give them fish, but teach them to fish" ಎಂದು ಸಂದೇಶ ನೀಡುತ್ತಿದ್ದರು. ಭವಿಷ್ಯವನ್ನು ಧೈರ್ಯವಾಗಿ ಎದುರಿಸಲು ಅಗತ್ಯವಾದ ಆತ್ಮವಿಶ್ವಾಸದ ಶಿಕ್ಷಣ ಮಕ್ಕಳಿಗೆ ಸಿಗಬೇಕೆಂಬುದು ಅವರ ಆಶಯವಾಗಿತ್ತು.

'ಆಚಾರ್ಯ' (ಆಚಿನೋತಿ ಆಚಾರಾನ್ ಸ್ವಯಂ ಆಚರತಿ ಚ". ಅಂದರೆ ತಾನು ಬದುಕಿನಲ್ಲಿ ಸ್ವತಃ ಅಳವಡಿಸಿಕೊಂಡ ಆಚಾರ ವಿಚಾರ ನಡೆನುಡಿಗಳ ಆದರ್ಶವನ್ನು ಶಿಷ್ಯರಿಗೆ ಬೋಧಿಸುವವನು) 'ಕುಲಪತಿ' ಮೊದಲಾದ ಸಾರ್ಥಕ ಅಭಿದಾನದಿಂದ

ಸಾವಿರಾರು ಶಿಷ್ಯರಿಗೆ ಆಶ್ರಮದಲ್ಲಿ ಬೋಧಿಸಿ ಅವರನ್ನು ತಮ್ಮಂತೆಯೇ 'ಆಚಾರ್ಯ', 'ಕುಲಪತಿ'ಗಳನ್ನಾಗಿ ತರಬೇತುಗೊಳಿಸುತ್ತಿದ್ದ ಆ ಕಾಲ ಈಗಿಲ್ಲ. ಅವರಿಗೆ ರಾಜಮಹಾರಾಜರ ಆಶ್ರಯವಿತ್ತು. ಸಹಾಯ ಸಹಕಾರಗಳಿದ್ದುವು, ಸಮಾಜದ ಗೌರವ, ಪ್ರೋತ್ಸಾಹವಿತ್ತೆಂಬ ಸಂಗತಿ ಬೇರೆ. ಬೋಧನೆಗಾಗಿ ತಮ್ಮನ್ನೇ ತಾವು ಸಮರ್ಪಿಸಿಕೊಂಡ ಶಿಕ್ಷಕರನ್ನಾಗಲೀ, ಸಾರ್ಥಕ ಬದುಕಿಗೆ ನೆರವಾಗುವ ಪಠ್ಯವಸ್ತುವನ್ನಾಗಲೀ, ಓದನ್ನು ಬದುಕಿಗೆ ಅಳವಡಿಸಿಕೊಂಡು ಧೈರ್ಯವಾಗಿ, ಸತ್ಪ್ರಜೆಯಾಗಿ ಬಾಳುವ ಆಸಕ್ತಿಯುಳ್ಳ ಶಿಷ್ಯರನ್ನಾಗಲೀ, ಅರ್ಹತೆಯನ್ನೂ ದಕ್ಷತೆಯನ್ನೂ ಗೌರವಿಸುವ, ಪ್ರೋತ್ಸಾಹಿಸುವ, ರಾಜಕೀಯ-ಸಾಮಾಜಿಕ ವ್ಯವಸ್ಥೆಯನ್ನಾಗಲೀ ಅಂದು ಕಾಣಬಹುದಿತ್ತು. ಅಂತಹ ದಿನಗಳು ಹಿಂದೆ ಸರಿದು ಹೋದುವು ಎಂಬುದೇ ನಮ್ಮ ಶಿಕ್ಷಣ ಕ್ಷೇತ್ರದ ದುರಂತ.

ಆದುದರಿಂದ 'ತೇ ಹಿ ನೋ ದಿವಸಾಃ ಗತಾಃ' ಎಂಬ ಕವಿಯ ಉದ್ಗಾರ ಸಾರ್ವಕಾಲಿಕ ಸತ್ಯವೆನಿಸುತ್ತದೆ.



# ನಮ್ಮ ಗುರುಗಳು ನಾ ಕಂಡಂತೆ

'ಗು' ಕಾರಸ್ತ್ವಂಧಕಾರಃ ಸ್ಯಾತ್, 'ರು' ಕಾರಃ ತನ್ನಿವಾರಕಃ ಅಜ್ಞಾನವೆಂಬ ಕತ್ತಲೆಯನ್ನೋಡಿಸಿ ಶಿಷ್ಯರಿಗೆ ಜ್ಞಾನದ ಬೆಳಕನ್ನು ತೋರಿಸುವವನು ಗುರು. ನಮ್ಮ ಗುರುಗಳನ್ನು ಸಮೀಪಿಸಿದವರೆಲ್ಲರ ಮನಸ್ಸಿಗೆ ಬದುಕಿಗೆ ಆ ಬೆಳಕು ಕಾಣಿಸುತ್ತದೆ. ಏಕೆಂದರೆ ಅವರು 'ಸ್ವಯಂಪ್ರಕಾಶ' ಎಂಬ ಅನ್ವರ್ಥನಾಮರು.

ನಮ್ಮ ಗುರುಗಳು ಶ್ರೀ ಶ್ರೀ ಸ್ವಾಮೀಜಿ ಎಂಬ ಸರಳವಾದ ಅಂಕಿತದಲ್ಲೇ ಎಲ್ಲರಿಂದಲೂ ಗುರುತಿಸಲ್ಪಟ್ಟವರು. ಅವರ ಸಮಯ ಸ್ಫೂರ್ತಿ, ಸಮಯ ಪ್ರಜ್ಞೆ, ವಾಕ್ಸಿದ್ಧಿ ಅನ್ಯಾದೃಶವಾದುದು. ಒಮ್ಮೆ ಒಂದು ಸಾರ್ವಜನಿಕ ಸಭೆಯಲ್ಲಿ ಸಮಾನತೆಯ ಬಗ್ಗೆ ಉಪನ್ಯಾಸ ನೀಡುತ್ತಿದ್ದರು. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ" ಎಂಬುದನ್ನು ಸಾಮಾಜಿಕ ನ್ಯಾಯಕ್ಕೆ ಅನ್ವಯಿಸಿ ಭಾಷಣ ಮಾಡುವ ಗಂಭೀರವಾದ ಒಂದು ಹಂತದಲ್ಲಿ ಒಬ್ಬ (ಸ್ವಯಂಘೋಷಿತ) ವಿಚಾರವಾದಿ ಎದ್ದುನಿಂತು "ಸ್ವಾಮಿಗಳೆ, ನೀವು ಮತ್ತು ನಿಮ್ಮಂತಹ ಬೇರೆ ಸ್ವಾಮಿಗಳೂ ಚೆನ್ನಾಗಿ ಉಪನ್ಯಾ ಮಾಡುತ್ತೀರಿ. ಆದರೆ ಮಠಕ್ಕೆ ಹೋದ ಕೂಡಲೇ ಮಡಿಯುಟ್ಟು ಕುಳಿತು ಬಿಡುತ್ತೀರಿ. ನೀವು ಭಾಷಣ ಮಾಡಿದಂತೆ ನಡೆದುಕೊಳ್ಳುವುದಾದರೆ ಬ್ರಾಹ್ಮಣೇತರ ಜಾತಿಯವರನ್ನು ನಿಮ್ಮ ಮಠಕ್ಕೆ ಗುರುವಾಗಿ, ಉತ್ತರಾಧಿಕಾರಿಯಾಗಿ ಸೇರಿಸಿಕೊಳ್ಳುತ್ತೀರಾ?" ಎಂದು



ವ್ಯಂಗ್ಯಮಿಶ್ರಿತ ಧ್ವನಿಯಲ್ಲಿ ಪ್ರಶ್ನಿಸಿದ ಮತ್ತು ಸಭ್ಯರೆಲ್ಲರ ಕೆಂಗಣ್ಣಿಗೆ ಗುರಿಯಾದ. ಕೆಲವರು ಆತನನ್ನು ನಿವಾರಿಸಲು ಮುಂದಾದಾಗ, ಅವರನ್ನು ತಡೆದ ಶ್ರೀ ಶ್ರೀಗಳವರು ಪ್ರಶ್ನೆ ಮಾಡಿದ ವ್ಯಕ್ತಿಯನ್ನು ವೇದಿಕೆಯ ಎದುರು ಕರೆಸಿ ಕುಳ್ಳಿರಿಸಿದರು. ನಿರ್ವಿಕಾರ ಧ್ವನಿಯಲ್ಲಿ ಶ್ರೀ ಶ್ರೀಗಳವರು ಆತನೊಡನೆ ನಡೆಸಿದ ಸಂಭಾಷಣೆಯ ಕೆಲವು ತುಣುಕುಗಳು.

ಗುರುಗಳು : ತುಂಬಾ ಒಳ್ಳೆಯ ಪ್ರಶ್ನೆ ಕೇಳಿದ್ದೀರಿ. ನಿಮ್ಮ ಹೆಸರೇನು?

ಆತ: ನನ್ನ ಹೆಸರು . . . .

ಗುರುಗಳು: ನೀವು ಏನು ಉದ್ಯೋಗ ಮಾಡುತ್ತಿದ್ದೀರಿ?

ಆತ: ನಾನು . . . . ಉದ್ಯೋಗ ಮಾಡುತ್ತಿದ್ದೇನೆ

ಗುರುಗಳು: ನಿಮ್ಮ ಆ ಉದ್ಯೋಗ ಪಡೆಯಲು ಏನು ಓದಿರಬೇಕು?

ಆತ: ..................

ಗುರುಗಳು: ಕಡಿಮೆ ಓದಿದವರಿಗೆ ಯಾವುದಾದರೂ ರಿಯಾಯಿತಿಯ ಮೂಲಕ ಆ ಹುದ್ದೆ ಸಿಗುತ್ತದೆಯೆ?

ಆತ: ಇಲ್ಲ

ಗುರುಗಳು: ನಿಮ್ಮ ಮನೆಯಲ್ಲಿ ಯಾರ್‍ಯಾರಿದ್ದೀರಿ?

ಆತ : ನಾವು ಗಂಡ-ಹೆಂಡತಿ, ದೊಡ್ಡವರಿಬ್ಬರು ಹೆಣ್ಣುಮಕ್ಕಳು, ಸಣ್ಣವನು ಗಂಡುಮಗ.

ಗುರುಗಳು : ನೀವು ಮನೆಯಲ್ಲಿಲ್ಲದಾಗ ಸಾಮಾನ್ಯವಾಗಿ ನಿಮ್ಮ ಮನೆಯ ಮುಂದಿನ ಯಜಮಾನ ಎಂದು ಯಾರನ್ನು ಗುರುತಿಸುತ್ತಾರೆ?

ಆತ : ಯಾಕೆ?

ಗುರುಗಳು : ಸುಮ್ಮನೆ, ನೀವು ಯಾವುದಾದರೂ ಕೆಲಸದ ಮೇಲೆ ಬೇರೆ ಊರಿಗೆ ಹೋಗ ಬೇಕಾದಾಗ, ನಿಮ್ಮ ಕುಟುಂಬದ ಸದಸ್ಯರು ಯಾರನ್ನು ಮರಿ ಯಜಮಾನ ಎಂದು ಕರೆಯುತ್ತಾರೆ?

ಆತ : ನಮ್ಮ ಮಗ ಸಣ್ಣವನು. ಆದರೂ ಅವನೇ ನಮ್ಮ ಮನೆಯ ಮುಂದಿನ ಯಜಮಾನ.

ಗುರುಗಳು : (ಮುಗುಳ್ನಗುತ್ತಾ) ಹಾಂ, ನಿಮ್ಮ ಎರಡೂ ಪ್ರಶ್ನೆಗಳಿಗೆ ಉತ್ತರ ನಿಮಗೇ ಸಿಕ್ಕಿತಲ್ಲವೆ?

ಆತ : (ತಬ್ಬಿಬ್ಬಾಗಿ) . . . ಸ್ವಾ. . . ಮೀ. . . ಜೀ. . .

ಗುರುಗಳು : ನೋಡಿ, ನಿಮ್ಮ ಸಂಸ್ಥೆಯಲ್ಲಿನ ಹುದ್ದೆಯಲ್ಲಿ ಕಾರ್ಯನಿರ್ವಹಿಸಲು ನಿರ್ದಿಷ್ಟ ಅರ್ಹತೆ ಬೇಕಲ್ಲವೆ? ಅಂತಹ ನಿರ್ದಿಷ್ಟ ಅರ್ಹತೆಯಿಲ್ಲದವರಿಗೆ, ನೇಮಕಾತಿಯ

ಅಧಿಕಾರಿ ವರ್ಗದವರ ಶಿಫಾರಸ್ಸಿಲ್ಲದೆ ಆ ಹುದ್ದೆ ಯಾರಿಗೂ ಸಿಗುವುದಿಲ್ಲವಲ್ಲವೆ? ಹಾಗೆಯೇ ನಮ್ಮದು ಭಕ್ತರ ಭಾವುಕತೆಯ ಕೇಂದ್ರವಾದ ಒಂದು ಸಂಸ್ಥೆ. ಇಲ್ಲಿನ ಗುರುಪೀಠವನ್ನು ನಿರ್ವಹಿಸುವವನು ಉಪನೀತನಾಗಿದ್ದು ವೇದಾಧ್ಯಯನ ಮಾಡಿರಬೇಕು. ಶಾಸ್ತ್ರಗಳಲ್ಲಿ ಪರಿಣತಿಯಿರಬೇಕು, ವಿರಕ್ತನಾಗಿ ಸಂನ್ಯಾಸ ಸ್ವೀಕಾರ ಮಾಡುವ ಮನಸ್ಸಿನವನಾಗಬೇಕು. ಆಧ್ಯಾತ್ಮದಲ್ಲಿ ವಿಶೇಷ ಆಸಕ್ತಿಯುಳ್ಳವನಾಗಿರಬೇಕು ಮತ್ತು ಶಿಷ್ಯರ ಒಳಿತಿಗಾಗಿ ಅನುಷ್ಠಾನ ಮಾಡುವ ಉತ್ಸಾಹಿಯಾಗಿರಬೇಕು. ಈ ಎಲ್ಲ ಕನಿಷ್ಠ ಅರ್ಹತೆಗಳೊಂದಿಗೆ ಶ್ರೀಮಠದ ಶಿಷ್ಯರು ಅಪೇಕ್ಷಿಸಬಹುದಾದ ವಿಶೇಷ ಅರ್ಹತೆಗಳಿದ್ದವರು ಯಾರೇ ಬಂದರೂ ಈ ಪೀಠದಲ್ಲಿ ಕಾರ್ಯನಿರ್ವಹಿಸಲು ಯಾರೂ ಆಕ್ಷೇಪಿಸಲಾರರು. ನಮ್ಮ ಪೂರ್ಣ ಸಮ್ಮತಿಯೂ ಇದೆ.

ನಿಮ್ಮ ಕುಟುಂಬದ ಉತ್ತರಾಧಿಕಾರಿಯನ್ನು ನಿರ್ಧರಿಸುವವರೂ ನೀವೇ. ಅಂದರೆ ಭಾರತದ ಪಿತೃ ಪ್ರಧಾನ ಕೌಟುಂಬಿಕ ವ್ಯವಸ್ಥೆಗನುಗುಣವಾಗಿ, ನಿಮ್ಮ ಕುಟುಂಬದ ಸದಸ್ಯರು, ಹಾಗೆಯೇ ನಿಮ್ಮ ಕುಟುಂಬದ ಉತ್ತರಾಧಿಕಾರಿಯನ್ನು ನಿರ್ಧರಿಸುವಲ್ಲಿ ಬೇರೆ ಕುಟುಂಬದ ಸದಸ್ಯರಿಗೆ ಅಧಿಕಾರವಿಲ್ಲ. ಅಂತೆಯೇ ನಮ್ಮ ಶ್ರೀಮಠದ ಶಿಷ್ಯವೃಂದದವರು ಯಾರನ್ನು ಈ ಗುರುಪೀಠದ ಉತ್ತರಾಧಿಕಾರಿಯೆಂದು ನಿರ್ಧರಿಸುತ್ತಾರೋ ಅವರು ಉತ್ತರಾಧಿಕಾರಿಯಾಗುವುದರಲ್ಲಿ ನಮ್ಮದೇನೂ ಆಕ್ಷೇಪವಿಲ್ಲ.

ಆತ ತಗ್ಗಿಸಿದ ತಲೆ ಮೇಲೆತ್ತಲಿಲ್ಲ. ಶ್ರೀ ಶ್ರೀಗಳವರು ತಮ್ಮ ಉಪನ್ಯಾಸವನ್ನು ಮುಂದುವರಿಸಿದರು. ಎಲ್ಲರ ಗಮನ ಶ್ರೀ ಶ್ರೀಗಳವರ ಲಘು ಹಾಸ್ಯ ಮಿಶ್ರಿತ ಭಾಷಣದ ಮೇಲಿರುವಾಗ ಆತ ಮೆಲ್ಲಗೆ ಸಭೆಯಿಂದ ಹೊರನಡೆದ. ಆಶ್ಚರ್ಯವೆಂದರೆ ಮುಂದೆ ಅದೇ ವ್ಯಕ್ತಿ ಅನೇಕ ಬಾರಿ ವಿನೀತನಾಗಿ ಶ್ರೀ ಶ್ರೀಗಳವರನ್ನು ಭೇಟಿಯಾದದ್ದು, ಹಲವು ಗಂಭೀರ ವಿಷಯಗಳನ್ನು ಚರ್ಚಿಸಿದುದು. ಗುರುಗಳು ಎಲ್ಲರನ್ನೂ ತಮ್ಮ ಕಡೆಗೆ ಸೆಳೆದುಕೊಳ್ಳುವ ಒಂದು ಚುಂಬಕ ಶಕ್ತಿಯಿದ್ದಂತೆ. ಸಮಯ ಸ್ಫೂರ್ತಿ ಅವರ ವಿಶಿಷ್ಟ ಗುಣ. ಹಳೆಯ ಧಾರ್ಮಿಕ ಸಂಪ್ರದಾಯಗಳನ್ನು ಹೊಸ ಭಾವನೆಗಳೊಂದಿಗೆ ಸಮನ್ವಯಗೊಳಿಸಿ ವೈಜ್ಞಾನಿಕ ವಿಶ್ಲೇಷಣೆಗೊಳಪಡಿಸುವುದು ಅವರ ಉಪನ್ಯಾಸಗಳ ವೈಶಿಷ್ಟ್ಯ. ಪೂರ್ವ ಸಿದ್ಧತೆಯಿಲ್ಲದ ಅಧ್ಯಾಪಕ, ಉತ್ತರಾವಲೋಕನವಿಲ್ಲದ ಶಿಷ್ಯ ಇಬ್ಬರೂ ಸಮಾಜಕ್ಕೆ ಭಾರವಾಗುತ್ತಾರೆಂದು ಅವರು ಕಿವಿಮಾತು ಹೇಳುತ್ತಿದ್ದರು. ಆದರೆ ಯಾವುದೇ ವಿಷಯದ ಮೇಲೆ ಭಾಷಣ ಮಾಡಲು ಅವರಿಗೆ ಪೂರ್ವ ಸಿದ್ಧತೆಯ ಅವಶ್ಯಕತೆಯಿರಲಿಲ್ಲ.

ಅವರು ಬದುಕಿನುದ್ದಕ್ಕೂ ಕಾಯ್ದುಕೊಂಡು ಬಂದ ಸಮಯ ಪ್ರಜ್ಞೆ ಶ್ರೀಮಠದ ಸಂಪರ್ಕದಲ್ಲಿರುವವರೆಲ್ಲರಿಗೂ ತಿಳಿದಿತ್ತು. ಬೆಳಿಗ್ಗೆ 6–25ಕ್ಕೆ ಕೊಟ್ಟಿಗೆಯಲ್ಲಿ ಹಸು 'ಅಂಬಾ' ಎಂದು ಕೂಗಿದರೆ ಹುಲ್ಲು –ಹಿಂಡಿಗಾಗಿ ಶ್ರೀ ಶ್ರೀಗಳವರನ್ನು ಕೂಗುತ್ತಿದೆಯೆಂದೇ ಅರ್ಥ. ಪ್ರಾತರಾಹ್ನಿಕ ಮುಗಿಸಿ ಲಲಿತಾ ಸಹಸ್ರನಾಮ, ಕನಕಧಾರಾ ಸ್ತೋತ್ರಗಳನ್ನು ಪಠಿಸುತ್ತಾ ಹಸುಗಳಿಗೆ ಮೇವು ಉಣಿಸುವ ನಿರ್ದಿಷ್ಟ ಸಮಯದ ಅರಿವು ಹಸುಗಳಿಗೂ ಇತ್ತು. 6.30ಕ್ಕೆ ಗುರು–ಶಾರದಾ ಸನ್ನಿಧಿಯ ದರ್ಶನ ಮಾಡಿ ಪೂಜೆಗೆ ಕುಳಿತರೆ 7.50ಕ್ಕೆ ನಿತ್ಯ ಪೂಜೆ.



8.50ಕ್ಕೆ ಶ್ರೀ ಚಕ್ರಾರ್ಚನೆ ಪೂಜೆಗಳ ಮಂಗಳಾರತಿ. ಮುಂದಿನ ಹತ್ತು ನಿಮಿಷಗಳಲ್ಲಿ ತೀರ್ಥ ವಿತರಣೆ. ಗಡಿಯಾರದ ಮುಳ್ಳುಗಳು ವೇಗವಾಗಿ ಮುಂದೆ ಹೋಗಬಹುದು, ಅಥವಾ ನಿಂತು ಹೋಗಬಹುದು, ಆದರೆ ಶ್ರೀ ಶ್ರೀಗಳವರ ಕಾರ್ಯಚಟುವಟಿಕೆಯ ನಿರ್ದಿಷ್ಟ ಸಮಯದಲ್ಲಿ ಒಂದೇ ನಿಮಿಷದ ವ್ಯತ್ಯಾಸವೂ ಬಂದಿದ್ದಿಲ್ಲ. ಶ್ರೀಮಠದ ದೈನಂದಿನ ಚಟುವಟಿಕೆಯಾಗಲೀ, ವಿಶೇಷ ಸಮಾರಂಭವೇ ಆಗಲಿ ನಿರ್ದಿಷ್ಟ ಸಮಯಕ್ಕಿಂತ ಮುಂಚೆ ಮುಗಿಯುವುದಾಗಲೀ, ವಿಳಂಬಿಸುದುದಾಗಲೀ ನಲವತ್ತು ವರ್ಷಗಳ ಕಾಲ ಅವರ ಛತ್ರಚ್ಛಾಯೆಯಲ್ಲಿದ್ದ ನನ್ನ ಅನುಭವಕ್ಕೆ ಬಂದಿಲ್ಲ.

“ಯಾ ನಿಶಾ ಸರ್ವ ಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ” (ಸಕಲ ಜೀವಿಗಳೂ ಅಂಧಕಾರದಲ್ಲಿ ಮುಳುಗಿರುವಾಗ ಸಂಯಮಿಯು ಮಾತ್ರ ಜಾಗ್ರತನಾಗಿ ರುತ್ತಾನೆ. ಅಂದರೆ ಎಚ್ಚರವಾಗಿರುತ್ತಾನೆ) 1960ರ ದಶಕದಲ್ಲಿ ಶ್ರೀಮಠದ ನವೀಕರಣ ವಾಗುವುದಕ್ಕಿಂತ ಮೊದಲಿನ ಒಂದು ಘಟನೆಯನ್ನು ಕಂಚಿತೋಟದ ಶೀನಯ್ಯನವರು (ಶ್ರಿ ಶ್ರೀಗಳವರ ಆಪ್ತ ಪರಿಚಾರಕರು) ಆಗಾಗ ಮೆಲುಕು ಹಾಕುತ್ತಿದ್ದರು. ನೃಸಿಂಹ ದೇವರ ಗುಡಿಯ ಬಾಗಿಲಿನ ಎದುರು ಈಗಿನ ಗುರುನಿವಾಸ ದ್ವಾರದಿಂದ ಹೊರಬಂದರೆ ಜಗುಲಿಯ ಎಡಭಾಗದಲ್ಲಿ ಒಂದು ಉಗ್ರಾಣ. ಈ ಉಗ್ರಾಣದ ಮೂಲಕ ಶ್ರೀ ಶ್ರೀಗಳವರ ವಿಶ್ರಾಂತಿಯ ಖಾಸಗಿ ಕೊಠಡಿಗೆ ಪ್ರವೇಶವಿತ್ತಂತೆ. ಗುರುಗಳು ನಿಯತ ಸಮಯದಲ್ಲಿ ವಿಶ್ರಾಂತಿಗೆ ಹೋದರೆ ಬೆಳಗಿನ ಜಾವ ನಾಲ್ಕು ಗಂಟೆಗೆ ಸರಿಯಾಗಿ ಎಚ್ಚರಗೊಳ್ಳುವುದು ವಾಡಿಕೆ. ಆಹ್ನಿಕ, ಪೂಜೆ, ಶಿಷ್ಯರಿಗೆ ಸಂದರ್ಶನ, ಗ್ರಂಥಾವಲೋಕನ ಮೊದಲಾದ ದೈನಂದಿನ ಅವಿಶ್ರಾಂತ ಚಟುವಟಿಕೆಯಿಂದ ನಡು ರಾತ್ರಿ ಎಚ್ಚರಗೊಳ್ಳುವ ಸಂಭವ ತೀರಾ ಕಡಿಮೆ ಇತ್ತು. ಆದರೆ ರಾತ್ರಿ ಸುಮಾರು 1.40ರ ಹೊತ್ತಿಗೆ ದಡೂತಿ ಮನಷ್ಯನೊಬ್ಬ ಇನ್ನೇನು ಗುರುಗಳ ಸಮೀಪಕ್ಕೆ ಬಂದಾಗ ಇದ್ದಕ್ಕಿದ್ದಂತೆ ಎಚ್ಚರಗೊಂಡು ಆತನನ್ನು ತಳ್ಳುತ್ತಾ ಹೊರಗಡೆಗೆ ಬಂದು ಗದ್ದಲವೆಬ್ಬಿಸಿದಾಗಲಷ್ಟೇ ಒಬ್ಬೊಬ್ಬರಾಗಿ ಎಚ್ಚರಗೊಂಡು ಅವನನ್ನು ಹಿಡಿದು ಶಿಕ್ಷಿಸುವ ಹವಣಿಕೆಯಲ್ಲಿದ್ದರಂತೆ. ಆದರೆ ಶ್ರೀ ಶ್ರೀಗಳವರು ಮಾತ್ರ ಏನೂ ನಡದೇ ಇಲ್ಲವೆಂಬಂತೆ ಆತನನ್ನು ಕ್ಷಮಿಸಿ ಕಳುಹಿಸಿದರಂತೆ. ಆತ ಯಾರು? ಎಲ್ಲಿಂದ, ಏಕೆ, ಹೇಗೆ ಒಳಗೆ ಬಂದ ಎಂದು ಯಾರಿಗೂ ಗೊತ್ತಾಗಲಿಲ್ಲ. ಅದಕ್ಕೆ ಮೊದಲೂ, ನಂತರವೂ ಆತನನ್ನು ಎಲ್ಲೂ ಕಂಡುದಿಲ್ಲವಂತೆ. ಅಷ್ಟೊಂದು ಜನರ ನಡುವೆ ಆತ ಒಳಗೆ ಪ್ರವೇಶಿಸಿದುದೂ ಎಲ್ಲರಿಗೂ ಆಶ್ಚರ್ಯ. ಯಾವುದೋ ಕ್ಷುದ್ರ ಶಕ್ತಿ ಗುರುಗಳನ್ನು ಸಾಯಿಸಲು ಬಂದಿತ್ತಂತೆ, ಯಾರೋ ಕಳ್ಳ ಮಠಕ್ಕೆ ಕದಿಯಲು ಬಂದಿದ್ದ ನಂತೆ, ಎಂದು ಬೆಳಗಾದ ಮೇಲೆ ಊರೆಲ್ಲಾ ಅಂತೆಕಂತೆಗಳು. ಶ್ರೀ ಶ್ರೀಗಳವರ ಆರಾಧ್ಯ ದೈವದ ಅನುಗ್ರಹದ ಮುಂದೆ, ಅವರ ಅನುಷ್ಠಾನ ಶಕ್ತಿಯ ಮುಂದೆ ಯಾವುದೇ ದುಷ್ಟಶಕ್ತಿ ನಿಲ್ಲಲಾರದೆಂದೂ ಜನ ಆಡಿಕೊಳ್ಳತೊಡಗಿದರಂತೆ. ಶ್ರೀ ಶ್ರೀಗಳವರು ಚಕ್ರಾರ್ಚನೆ ಮಾಡಿ ಅನುಗ್ರಹಿಸಿದ ಪ್ರಸಾದ ಶಿಷ್ಯರ ಅನೇಕ ಸಮಸ್ಯೆಗಳ ನಿವಾರಣೆಗೆ ಪವಾಡ ಸದೃಶ ಪರಿಣಾಮ ಬೀರುತ್ತಿತ್ತೆಂಬುದು ಜನಜನಿತವಾಗಿತ್ತು.

1980–90ರ ನಡುವಿನ ಸಂಗತಿ (ನಿರ್ದಿಷ್ಟ ದಿನಾಂಕದ ನೆನಪಿಲ್ಲ) ಶೃಂಗೇರಿ ಜಗದ್ಗುರು ಶ್ರೀ ಶ್ರೀ ಅಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳ ದಿವ್ಯ ಸಾನ್ನಿಧ್ಯದಲ್ಲಿ ಕಾಶಿಯ ಅನ್ನಪೂರ್ಣೇಶ್ವರೀ ಪ್ರತಿಷ್ಠಾಪನೆ ಮಹೋತ್ಸವದಲ್ಲಿ ಭಾಗವಹಿಸಲು ಆಹ್ವಾನಿತರಾಗಿ ತೀರ್ಥಮತ್ತೂರು ಮಠಾಧಿಶರೂ, ನಮ್ಮ ಗುರುಗಳೂ ಹೊರಟಿದ್ದರು. (ಹರಿಹರಪುರ ವಾಸುದೇವ ಉಪಾಧ್ಯರ ಕಾರಿಗೆ ಅವರೇ ಚಾಲಕರು. ಹುಲುಗಾರು ಗಣೇಶಯ್ಯ ಉಪಸಾರಥಿ. ನಾನು ಮತ್ತು ಒಬ್ಬರು ಪರಿಚಾರಕರೊಂದಿಗೆ ಆರು ಜನರ ಒಂದು ತಂಡ). ಮಾರ್ಗ ಮಧ್ಯದ ಅಲಹಾಬಾದಿನಲ್ಲಿ 'ಕುಂಭಮೇಳ' ಜಾತ್ರೆ. ಜಗದ್ಗುರು ಗಳು ಕೆಲವು ದಿನ ಮೊದಲೇ ಅಲ್ಲಿ ಮೊಕ್ಕಾಂ ಮಾಡಿದ್ದರು. ನಾವು ಕುಂಭಮೇಳಕ್ಕೆ ಎರಡು ದಿನ ಮುಂಚಿತವಾಗಿ ಕಾಯ್ದಿರಿಸಿದ ಜಾಗ ತಲುಪಿದೆವು. ಕುಂಭಮೇಳ ಪರ್ವದ ಪುಣ್ಯ ಸ್ನಾನಕ್ಕಾಗಿ ಬೆಳಗಿನ ಜಾವ ನಾಲ್ಕು ಗಂಟೆಗೆ ಪೋಲೀಸು, ಮುಂಗಾವಲಿನಲ್ಲಿ 15–20 ನಿಮಿಷಗಳಲ್ಲಿ ತ್ರಿವೇಣಿ ಸಂಗಮ ತಲುಪಿದೆವು. ಪುಣ್ಯ ಸ್ನಾನ ಮುಗಿಸಿದ ಗುರುಗಳು ಜಗದ್ಗುರುಗಳ ಜೊತೆ ವಾಹನದಲ್ಲಿ 7.00 ಗಂಟೆಗೇ ಮೊಕ್ಕಾಮನ್ನು ತಲುಪಿದರಂತೆ. ನಾನು ಮತ್ತೊಬ್ಬ ಪರಿಚಾರಕರು (ಹೆಸರು ನೆನಪಿಲ್ಲ) ಜನಜಂಗುಳಿಯಲ್ಲಿ ತಪ್ಪಿಸಿಕೊಂಡು ಕಾಲ್ನಡಿಗೆಯಲ್ಲಿ ಹೊರಟೆವು. ಜನರ ನೂಕುನುಗ್ಗಲಿನಿಂದಾಗಿ ಆಕಾಶವನ್ನೇ ಕಾಣುತ್ತಾ (ಆಚೀಚೆ ಕಣ್ಣು ಹೊರಳಿಸಲು, ದೇಹ ಬಾಗಿಸಲು ಎಡೆಯಿಲ್ಲ) ದಾರಿಯನ್ನು ಗುರುತಿಸಲಾಗದೆ, ಹೆಜ್ಜೆಯ ಮೇಲೆ ಹೆಜ್ಜೆ ಇಡುತ್ತಾ ಅಂತೂ ಇಂತೂ 2–3 ಕಿ.ಮೀ. ದೂರವನ್ನು ತಲುಪುವಾಗ ಮಧ್ಯಾಹ್ನ 1–00 ಗಂಟೆ. ಈ ನಡುವೆ ಜಗದ್ಗುರುಗಳ ಕ್ಯಾಂಪಿನ ಶೃಂಗೇರಿಯ ಚಂದ್ರಶೇಖರ ಹಂದೆಯವರು (ಹರಿಹರಪುರ ಕೃಷ್ಣಭಟ್ಟರ ಭಾವ) ಬೆಳಗಿನಿಂದಲೇ ಅದು ಹೇಗೋ ತಪ್ಪಿಸಿಕೊಂಡುಬಿಟ್ಟಿದ್ದರು. ಸುಮಾರು 100–100 ಮೀಟರುಗಳ ಅಂತರದಲ್ಲಿ ಬುರುಜುಗಳ ಮೇಲೆ ನಿಂತು ದೂರದರ್ಶನದ ಮೂಲಕ ಜನರ ಚಲನವಲನಗಳನ್ನು ಗುರುತಿಸಿ, ನಿಯಂತ್ರಿಸುವ ಸಿಪಾಯಿಗಳ ಮೂಲಕ ಅವರು (ಹಂದೆಯವರು) ಕಾಣೆಯಾದ ಮಾಹಿತಿಯನ್ನು ಅವರ ಚಹರೆಯೊಂದಿಗೆ ಧ್ವನಿವರ್ಧಕಗಳಲ್ಲಿ ಬಿತ್ತರಿಸಲಾಗುತ್ತಿತ್ತು. ಅವರು ತಪ್ಪಿಸಿಕೊಂಡು ತಿರುಗಾಡಬಹುದಾದ ಎಲ್ಲ ಜಾಗಗಳಲ್ಲೂ ಸರಕಾರದ ಉಸ್ತುವಾರಿಯಲ್ಲಿ ಹುಡುಕಿದರೂ ಅವರು ಸಿಗಲಿಲ್ಲ. ಆಗ ದೂರವಾಣಿ ಸಂಪರ್ಕ ಜಾಲ ಇಷ್ಟು ವ್ಯಾಪಕವಾಗಿರಲಿಲ್ಲ. ಸಂಚಾರಿ ವಾಣಿ ಯಂತೂ ಇರಲಿಲ್ಲ. ಇದ್ದಿದ್ದರೂ ಅಂತಹ ಮಾಹಿತಿಯನ್ನವಲಂಬಿಸಿ ಯಾರನ್ನೂ ಸಂಪರ್ಕಿಸುವ ವಿವೇಚನೆ ಆಗ ಹಂದೆಯವರಲ್ಲಿರಲಿಲ್ಲ. ಮಧ್ಯಾಹ್ನ 2–00 ಗಂಟೆಗೆ ಹೊರಟು ಸಂಜೆ ಸುಮಾರು 5–00 ಗಂಟೆಯ ಹೊತ್ತಿಗೆ ವಿಂಧ್ಯಾಚಲ (ಸಪ್ತಶತಿಯಲ್ಲಿ ಬರುವ ವಿಂಧ್ಯಾಚಲ ನಿವಾಸಿನೀ ಸನ್ನಿಧಿ) ತಲುಪಬೇಕಿತ್ತು. ಜಗದ್ಗುರುಗಳ ಪರಿಚಾರಕನೊಬ್ಬ ಬಂದು ನಮ್ಮ ಗುರುಗಳ ಹತ್ತಿರ ಚಂದ್ರಶೇಖರ ಹಂದೆ ತಪ್ಪಿಸಿಕೊಂಡ ಕಳವಳಕಾರಿ ಸಂಗತಿಯನ್ನು ತಿಳಿಸಿದ, ಕ್ಷಣಕಾಲ ಕಣ್ಣು ಮುಚ್ಚಿದ ಗುರುಗಳು "ಹಾಂ. . . ನೀವು ಹೊರಡಿ, ನಾವು ಅವರನ್ನು ಕರೆದುಕೊಂಡು ಬರುತ್ತೇವೆ" ಎಂದು ಹೇಳಿದರು, ಆತಂಕದ ಸಂಗತಿಯೆಂದರೆ



ಹಗಲಿನಲ್ಲಿ ಸಹ ಒಬ್ಬರು ಇನ್ನೊಬ್ಬರ ಮುಖ ಕಾಣಲು ದೇಹವನ್ನು ಹೊರಳಿಸಲಾರದಷ್ಟು ಜನಸಂದಣಿ, ಹಂದೆಯವರಿಗೆ ಕನ್ನಡವಲ್ಲದೆ ಬೇರೆ ಯಾವುದೇ ಭಾಷೆಯಲ್ಲಿ ವ್ಯವಹರಿಸಲು ತಿಳಿಯದು, ಮೈ ಮೇಲೆ ಸ್ನಾನದ ಬಟ್ಟೆ, ಜನಿವಾರ ಬಿಟ್ಟರೆ ಬೇರೇನೂ ಇಲ್ಲ. ಹಿಂದಿನ ರಾತ್ರಿ ಊಟದ ನಂತರ ಒಂದು ತೊಟ್ಟು ನೀರು ಸಹ ಕುಡಿದಿರುವ ಸಾಧ್ಯತೆಯಿಲ್ಲ.

ನಾಲ್ಕು ಗಂಟೆಯ ತನಕ ಕಾದು ನಮ್ಮ ಗಾಡಿ ಹೊರಟಿತು. ಜನಸಾಗರ, ವಾಹನಗಳ ದಟ್ಟಣೆಯ ನಡುವೆ ಸುಮಾರು 4 ಮೈಲಿ ಊರಹೊರಗೆ ಬರುವಷ್ಟರಲ್ಲಿ ರಾತ್ರಿ 8–00 ಗಂಟೆ. ಹರಟೆಯ ನಡುವೆ ಶ್ರೀ ಶ್ರೀಗಳವರು ಇದ್ದಕ್ಕಿದ್ದಂತೆ "ಅಗೋ...., ಅಲ್ಲಿ..., ಹಂದೆ.. " ಎಂದು ಉದ್ಗರಿಸಿದರು. ಅವರು ಕುಳಿತಿದ್ದುದು ಕಾರಿನ ಮುಂಭಾಗದ ಎಡಗಡೆಯಲ್ಲಿ ತೋರಿಸಿದುದು, ಬಲಭಾಗದ ರಸ್ತೆ ಬದಿಯನ್ನು, ಮಾನಸಿಕ ತೊಳಲಾಟ, ಹಸಿವು, ನೀರಡಿಕೆಯಿಂದಾಗಿ ನಿತ್ರಾಣ, ದಿಕ್ಕು ತೋಚದ ಭಯದಿಂದ ನಡುಕ, ಪರವೂರಿನಲ್ಲಿ ಅನಾಥ ಪ್ರಜ್ಞೆ, ಭಾಷೆ ತಿಳಿಯದೆ ಯಾರೊಡನೆಯೂ, ಏನೂ ಹೇಳಲಾಗದ ಸಂಕಟ, ಅಸಹಾಯಕ ಸ್ಥಿತಿಗಳಿಂದಾಗಿ ನಿಂತಲ್ಲೇ ನಿಂತಲ್ಲೇ ಕುಸಿಯುತ್ತಿರುವ ಒಂದು ಆಕೃತಿ ನೆರಳು ಬೆಳಕಿನ ನಡುವೆ ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಗಾಡಿಯ ಬಲಭಾಗದ ಬಾಗಿಲು ತೆರೆಯುವಂತಿಲ್ಲ. ಕ್ಷಣಮಾತ್ರವೂ ನಿಲ್ಲಿಸುವಂತಿಲ್ಲ. ಕೆಳಗಿಳಿದು ರಸ್ತೆ ದಾಟಿ ಬಲಭಾಗದ ಅಂಚಿನಲ್ಲಿರುವ ಆ ವ್ಯಕ್ತಿಯನ್ನು ಗಾಡಿಯೊಳಕ್ಕೆ ಕರೆತರುವುದೇ ದೊಡ್ಡ ಸಾಹಸವಾಯಿತು. ಒಳಗೆ ನಾಲ್ವರ ಮಧ್ಯೆ ಕೂರಲು ಜಾಗವಿರಲಿಲ್ಲ. ಗಾಡಿಯಲ್ಲಿದ್ದ ಹಾಲು ಹಣ್ಣು ಸೇವನೆಯ ನಂತರ ಮೂರ್ಛಾವಸ್ಥೆಯಂತಹ ಸ್ಥಿತಿಯಿಂದ ಕೊಂಚ ಎಚ್ಚರಗೊಂಡ ಹಂದೆ ಭಾವೋದ್ವೇಗದಿಂದ ದಾರಿಯುದ್ದಕ್ಕೂ ಅಳುತ್ತಲೇ ಇದ್ದರು. ಅಲಹಾಬಾದಿನಿಂದ 4–00ಗಂಟೆಗೆ ಹೊರಟ ನಾವು ನಾಲ್ಕೈದು ಗಂಟೆಗಳ ಪ್ರಯಾಣದಲ್ಲಿ ತಲುಪಬೇಕಾದ ವಿಂಧ್ಯಾಚಲವನ್ನು ತಲುಪುವಾಗ ರಾತ್ರಿ 2.00 ಗಂಟೆ. ಮೊಕ್ಕಾಮಿನಲ್ಲಿ ಬೆಳಿಗ್ಗೆಯೇ ಈ ಹಂದೆ ತಪ್ಪಿಸಿಕೊಂಡುದು ಹೇಗೆ? ರಾತ್ರಿ 8.00 ಗಂಟೆಯ ತನಕ ಎಲ್ಲೆಲ್ಲಿ ಸುತ್ತಿದರು? 5–6 ಮೈಲಿ ದೂರ– ಊರ ಹೊರಗೆ ಹೋದದ್ದು ಹೇಗೆ? ಉತ್ತರ ಅವರಿಗೇ ತಿಳಿದಿಲ್ಲದಿರುವಾಗ ಬೇರೆಯವರಿಗೆ ಗೊತ್ತಾಗುವ ಸಾಧ್ಯತೆಯಿಲ್ಲ. ಗುರುಗಳ ಯೋಗ ದೃಷ್ಟಿಗೆ, ಆ ಹಂದೆ ಆ ಸ್ಥಿತಿಯಲ್ಲಿ ಅಲ್ಲಿರಬಹುದಾದ ಸಂಗತಿ ಗೋಚರಿಸಿದುದು ಹೇಗೆ? ಎಂಬುದಕ್ಕೂ ಉತ್ತರವಿಲ್ಲ. ಅಂತೂ ನಾವು ಅವರನ್ನು ಕರೆದುಕೊಂಡು ಬರುತ್ತೇವೆ ಎಂದು ಗುರುಗಳು ನೀಡಿದ ಭರವಸೆಯ ಮಾತು ಎಂತಹ ಅಸಂಭವನೀಯ ಸ್ಥಿತಿಯಲ್ಲೂ ಸತ್ಯವಾಯಿತೆಂಬುದು ಮಾತ್ರ ಆಶ್ಚರ್ಯ (ಅಥವಾ ಪವಾಡ) ವಲ್ಲದೆ ಮತ್ತೇನು? ಮಹಾಪುರಷರ ಬಾಯಿಯಿಂದ ಹೊರಬರುವ ಮಾತುಗಳು ಸತ್ಯವಾಗಿ ಫಲಿಸುತ್ತವೆ. (ಋಷೀಣಾಂ ಪುನರಾದ್ಯಾನಾಂ ವಾಚಮರ್ಥೋಽನುಧಾವತಿ) ಎಂಬ ಅರ್ಯೋಕ್ತಿಗೆ, ಶ್ರೀ ಶ್ರೀಗಳ ವಾಕ್ಸಿದ್ಧಿಗೆ, ಈ ಪ್ರಸಂಗದಲ್ಲಿ ಸಾರ್ಥಕತೆ.

# ಶ್ರಾದ್ಧ–ಮೀಮಾಂಸೆ

ಶ್ರಾದ್ಧ ಎಂದರೇನು? ಮೃತವ್ಯಕ್ತಿಯನ್ನು ಉದ್ದೇಶಿಸಿ ಶ್ರದ್ಧೆ–ಭಕ್ತಿ, ನಂಬಿಕೆ, ಗೌರವಾದರಗಳಿಂದ ನಡೆಸುವ ಒಂದು ಕ್ರಿಯೆಯೇ ಶ್ರಾದ್ಧ.

**ಸಂಸ್ಕೃತ ವ್ಯಂಜನಾಢ್ಯಂಚ ಪಯೋದಧಿಘೃತಾನ್ವಿತಂ।**
**ಶ್ರದ್ಧಯಾ ದೀಯತೇ ಯಸ್ಮಾತ್ ಶ್ರಾದ್ಧಂ ತೇನ ನಿಗದ್ಯತೇ ॥**

ಮೃತ ವ್ಯಕ್ತಿಯ ಆತ್ಮಸೂಕ್ಷ್ಮ ರೂಪದಲ್ಲಿ ಚಂದ್ರಲೋಕದ ಸಮೀಪ

ಊರ್ಧ್ವಗತಿಯಲ್ಲಿರುತ್ತದೆ ಎಂಬ ನಂಬಿಕೆಯ ಆಧಾರದಲ್ಲಿ ಈ ಲೇಖನವನ್ನು ಪ್ರಸ್ತುತ ಪಡಿಸಲಾಗಿದೆ. ಮರಣ, ಮರಣೋತ್ತರ ದಶೆ, ಪುನರ್ಜನ್ಮ, ಮೋಕ್ಷಗಳ ಬಗ್ಗೆ ಪ್ರತ್ಯೇಕ ವಿಶೇಷ ಲೇಖನವನ್ನೇ ಬರೆಯಬೇಕಾಗುತ್ತದೆ ಇರಲಿ.

ಸಾವಿರಾರು ವರ್ಷಗಳ ತಪಸ್ಸಿನ ಸಿದ್ಧಿಯಿಂದ, ಯೋಗ ಬಲದಿಂದ, ಪ್ರಾಚೀನ ಮಹರ್ಷಿಗಳು ಈ ಆಚರಣೆಯ ವೈಜ್ಞಾನಿಕ ಹಿನ್ನೆಲೆಯನ್ನು ಕಂಡುಕೊಂಡಿದ್ದರು. ದೃಷ್ಟಿಗೋಚರವಾಗದ, ಪರಿಣಾಮ ಬಿರುವ 'ಟೆಲಿಪತಿ' ಯನ್ನು ಆಧುನಿಕ ವಿಜ್ಞಾನಿಗಳು ಒಪ್ಪುತ್ತಾರೆ. ಸಮಸ್ತ ವಾಯುಮಂಡಲವನ್ನು ವ್ಯಾಪಿಸಿರುವ 'ಇಥರ್' ತತ್ವವನ್ನಾಧರಿಸಿ ಸಿದ್ಧಪುರುಷರು, ಮಹಾತ್ಮರು, ಯೋಗಿಗಳು ವಾಯುಮಂಡಲದಲ್ಲಿ ತಮ್ಮ ಸಂಪರ್ಕವನ್ನು ಕಲ್ಪಿಸಿಕೊಳ್ಳಬಲ್ಲರು. ಹಾಗೆಯೇ ಮೃತವ್ಯಕ್ತಿಯ ಸೂಕ್ಷ್ಮ ಶರೀರದೊಡನೆ ಸಂಪರ್ಕ ಕಲ್ಪಿಸಿಕೊಳ್ಳುವ ಈ ಶ್ರಾದ್ಧ ಪ್ರಕ್ರಿಯೆಯನ್ನು ಅವೈಜ್ಞಾನಿಕವೆಂದು ಅಲ್ಲಗಳೆಯುವಂತಿಲ್ಲ.

ಭಾದ್ರಪದ ಅಮಾವಾಸ್ಯೆ (ರಾಷ್ಟ್ರೀಯ ಪಂಚಾಂಗದಂತೆ ಅಶ್ವಿನ ಅಮಾವಾಸ್ಯೆ) ಯಂದು ಮಾಡುವ ಶ್ರಾದ್ಧಕ್ಕೆ ವಿಶೇಷ ಮಹತ್ತ್ವವಿದೆ. ಮಹಾಲಯ ಅಮಾವಾಸ್ಯೆಯ ದಿನ ಚಂದ್ರ ಭೂಮಿಗೆ ಅತ್ಯಂತ ಸಮೀಪದಲ್ಲಿರುತ್ತಾನೆ. ಆದುದರಿಂದ ಭೂಮಿ ಮತ್ತು ಅದರಲ್ಲಿ ಅಧಿಷ್ಠಿತವಾದ ಪ್ರಾಣಿಗಳ ಮೇಲೆ ಚಂದ್ರನ ಆಕರ್ಷಣ ಶಕ್ತಿಯ ಪ್ರಭಾವ ವಿಶೇಷವಾಗಿ ಬೀಳುತ್ತದೆ. ಆಗ ಸೂಕ್ಷ್ಮ ಶರೀರದಿಂದ ಕೂಡಿ, ಚಂದ್ರಲೋಕದ ಮೇಲ್ಭಾಗದಲ್ಲಿದ್ದು ಪಿತೃ ಲೋಕವನ್ನು ಕುರಿತು ಹೋಗುತ್ತಿರುವ, ಹೋಗಲಿರುವ ಮೃತ ವ್ಯಕ್ತಿಯನ್ನು ಉದ್ದೇಶಿಸಿ ಸಮೀಪದ ಬಂಧುವಿನಿಂದ ನೀಡಲ್ಪಟ್ಟ ಪಿಂಡದಲ್ಲಿರುವ ಸೋಮನ ಅಂಶವು ಆಯಾ ಜೀವಕ್ಕೆ ತೃಪ್ತಿಯನ್ನು ಉಂಟು ಮಾಡಿ, ವಿಶಿಷ್ಟ ಶಕ್ತಿಯನ್ನು ನೀಡಿ ಸದ್ಗತಿ ಪ್ರಾಪ್ತಿಗೆ ಸಹಾಯಕವಾಗುತ್ತದೆ. ತೃಪ್ತರಾದ ಪಿತೃಗಳು ಸಮೃದ್ಧಿ ಮತ್ತು ವಂಶವೃದ್ಧಿಗಾಗಿ ಹರಸುತ್ತಾರೆ. ಅಮಾವಾಸ್ಯೆ ಪಿತೃಗಳಿಗೆ ಮಧ್ಯಾಹ್ನ ಕಾಲ.

**ಅಮಾವಾಸ್ಯಾಂ ಹಿ ಪಿತರಃ ಪೌರ್ಣಮಾಸ್ಯಾಂ ಹಿ ದೇವತಾಃ ॥**
**ಮನ್ಮುಖೇನೈವ ಹವನಂ ಭುಂಜತೇ ಚ ಹುತಂ ಹವಿ ॥**

ಮಹಾಭಾರತದ ಆದಿಪರ್ವದಲ್ಲಿ ಅಗ್ನಿಯ ಉಕ್ತಿ. ಅಮಾವಾಸ್ಯೆ ಪಿತೃಕಾರ್ಯಗಳಿಗೂ ಪೌರ್ಣಮಿಯು ದೇವತಾ ಕಾರ್ಯಗಳಿಗೂ ಪ್ರಸಕ್ತವೆಂದು ಉಕ್ತವಾಗಿದೆ.



ಶ್ರಾದ್ಧದಲ್ಲಿ ತಿಲ ತರ್ಪಣ, ಪಿಂಡ ಪ್ರದಾನ, ಬ್ರಾಹ್ಮಣ ಭೋಜನ ಇವು ಉಪಕ್ರಿಯೆಗಳು. ಮೀಮಾಂಸಾದರ್ಶನದ ಶಾಬರ ಭಾಷ್ಯದಲ್ಲಿ

'ಅಗ್ನೇಯೋ ವೈ ಬ್ರಾಹ್ಮಣಃ ಎಂದು' ವ್ಯಾಖ್ಯಾನಿಸಿರುವುದರಿಂದ ಪಿತೃಗಳನ್ನು ಉದ್ದೇಶಿಸಿ ದತ್ತವಾದ ಕವ್ಯವನ್ನು ವೇದಶಾಸ್ತ್ರಾದಿಗಳನ್ನು ಅಧ್ಯಯನ ಮಾಡಿದ, ಸದಾಚಾರಿ ಬ್ರಾಹ್ಮಣನ ಜಠರಾಗ್ನಿಯು ಸೂಕ್ಷ್ಮ ರೂಪದಲ್ಲಿ ಪರಿವರ್ತಿಸಿ ಪಿತೃಗಳಿಗೆ ತಲುಪಿಸುತ್ತದೆ.

**ಪಾಂತಿ = ರಕ್ಷಂತಿ ಇತಿ ಪಿತರಃ**– ರಕ್ಷಿಸುವವರು ಎಂದು ಪಿತೃ ಶಬ್ದದ ಅರ್ಥ. ಶ್ರಾದ್ಧದಲ್ಲಿ ಮೂರು ತಲೆಮಾರಿನ ಪಿತೃಗಳನ್ನು ಆಹ್ವಾನಿಸಲಾಗುತ್ತದೆ. ನಾಲ್ಕನೆಯ ತಲೆಮಾರಿನ ಅನಂತರದ ಪಿತೃಗಳು ಲೋಕಾಂತರಕ್ಕೆ ಹೋಗುತ್ತಾರೆ.

'ವಿಧುರ್ದ್ವಭಾಗೇ ಪಿತರೋ ವಸಂತಿ' ಎಂಬ ಶಾಸ್ತ್ರ ವಚನದಂತೆ ಮೃತ ವ್ಯಕ್ತಿಯ ಸೂಕ್ಷ್ಮ ಶರೀರ ಚಂದ್ರ ಕಿರಣಗಳಿಂದ ಆಕರ್ಷಿಸಲ್ಪಡುತ್ತದೆ. ಗಮ್ಯಸ್ಥಾನವನ್ನು ತಲುಪುವ ಮಧ್ಯಾಂತರ ಸ್ಥಿತಿಯಲ್ಲಿ ಸೋಮಾಂಶವು ಕಡಿಮೆಯಾಗಿ ಶಕ್ತಿ ಕುಂದುತ್ತದೆ. ಶಕ್ತಿಯ ಹ್ರಾಸದಿಂದ ಪ್ರಾಪ್ತವಾಗಬಹುದಾದ ದುರ್ಗತಿ ನಿವಾರಣೆಗಾಗಿ ತಿಲತರ್ಪಣ, ಪಿಂಡ–ಪ್ರದಾನಾದಿಗಳನ್ನು ಮಾಡಬೇಕಾಗುತ್ತದೆ. ಎಳ್ಳು, ಅನ್ನ, ತುಪ್ಪ, ಹಾಲು, ಮೊಸರುಗಳ ನಿಯತ ಪ್ರಮಾಣವು ಜೇನುತುಪ್ಪದ ಸಹಾಯದಿಂದ ಸಂಯೋಗಗೊಂಡು ಉಂಟಾಗುವ ರಾಸಾಯನಿಕ ಪ್ರಕ್ರಿಯೆಯೊಂದಿಗೆ, ಮೃತ ವ್ಯಕ್ತಿಯ ಸಮೀಪದ ರಕ್ತ ಸಂಬಂಧಿಯ ಸಾಮೀಪ್ಯ ಕರಸ್ಪರ್ಶಾದಿಗಳಿಂದಲೂ, ಪಿಂಡದಾನ ಸಮಯದಲ್ಲಿ ಸಸ್ವರ ವೇದ–ಮಂತ್ರೋಚ್ಚಾರಣೆಯಿಂದಾಗಿಯೂ ಉತ್ಪನ್ನವಾದ ವಿದ್ಯುತ್‌ನಂಥ ನಿರ್ದಿಷ್ಟ ಆಕರ್ಷಕ ಶಕ್ತಿಯುಳ್ಳ ಸೋಮಾಂಶ ತರಂಗಗಳು ಸೂಕ್ಷ್ಮ ರೂಪದಲ್ಲಿರುವ ನಿರ್ದಿಷ್ಟ ಮೃತ ವ್ಯಕ್ತಿಯನ್ನು ಮಾತ್ರವೇ ತಲುಪುತ್ತವೆ. ಈ ಶಕ್ತಿ ತರಂಗಗಳು ಸೂಕ್ಷ್ಮ ದೇಹದಲ್ಲಿರುವ ಮೃತ ವ್ಯಕ್ತಿಯ ಗತಿಗೆ ಚಾಲನೆ ನೀಡುತ್ತವೆ.

ಮೃತ ವ್ಯಕ್ತಿಯ ಔರಸ ಸಂತಾನದ ಕರಸ್ಪರ್ಶದಿಂದಾಗುವ ಆಕರ್ಷಣಾ ಶಕ್ತಿ ಪ್ರಶಸ್ತವಾದುದು. ಯಾಕೆಂದರೆ ಆಕರ್ಷಣ ಶಕ್ತಿಯು ಸಜಾತೀಯ ಆಕರ್ಷಣೆಯಲ್ಲಿ ಮಾತ್ರವೇ ಪ್ರತಿನಿಯತವಾಗಿರುತ್ತದೆ. ವರ್ಣಸಂಕರವಾದಲ್ಲಿ ಸ್ವಪಿತೃ ಭಿನ್ನವೀರ್ಯದಿಂದ ಉತ್ಪನ್ನವಾದ ಸಂತತಿ ನೀಡುವ ಪಿಂಡ–ದಾನಾದಿಗಳಿಂದ ವೀರ್ಯದಾನಿಯಾದ ಪಿತೃವಿಗೆ ಮಾತ್ರವೇ ತೃಪ್ತಿಯಾಗುತ್ತದೆಯೇ ಹೊರತು ಕೇವಲ ನಾಮಗೋತ್ರ ಉಚ್ಚರಿಸುವ ಪಿತೃಗಳನ್ನು ತಲುಪುವ ಸೋಮಾಂಶ ಶಕ್ತಿ ಉತ್ಪನ್ನವಾಗುವುದಿಲ್ಲ. ಈ ಗೀತಾ ವಾಕ್ಯ ಇದನ್ನು ಸಮರ್ಥಿಸುತ್ತದೆ.

**ಸ್ತ್ರೀ ಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ।**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತ ಪಿಂಡೋದಕ ಕ್ರಿಯಾ ॥**

ಪಿತೃಋಣ ವಿಮೋಚನೆ ಮತ್ತು ಆತ್ಮೋನ್ನತಿಗಾಗಿ ಶ್ರಾದ್ಧ ಮಾಡಬೇಕು. ಪಿತೃಗಳಿಗೆ ಮೋಕ್ಷವಾಗಿದ್ದು, ಈ ಶ್ರಾದ್ಧಫಲ ಅವರಿಗೆ ಅಗತ್ಯವಿಲ್ಲದಿದ್ದರೂ, (ಅಂಚೆಯಿಂದ

ರವಾನಿಸಿದ ವಸ್ತುನಿರ್ದಿಷ್ಟ ವ್ಯಕ್ತಿಯನ್ನು ತಲುಪದೇ ಅಥವಾ ನಿರಾಕರಿಸಲ್ಪಟ್ಟು ಪ್ರೇಷಕನಿಗೇ ವಾಪಾಸು ಬರುವಂತೆ) ನಿಯತವಾದ ಫಲ ವ್ಯರ್ಥವಾಗದೆ ಕರ್ತೃವಿನ ಕರ್ಮಫಲವಾಗಿ ಅವನ ಖಾತೆಯಲ್ಲೇ ಸಂಚಿತವಾಗಿ ಉಳಿಯುತ್ತದೆ.

**ಯೋನಿಮನ್ಯೇ ಪ್ರಪದ್ಯಂತೇ ಶರೀರ ತ್ವಾಯ ದೇಹಿನಃ।**
**ಸ್ವಾಣು ಮನ್ಯೇನು ಸಂಯಾಂತಿ ಯಥಾ ಕರ್ಮ ಯಥಾಶ್ರುತಂ॥**

ಹೀಗೆ ನಚಿಕೇತೋಪಾಖ್ಯಾನದಲ್ಲಿ ಹೇಳಿದಂತೆ ತಮ್ಮ ತಮ್ಮ ಕರ್ಮ ಜ್ಞಾನಕ್ಕನು ಗುಣವಾಗಿ ಪ್ರತಿಯೊಂದು ಜೀವಿಯೂ ದೇವ–ಮನುಷ್ಯ–ಪಶು–ಪಕ್ಷಿ ಮೊದಲಾದ ಯೋನಿಗಳಲ್ಲೋ ವೃಕ್ಷಾದಿ ಸ್ಥಾವರ ರೂಪದಲ್ಲೋ ಮರುಹುಟ್ಟನ್ನು ಪಡೆಯುತ್ತಾನೆ.

**ದೇವೋ ಯದಿ ಪಿತಾ ಜಾತಃ ಶುಭ ಕರ್ಮಾನುಯೋಗತಃ।**
**ತಸ್ಯಾನ್ನಮಮೃತಂ ಭೂತ್ವಾ ದೇವತ್ವೇ ಷ್ವನುಗಚ್ಛತಿ॥**
**ಗಂಧರ್ವೇಭೋಗರೂಪೇಣ ಪಶುತ್ವೇ ಚ ತೃಣಂ ಭವೇತ್।**
**ಮನುಷ್ಯತ್ವೇ ನ್ನಪಾನಾದಿ ನಾನಾ ಸೌಖ್ಯ ಕರಂ ಭವೇತ್॥**

**ತ್ವಮಗ್ನೇ! ಈಡಿತಃ**

✶ ✶ ✶ ✶

**ಕವ್ಯವಾಹನೋSSSವಾಡ್ ಹವ್ಯಾನಿ।**
**ಸುರಭೀಣಿ ಕೃತ್ವಾ ಪ್ರಾದಾಃ ಪಿತೃಭ್ಯಃ ಸ್ವಧಯಾ ತೇS ಕ್ಷನ್॥**

**ಯಜು.ವಾ.ಸಂ.**

ಪಿತೃಗಳನ್ನು ಉದ್ದೇಶಿಸಿದ ತಿಲತರ್ಪಣ ಪಿಂಡ ಪ್ರದಾನಾದಿಗಳ ಫಲವನ್ನು ಭಗವಂತನು ಆಯಾ ಸ್ವರೂಪದಲ್ಲಿರುವ ಜೀವಿಗಳಿಗೆ ತಕ್ಕಂತೆ ಮಾರ್ಪಡಿಸಿ ತಲುಪಿಸುತ್ತಾನೆ. ಅಂಚೆಯ ಮೂಲಕ ಕಳಿಸುವ ಮನಿ ಆರ್ಡರಾಗಲೀ, ತಂತಿ ಸಂದೇಶ ವಾಗಲೀ ಮೂಲ ದ್ರವ್ಯ. ಮೂಲಪ್ರತಿ ಅಂಚೆ ಕಚೇರಿಯಲ್ಲೇ ಉಳಿದರೂ ವಿಳಾಸದಾರ ರನ್ನು ಹುಡುಕಿ ತಲುಪಿಸಲಾಗುತ್ತದೆ. ದೇಶಾಂತರದಲ್ಲಿರುವ ವ್ಯಕ್ತಿಗೆ ವಿದೇಶೀ ಹಣದ ರೂಪದಲ್ಲೇ ಪ್ರಾಪ್ತಿಯಾಗುತ್ತದೆ. ಮೊದಲು ಸ್ವೀಕರಿಸುವ ಅಂಚೆ ಅಧಿಕಾರಿ ಬೇರೆ. ಆ ವಿಳಾಸದಲ್ಲಿ ಆ ವ್ಯಕ್ತಿ ಸಿಗದಿದ್ದರೆ ಬೇರೆ ವಿಳಾಸಕ್ಕೆ ರೀ ಡೈರೆಕ್ಟ್ ಮಾಡುವ ಅಧಿಕಾರಿ ಬೇರೆ. ಮುಂದಿನ ಕಚೇರಿಯಲ್ಲಿ ಸಂದೇಶವನ್ನು ಸ್ವೀಕರಿಸುವ ಅಧಿಕಾರಿ ಬೇರೆ. ಆದರೂ ಮೂಲದ್ರವ್ಯದ ಫಲ (ಅವಶ್ಯವಿದ್ದಂತೆ ರೂಪಾಂತರ ಹೊಂದಿ) ಮತ್ತು ತಂತಿಯ ಸಂದೇಶ ನಿಯತ ವ್ಯಕ್ತಿಯನ್ನು ತಲುಪುತ್ತದೆ. ಹಾಗೆಯೇ ಕರ್ತೃ ನೀಡಿದ ಪಿಂಡದಾನದ ಮೂಲದ್ರವ್ಯ ಇಲ್ಲಿಯೇ ಉಳಿದರೂ ಅದರ ಫಲ ಮಾತ್ರವೇ ಅವಶ್ಯಕ ಪರಿವರ್ತನೆ ಯೊಂದಿಗೆ ನಿರ್ದಿಷ್ಟ ಮೃತ ವ್ಯಕ್ತಿಗೆ ತಲುಪಿಸಲ್ಪಡುತ್ತದೆ. ರೇಡಿಯೋ ತರಂಗಗಳನ್ನು ರೇಡಿಯೋ ಯಂತ್ರ ಮಾತ್ರ ಗ್ರಹಿಸಬಲ್ಲದು. ಅಂತೆಯೇ ನಾಮಗೋತ್ರೋಚ್ಚಾರಣೆಯ ಮೂಲಕ ಮೃತ ವ್ಯಕ್ತಿಯನ್ನು ಉದ್ದೇಶಿಸಿ ಮಾಡುವ ತಿಲತರ್ಪಣ, ಬ್ರಾಹ್ಮಣ ಭೋಜನಾದಿಗಳು ಸೂಕ್ಷ್ಮ ರೂಪದಲ್ಲಿ ಪರಿವರ್ತಿತವಾಗಿ ಆಕರ್ಷಣಾ ಶಕ್ತಿಯಿಂದ ಸೂಕ್ಷ್ಮ ರೂಪದಲ್ಲಿರುವ ಮೃತ ವ್ಯಕ್ತಿಯನ್ನು ಮಾತ್ರವೇ ತಲುಪುತ್ತವೆ. ಆದುದರಿಂದ ಸ್ಥೂಲ



ಶರೀರಿಯಾದ ಜೀವಂತ ವ್ಯಕ್ತಿಯನ್ನು ಕುರಿತು ಶ್ರಾದ್ಧ ಮಾಡಬೇಕಾಗಿಲ್ಲ. ಅಂಥ ಶ್ರಾದ್ಧದ ಫಲ ಜೀವಂತ ವ್ಯಕ್ತಿಯನ್ನು ನೇರವಾಗಿ ತಲುಪುವ ಶಕ್ತಿಯನ್ನು ಹೊಂದಿರುವುದಿಲ್ಲ. ಪ್ರಸಾರವೇ ಇಲ್ಲದಿರುವಾಗ ರೇಡಿಯೋ ಏನನ್ನೂ ಗ್ರಹಿಸುವುದಿಲ್ಲ. ಹಾಗೆಯೇ ಅರ್ಹರಾಗಿರುವ ಪುತ್ರ ಪೌತ್ರಾದಿಗಳು ತಿಲ ತರ್ಪಣಾದಿಗಳನ್ನು ನೀಡದಿದ್ದಾಗ ಪಿತೃಗಳು ಸ್ವೀಕರಿಸುವ ಪ್ರಶ್ನೆಯೇ ಇರುವುದಿಲ್ಲ.

ಮೊದಲೇ ಪ್ರಸ್ತಾವಿಸಿದಂತೆ ಶ್ರಾದ್ಧ ಪ್ರಕ್ರಿಯೆಯಲ್ಲಿ ಶ್ರದ್ಧೆ–ನಂಬಿಕೆಗಳೇ ಪ್ರಧಾನ. ನಮಗೆ ಪ್ರತ್ಯಕ್ಷ ಗೋಚರಿಸದ ಸಂಗತಿಗಳನ್ನು ಪ್ರಾಚೀನ ಮಹರ್ಷಿಗಳು ಜ್ಞಾನರಾಶಿಯಾದ ವೇದಗಳ, ಶಾಸ್ತ್ರಗಳ ಪ್ರಮಾಣದಿಂದ, ದೃಷ್ಟಾಂತಗಳಿಂದ, ಊಹೆಯಿಂದ ಅರಿತುಕೊಂಡು ಶ್ರೇಯೋ ಮಾರ್ಗದಲ್ಲಿ ನಡೆಯುತ್ತಿದ್ದರು.

**ಪ್ರತ್ಯಕ್ಷೇಣಾನು ಮಾನೇನ ಯಸ್ತೂಪಾಯೋ ನ ಬುದ್ಧ್ಯತೇ**
**ಏನಂ ವಿಂದಂತಿ ವೇದೇನ ತಸ್ಮಾದ್ ವೇದಸ್ಯ ವೇದತಾ॥**

ಎಂಬ ಉಕ್ತಿಯಂತೆ ಪ್ರತ್ಯಕ್ಷ ಅಥವಾ ಅನುಮಾನದಿಂದ ತಿಳಿಯಲಾಗದ ಅಲೌಕಿಕ ಸಾಧನೆಯ ಮಹತ್ತ್ವವನ್ನು ವೇದಗಳಿಂದ ತಿಳಿದುಕೊಳ್ಳಬೇಕು. ಆದುದರಿಂದ ವೇದೋಕ್ತ ವಾದ ಕ್ರಿಯೆಗಳ ಅನುಷ್ಠಾನದ ನಂಬಿಕೆಯೇ ಭಾರತೀಯರ ಬದುಕಿನ ರಹಸ್ಯ. ಅದೇ ಶ್ರೇಯಸ್ಸಿನ ದಾರಿ. ಜೀವನದ ಸಾರ್ಥಕತೆ, ಧರ್ಮಾನುಷ್ಠಾನದಿಂದ ಪ್ರತ್ಯಕ್ಷ ಲಾಭ ಗೋಚರಿಸದಿದ್ದರೂ ನಷ್ಟವಂತೂ ಇಲ್ಲ.

# ಯತ್ರ ನಾರ್ಯಸ್ತು ಪೂಜ್ಯಂತೇ

ನಮ್ಮ ಸಮಾಜದಲ್ಲಿ ಪಿತೃಪ್ರಧಾನ ಕುಟುಂಬ ಮತ್ತು ಮಾತೃ ಪ್ರಧಾನ ಕುಟುಂಬಗಳೆಂದು ಎರಡು ಪಂಗಡಗಳಿವೆ. ಮಾತೃ ಪ್ರಧಾನ ಕುಟುಂಬಗಳು ಬೆರಳೆಣಿಕೆಯಷ್ಟು ಮಾತ್ರ. ಇವರ ಮಗ, ಇವರ ಮೊಮ್ಮಗ, ಇವರ ಮರಿಮಗ ಎಂದು ಹೆಸರಿಸುವಾಗ ಪುರುಷ ಪ್ರಧಾನವಾಗಿ ವ್ಯವಹರಿಸುವುದು ರೂಢಿ. ಕುಟುಂಬದ ಯಜಮಾನನನ್ನು ಹೆಸರಿಸಿ ಮಿಸ್ಟರ್ ರಾಬರ್ಟ್, ಮಿಸೆಸ್ ರಾಬರ್ಟ್ (ಹೆಂಡತಿ), ಮಾಸ್ಟರ್ ರಾಬರ್ಟ್ (ಮಗ), ಮಿಸ್ ರಾಬರ್ಟ್ (ಮಗಳು) ಎಂದು ಕುಟುಂಬದ ಇತರ ಸದಸ್ಯರನ್ನು ಕರೆಯುವ ರೂಢಿ ಆಂಗ್ಲರಲ್ಲಿದೆ. ಆದರೆ ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆಯಲ್ಲಿದ್ದರೂ ನಮ್ಮ ಪರಂಪರೆಯಲ್ಲಿ ಸ್ತ್ರೀಯರಿಗೇ ಆದ್ಯತೆಯೆಂಬುದನ್ನು ಶಾಸ್ತ್ರಗಳು ಪ್ರತಿಪಾದಿಸುತ್ತವೆ.

**ಪೃಥಿವ್ಯಾಂ ಯಾನಿ ತೀರ್ಥಾನಿ ಸತಿ ಪಾದೇಷುತಾನ್ಯಪಿ।**
**ತೇಜಶ್ಚ ಸರ್ವದೇವಾನಾಂ ಮುನೀನಾಂ ಸತೀಸು ವೈ।**
**ಸತೀನಾಂ ಪಾದ ರಜಸಾ ಸದ್ಯಃ ಪೂತಾ ವಸುಂಧರಾ॥**

"ಭೂಮಿಯ ಎಲ್ಲ ತೀರ್ಥಗಳೂ ಪತಿವ್ರತೆಯರ ಪಾದಗಳಲ್ಲಿವೆ. ಮುನಿಪತ್ನಿಯರ ಚರಣಗಳಲ್ಲಿ ಸಮಸ್ತ ದೇವತೆಗಳ ತೇಜಸ್ಸೂ ಇರುತ್ತದೆ. ನಾರಿಮಣಿಯರ ಪಾದಧೂಳಿ ಯಿಂದ ಭೂಮಿ ಪವಿತ್ರವಾಗುತ್ತದೆ" ಎಂಬುದು ಬ್ರಹ್ಮವೈವರ್ತ ಪುರಾಣದ ಉಕ್ತಿ. ಮಂಗಲದ್ರವ್ಯಗಳನ್ನು ಹಿಡಿದ ಸ್ತ್ರೀ ಬಲಗಾಲನ್ನು ಮುಂದಿಟ್ಟು ಮೊದಲು ಪ್ರವೇಶ ಮಾಡಿದ ಮನೆ ಮಂದಿರಗಳು ನಿತ್ಯ ಪವಿತ್ರವಾಗಿರುತ್ತವೆ ಎಂಬುದಕ್ಕೆ ಇದು ಉದಾಹರಣೆ.

ಜಗಜ್ಜನನಿ ಸಕಲ ಚರಾಚರಗಳಲ್ಲಿ ಮಾತೃರೂಪದಿಂದ ವ್ಯಾಪಿಸಿದ್ದಾಳೆಂದು (ಯಾದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ)ಸಪ್ತಶತಿಯಲ್ಲಿ ಜಗತ್ತಿನ ಸೃಷ್ಟಿ ಸ್ಥಿತಿಲಯಗಳಿಗೆ ಮೂಲಕಾರಣವಾದ ಶಕ್ತಿಯನ್ನು ವರ್ಣಿಸಲಾಗಿದೆ. ಈ ಶಕ್ತಿ ಪ್ರಕೃತಿ ಮತ್ತು ಪುರುಷ ರೂಪದಲ್ಲಿ ಜಗತ್ತಿನ ಸೃಷ್ಟಿಯ ನಿರಂತರತೆಗೆ ಸಾಕ್ಷಿಯಾಗಿರುತ್ತದೆ. ಸೃಷ್ಟಿ ಕ್ರಿಯೆಯಲ್ಲಿ ಪ್ರಕೃತಿಯೊಡನೆ ಸಂಯೋಗದಲ್ಲಿ ಮಾತ್ರ ಪುರುಷನ ಪಾತ್ರ ಮುಗಿಯುತ್ತದೆ. ಮುಂದಿನದೆಲ್ಲ ತಾಯಿಯದು. ಗರ್ಭಧಾರಣೆ, ಪ್ರಸವ, ಪಾಲನೆ–ಪೋಷಣೆ, ಗಂಡನ ಮನೆಗೆ ಕಳುಹಿಸುವ ತನಕ ಅಥವಾ ಚಿಗುರುಮೀಸೆಯವನಾಗಿ ಸ್ವತಂತ್ರ ವ್ಯವಹಾರಕ್ಕೆ ಸಿದ್ಧನಾಗುವ ತನಕ ತಾಯಿಯದೇ ಪೂರ್ಣ ಜವಾಬ್ದಾರಿ. ಮನುಷ್ಯನು ತಾಯಿಯನ್ನು ವಂದಿಸಿದರೆ ಯಶಸ್ಸು, ಸ್ವರ್ಗಸುಖ, ಕೀರ್ತಿ, ಪುಣ್ಯ, ಶಕ್ತಿ, ಪಶುಸಂಪತ್ತು, ಐಶ್ವರ್ಯ, ಧಾನ್ಯಾದಿಗಳು ಎಲ್ಲವನ್ನೂ ಪಡೆಯುತ್ತಾನೆಂದು ಈ ಕೆಳಗಿನ ಉಕ್ತಿಯಿಂದ ತಿಳಿಯುತ್ತದೆ.

**ಆಯುಃಪುಮಾನ್ ಯಶಃ ಸ್ವರ್ಗಂ ಕೀರ್ತಿಂ ಪುಣ್ಯಂ ಬಲಂ ಶ್ರಿಯಂ।**
**ಪಶುಂ ಸುಖಂ ಧನಂ ಧಾನ್ಯಂ ಪ್ರಾಪ್ನುಯಾನ್ಮಾತೃವಂದನಾತ್ ॥**

ವೇದಗಳಾಗಲೀ ಇತರೆ ಸಾಹಿತ್ಯಗಳಾಗಲೀ ಸೃಷ್ಟಿಯ ಆರಂಭದಿಮದಲೇ ಮಾತೃ ಹೃದಯದ ವಾತ್ಸಲ್ಯಕ್ಕೆ ಹೋಲಿಕೆಯಿಲ್ಲವೆಂದು ಸಾರುತ್ತಲೇ ಬಂದಿವೆ. "ನನ್ನ ಸಂತಾನ ಚಿರಾಯುವಾಗಿರಬೇಕು, ಆರೋಗ್ಯವಂತನೂ, ಧಾರ್ಮಿಕನೂ, ವಿದ್ವಾಂಸನೂ, ಶಕ್ತಿ ವಂತನೂ, ಸಿರಿವಂತನೂ ಮತ್ತು ಸರ್ವಗುಣ ಸಂಪನ್ನನೂ ಆಗಿರಬೇಕೆಂದು ಸ್ನೇಹಾರ್ದ್ರ ಹೃದಯಿಯಾಗಿ ಪ್ರತಿಯೊಬ್ಬ ತಾಯಿಯೂ ನಿರಂತರ ಹಂಬಲಿಸುತ್ತಲೇ ಇರುತ್ತಾಳೆ. ಆದ್ದರಿಂದಲೇ ಆಕೆ ದೇವತೆ ಎಂದು (ಮಾತೃದೇವೋ ಭವ) ಉಪನಿಷತ್ತು ಹೇಳುತ್ತದೆ. ಕೆಟ್ಟಮಗು ಹುಟ್ಟಬಹುದು ಅಥವಾ ಹುಟ್ಟಿದ ಮಗ ಕೆಟ್ಟವನಾಗಿ ಬೆಳೆಯಬಹುದು. ಆದರೆ ತಾಯಿ ಮಾತ್ರ ಎಂದೆಂದಿಗೂ ಕೆಟ್ಟವಳಾಗಲಾರಳು (ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ) ಎಂಬ ಶಂಕರ ಭಗವತ್ಪಾದರ ಅಮೃತವಾಣಿ ಜಗತ್ಪ್ರಸಿದ್ಧವಾಗಿದೆ.

**ಪ್ರಜಾನಾರ್ಥಂ ಮಹಾಭಾಗಾಃ ಪೂಜಾರ್ಹಾ ಗೃಹದೀಪ್ತಯಃ।**
**ಪಶುಂ ಸುಖಂ ಧನಂ ಧಾನ್ಯಂ ಪ್ರಾಪ್ನುಯಾನ್ಮಾತೃವಂದನಾತ್ ॥**

ಸ್ತ್ರೀಯರು ರಕ್ಷಣಾರ್ಥವಾಗಿ ಬಹುದೋಷಪ್ರಚುರರಾದರೂ, ಪುರುಷರಿಗೆ ಉಪಕಾರ ಕರಾಗಿರುತ್ತಾರೆ. ಸಂತಾನಕ್ಕೆ ಜನ್ಮ ನೀಡುವುದರಿಂದ ಭಾಗ್ಯವತಿಯರೂ, ವಸ್ತ್ರಾಲಂಕಾರ ದಾನದಿಂದ ಪೂಜಾರ್ಹರೂ ಗೃಹಕ್ಕೆ ಶೋಭೆಯನ್ನುಂಟುಮಾಡುವಲ್ಲಿ ಲಕ್ಷ್ಮೀದೇವಿಗೆ ಸರಿಯಾದವರೂ ಆಗಿರುತ್ತಾರೆ. ಅವರಿಬ್ಬರಲ್ಲಿ (ಪತ್ನಿ ಮತ್ತು ಶ್ರೀಲಕ್ಷ್ಮೀ) ಭೇದವಿಲ್ಲ. ಮನುಸ್ಮೃತಿ 9–26



"ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರದೇವತಾಃ" ಎಂಬ ಮನುಸ್ಮೃತಿಯ ಉಕ್ತಿ ತುಂಬಾ ಪ್ರಸಿದ್ಧವಾಗಿದೆ. ಸ್ತ್ರೀಯರು ಗೌರವಿಸಲ್ಪಡುವ ಜಾಗದಲ್ಲಿ ದೇವತೆಗಳು ನಲಿದಾಡುತ್ತಿರುತ್ತಾರೆ. ಸ್ತ್ರೀಯರಿಗೆ ಗೌರವವಿಲ್ಲದ ಎಲ್ಲ ಕಾರ್ಯಗಳೂ ವಿಫಲವಾಗುತ್ತವೆ. ಮನುಸ್ಮೃತಿಯಲ್ಲಿ ವರ್ಣಿತವಾದ ಸ್ತ್ರೀಯರ ಗೌರವವನ್ನು ಕುರಿತು 'ನೀತ್ಸೆ' ಎಂಬ ವಿದ್ವಾಂಸರ ಉದ್ಗಾರ ಹೀಗಿದೆ:

"I know of no book in which so many delicate and kindly things are said of the woman as in the law-book of Manu; these old grayheads and saints have a manner of being gallant to woman which perhaps cannot be surpassed."

ತಾಯಿ ತನ್ನ ಮಕ್ಕಳ ಅನೇಕ ವಿಷಯಗಳನ್ನು ಹಗುರವಾಗಿ ನಕ್ಕು ತೇಲಿಸಿ ಬಿಡುತ್ತಾಳೆ. ಆದರೆ ಸಮಾಜದ ಕಹಿಯನ್ನುಂಡ ನಾರಿ ನಿಜವಾಗಿ ಮುನಿದರೆ ಮಾರಿಯಾಗುತ್ತಾಳೆ. ಆಕೆ ಮಹಾ ತ್ರಿಪುರ ಸುಂದರಿಯೂ ಹೌದು, ಮಹಾಕಾಳಿಯೂ ಹೌದು. ಮಹಾಭಾರತದ ಅನುಶಾಸನಪರ್ವದಲ್ಲಿ ಸ್ತ್ರೀಯ ಇನ್ನೊಂದು ಮುಖವನ್ನು ಹೀಗೆ ವರ್ಣಿಸಲಾಗಿದೆ.

ಪಂಚಚೂಡಾ ಎಂಬ ಅಪ್ಸರೆ ನಾರದರಿಗೆ ಸ್ತ್ರೀಯರ ದೋಷಗಳನ್ನು ನಿರೂಪಿಸುತ್ತಾ ಹೇಳುತ್ತಾಳೆ

**ಅಂತಕಃ ಪವನೋ ಮೃತ್ಯುಃ ಪಾತಾಲಂ ವಡವಾ ಮುಖಂ।**
**ಕ್ಷುರಧಾರಾ ವಿಷಂ ಸರ್ಪಃ ವಹ್ನಿರಿತ್ಯೇಕತಃ ಸ್ತ್ರೀಯಃ ॥**

ವಿನಾಶಕಾರಿಗಳಾದ ಯಮ, ಬಿರುಗಾಳಿ, ಮೃತ್ಯು, ಪಾತಾಳ, ಬಡಬಾನಲ (ಸಮುದ್ರ ಮಧ್ಯದ ಪ್ರಳಯಾಗ್ನಿ) ಕತ್ತಿಯ ಅಲಗು, ವಿಷ, ಸರ್ಪ ಮತ್ತು ಅಗ್ನಿ ಇವೆಲ್ಲವೂ ಸೇರಿ ಒಂದು ತೂಕವಾದರೆ ಸ್ತ್ರೀಯೊಬ್ಬಳದೇ ಒಂದು ತೂಕ. ಎರಡೂ ಸಮವಾಗಿರುತ್ತವೆ.

ಅನುಶಾಸನ ಪರ್ವ 38/29

ವೈದಿಕ ಕಾಲದಲ್ಲಿ ಗಾರ್ಗೇಯೀ, ಮೈತ್ರೇಯೀ, ಸುಲಭಾ, ಆರುಂಧತೀ, ಆತ್ರೇಯೀ, ಅನಸೂಯಾ ಮೊದಲಾದ ಬ್ರಹ್ಮವಾದಿನಿಯರಿದ್ದರು. ಅನೇಕ ಋಷಿಕೆಯರು ಮಂತ್ರದೃಷ್ಟಾರ ಮಹರ್ಷಿಗಳ ಸಾಲಿನಲ್ಲಿದ್ದಾರೆ. ದೇವಾಸುರ ಸಂಗ್ರಾಮದಲ್ಲಿ ಇಂದ್ರನ ಸಹಾಯಕ್ಕಾಗಿ ಹೋದ ದಶರಥನ ರಥದ ಗಾಲಿಯನ್ನು ಸಂಭಾಳಿಸಿದ ಕೈಕೇಯಿ ವಿಜಯಕ್ಕೆ ಕಾರಣಳಾದ ಘಟನೆ ರಾಮಾಯಣದಲ್ಲಿ ಉಲ್ಲೇಖಿಸಲ್ಪಟ್ಟಿದೆ. ದ್ವಾಪರದಲ್ಲಿ ಕೃಷ್ಣನ ಜತೆಗೆ ಗರುಡಾರೂಢಳಾಗಿ ಸತ್ಯಭಾಮೆ ಯುದ್ಧಕ್ಷೇತ್ರಕ್ಕೆ ಹೋಗುತ್ತಿದ್ದುದಾಗಿ ವರ್ಣಿತವಾಗಿದೆ. ಕೃಷ್ಣ ಸೋದರಿ ಸುಭದ್ರೆಯೂ ಅರ್ಜುನನ ರಥದ ಸಾರಥಿಯಾಗಿ ಯುದ್ಧದಲ್ಲಿ ಭಾಗಿಯಾಗುತ್ತಿದ್ದಳಂತೆ. ಹರಿಹರಾದಿಗಳನ್ನು ಸೋಲಿಸಿ ಬೀಗುತ್ತಿದ್ದ ಮಹಿಷ–ಶುಂಭ–ನಿಶುಂಭಾದಿ ರಾಕ್ಷಸ ಪಡೆಯನ್ನು ಸಂಹರಿಸಿದ ದೇವಿ ಸ್ತ್ರೀಶಕ್ತಿಯ ಮಹಿಮೆ ಸಪ್ತಶತಿಯಲ್ಲಿ ವಿಸ್ತಾರವಾಗಿದೆ.

ಇತಿಹಾಸದ ಪುಟಗಳಲ್ಲಿ ಮಿಂಚಿದ ಝಾನ್ಸಿ ಲಕ್ಷ್ಮೀಬಾಯಿ, ರಾಣಿ ಅಬ್ಬಕ್ಕ, ಕಿತ್ತೂರ ರಾಣಿ ಚೆನ್ನಮ್ಮ ಮೊದಲಾದ ದೇಶಪ್ರೇಮಿ ವೀರವನಿತೆಯರನ್ನು ಮರೆಯಲಾದೀತೇ?

# ಪುರೋಹಿತ – ಪೌರೋಹಿತ್ಯ

## ದಾನ ದಕ್ಷಿಣೆ ಇತ್ಯಾದಿ

**ಪುರೋಹಿತ** ಎಂಬ ಸಮಸ್ತ ಪದದಲ್ಲಿ ಪುರಃ + ಹಿತ ಎಂಬ ಎರಡು ಪದಗಳಿವೆ. ಪುರಃ ಎಂದರೆ ಮುಂಭಾಗ, ಮೊದಲು ಮತ್ತು ಹಿತ ಎಂದರೆ ಒಳಿತು, ಶ್ರೇಯಸ್ಸು ತೃಪ್ತಿ, ಲಾಭ ಎಂಬ ಅನೇಕ ಅರ್ಥಗಳಿವೆ. ಆದ್ದರಿಂದ ಈ ಪದ ನಿರ್ದಿಷ್ಟ ಕರ್ತೃವಿನ ಒಳಿತನ್ನು, ಶ್ರೇಯಸ್ಸನ್ನು ಬಯಸುವುದರಲ್ಲಿ, ಆತನ ಮನೋಭಿಲಾಷೆಯನ್ನು ತೃಪ್ತಿಪಡಿಸುವಲ್ಲಿ, ಆತನಿಗೆ ಲಾಭದಾಯಕವಾದುದನ್ನು ಸೂಚಿಸುವುದರಲ್ಲಿ ಮುಂಚೂಣಿಯಲ್ಲಿರುವವನು, ಮೊದಲಿಗ ಎಂಬ ಅರ್ಥವ್ಯಾಪ್ತಿಯನ್ನು ಹೊಂದಿದೆ. ಪುರ ಎಂಬುದಕ್ಕೆ ಪಟ್ಟಣ ಎಂದೂ ಅರ್ಥವಿದೆ. ಊರಿನ ಹಿತ ಬಯಸವವನು ಎಂದು ಅರ್ಥೈಸಿದರೂ ತಪ್ಪಲ್ಲ. ಪುರೋಹಿತನನ್ನು ಆಚಾರ್ಯ ಎಂದೂ ಶಾಸ್ತ್ರೀ ಎಂದೂ ವ್ಯವಹರಿಸುವುದುಂಟು. "ಆಚಿನೋತಿ ಆಚಾರಾನ್, ಸ್ವಯಮಾಚರತಿ ಚ" – ಸದಾಚಾರವನ್ನು ಅರಿತು, ತನ್ನ ಸ್ವಂತ ಆಚರಣೆಯಿಂದ ಇತರರಿಗೆ ಬೋಧಿಸುವವನು ಆಚಾರ್ಯ. ಶಾಸ್ತ್ರದಲ್ಲಿ ವಿಧಿ, ನಿಷೇಧವೆಂದು ಮುಖ್ಯವಾಗಿ ಎರಡು ವಿಧ. ಮಾಡಬಹುದಾದುದು, ಮಾಡಲೇ ಬೇಕಾದುದು ವಿಧಿ. ಮಾಡಬಾರದುದು ನಿಷೇಧ. ಈ ಎರಡನ್ನೂ ಅರಿತುಕೊಂಡು ತಿಳಿಯ ಹೇಳುವವ ಶಾಸ್ತ್ರವೇತ್ತನು ಅಂದರೆ ಶಾಸ್ತ್ರಿ. ಈ ಎಲ್ಲ ಲಕ್ಷಣಗಳೂ ಪುರೋಹಿತನಿಗೆ ಅನ್ವಯವಾಗುತ್ತವೆ. ಈತ ನಿರ್ವಹಿಸುವ ಕಾರ್ಯವೇ ಪೌರೋಹಿತ್ಯ.

ಪುರೋಹಿತನು ತನ್ನ ಅನುಷ್ಠಾನ ಬಲದಿಂದ ಶಿಷ್ಯರನ್ನು ಅನುಗ್ರಹಿಸುವ, ಆಶೀರ್ವಚಿಸುವ ಶಕ್ತಿಯನ್ನೂ ವೃತ್ತಿಗೆ ಅವಶ್ಯಕವಾದ ಅರ್ಹತೆಯನ್ನೂ ಗಳಿಸಿರಬೇಕು. ಅಧ್ಯಯನ ಸಂಪನ್ನನಾಗಿರಬೇಕು. ಸದಾಚಾರಿಯಾಗಿ ನಿರಂತರ ಅಧ್ಯಯನ ಶೀಲನಾಗಿರುವವನ ಆಶೀರ್ವಾದ ಮಾತ್ರವೇ ಫಲಿಸುತ್ತದೆ.

"ಆಚಾರ ಹೀನಂ ನ ಪುನಂತಿ ವೇದಾಃ", ಯವಕ್ರೀತನು ಭರದ್ವಾಜರ ಮಗ. ಬ್ರಾಹ್ಮಣ ಸಮುದಾಯದ ಅನಾದರಣೆಯಿಂದ ಬೇಸರಗೊಂಡು ಘೋರ ತಪಸ್ಸಿನ ಮೂಲಕ ವಾಗಿಯೇ ಸ್ವಯಂ ಅಧ್ಯಯನ ಸಂಪನ್ನನಾದ. ಅಹಂಕಾರದಿಂದ ಋಷಿಮುನಿಗಳನ್ನು ಅವಮಾನ ಪಡಿಸತೊಡಗಿದ. ತಂದೆಯ ಸ್ನೇಹಿತನಾದ ರೈಭ್ಯನ ಜ್ಯೇಷ್ಠ ಪುತ್ರ ಪರಾವಸುವಿನ ಪತ್ನಿಯೊಡನೆ ಅತ್ಯಾಚಾರಕ್ಕೆ ಪ್ರಯತ್ನಿಸಿದ. ರೈಭ್ಯನ ಕೋಪಾಗ್ನಿಯಿಂದ ಅವಿರ್ಭವಿಸಿದ. . .ರೈಭ್ಯನ ಸೊಸೆಯನ್ನೇ ಹೋಲುವ ತರುಣಿ ಯವಕ್ರೀತನನ್ನು ಮೋಹಿಸಿ ಆತನ ಮಂತ್ರ ಜಲಪೂರಿತವಾದ ಕಮಂಡಲವನ್ನು ಅಪಹರಿಸಿದಳು. ರೈಭ್ಯನ ಅದೇ ಕೋಪಾಗ್ನಿಯಿಂದ ಉದ್ಭವಿಸಿದ ರಾಕ್ಷಸ ಯವಕ್ರೀತನನ್ನು ಕೊಲ್ಲಲು ಉದ್ಯುಕ್ತನಾದ. ತನ್ನ ಕಮಂಡಲದ ಮಂತ್ರ ಪೂತ ಜಲವಿದ್ದಿದ್ದರೆ ಯವಕ್ರೀತ ಮಂತ್ರಬಲದಿಂದ ಎಂತಹ ಭೀಕರ ರಾಕ್ಷಸ ಶಕ್ತಿಯನ್ನೂ ಕ್ಷಣ ಮಾತ್ರದಲ್ಲಿ ದಹಿಸಿಬಿಡುತ್ತಿದ್ದ. (ಪ್ರಾಚೀನ ಕಾಲದ ವೈದಿಕ ವಿದ್ವಾಂಸರು ಮಾರ್ಗ ಕ್ರಮಿಸುವಾಗಲೂ ಸಹ ಸದಾ ಶುಚಿಯಾಗಿ ಮತ್ತು ಮಂತ್ರ

ಬಲಸಂಪನ್ನರಾಗಿರುವ ಉದ್ದೇಶದಿಂದ ಶುದ್ಧ ಜಲಪೂರಿತವಾದ ಪಂಚಪಾತ್ರೆಯನ್ನು ಧರಿಸಿಯೇ ಇರುತ್ತಿದ್ದರು) ಅಟ್ಟಿಸಿಕೊಂಡು ಬರುತ್ತಿದ್ದ ರಾಕ್ಷಸನಿಂದ ತಪ್ಪಿಸಿಕೊಳ್ಳಲು, ಅಭಿಮಂತ್ರಿಸುವ ಸಲುವಾಗಿ ನೀರನ್ನು ಹುಡುಕುತ್ತಾ ಎಲ್ಲೆಲ್ಲ ಓಡಿದರೂ ನೀರು ಸಿಗಲೇ ಇಲ್ಲ. ಓಡುತ್ತಾ ತಂದೆಯ ಯಾಗಶಾಲೆ ಯನ್ನು ಪ್ರವೇಶಿಸುವಷ್ಟರಲ್ಲಿ ಯಾಗಶಾಲೆಯ ಕುರುಡು ಕಾವಲುಗಾರ ವಿಧಿಚೋದಿತನಾಗಿ ಯವಕ್ರೀತನನ್ನು ತಡೆದು ನಿಲ್ಲಿಸಿದ. ಅಶುಚಿ ಸಂಪರ್ಕದಿಂದ ಮತ್ತಷ್ಟು ಅಶುಚಿತ್ವ ವುಂಟಾದುದರಿಂದ ರಾಕ್ಷಸ ಕೂಡಲೇ ಶೂಲದಿಂದ ಇರಿದು ಆತನನ್ನು ಸಾಯಿಸಿದ. ಸದಾಚಾರ ಸಂಪನ್ನತೆ, ಅಧ್ಯಯನ ಶೀಲತೆ ಮತ್ತು ಶುಚಿತ್ವ ಇವು ಪುರೋಹಿತನ ಕೆಲವು ಲಕ್ಷಣಗಳು.

ಅನುಷ್ಠಾನದಿಂದ ಸ್ವತಃ ಶಕ್ತಿಗಳಿಸಿಕೊಳ್ಳದೇ ಇರುವವನು ಶಿಷ್ಯನ ಕಷ್ಟವನ್ನು ಪಾಪವನ್ನು ಪರಿಹರಿಸಲಾರ. ಹಾಗೆಂದ ಮಾತ್ರಕ್ಕೆ ಯಜಮಾನ ನೀಡುವ ದ್ರವ್ಯದ ಆಸೆಯಿಂದ ಅನಧಿಕಾರಿಗೆ, ಅಪಾತ್ರನಿಗೆ ಪೌರೋಹಿತ್ಯ ಮಾಡುವುದರಿಂದ ತನ್ನ ಅನುಷ್ಠಾನ ಸಂಚಿತ ಶಕ್ತಿಯನ್ನು ಕಳೆದುಕೊಳ್ಳುತ್ತಾನೆ. ಎಲ್ಲರಿಗೂ ತಿಳಿದಿರುವ ಪೌರಾಣಿಕ ಘಟನೆಯೊಂದನ್ನು ನೆನಪಿಸುತ್ತೇನೆ. ಸಶರೀರ ಸ್ವರ್ಗಾರೋಹಣ ಕಾಮಿಯಾದ ತ್ರಿಶಂಕುವಿನ ಪೌರೋಹಿತ್ಯವನ್ನು ವಸಿಷ್ಠ ಕುಟುಂಬದವರು ನಿರಾಕರಿಸುತ್ತಾರೆ. ವಸಿಷ್ಠರ ಮೇಲಿನ ದ್ವೇಷದಿಂದ ವಿಶ್ವಾಮಿತ್ರರು ತ್ರಿಶಂಕುವಿನ ಪೌರೋಹಿತ್ಯವನ್ನು ವಹಿಸಿ ತಮ್ಮ ತಪೋಬಲದಿಂದ ಅನಧಿಕಾರಿಯಾದ ತ್ರಿಶಂಕುವನ್ನು ಸ್ವರ್ಗಕ್ಕೇರಿಸುತ್ತಾರೆ. ವಿಶ್ವಾಮಿತ್ರ ತಪಃ ಪ್ರಭಾವದಿಂದ ತ್ರಿಶಂಕುವಿಗೆ ತಾತ್ಕಾಲಿಕ ಫಲ ಸ್ವರ್ಗ ಲಭಿಸಿತು. ಆದರೆ ವಿಶ್ವಾಮಿತ್ರರು ತಮ್ಮ ಸಂಪೂರ್ಣ ತಪೋಬಲವನ್ನು ಕಳೆದುಕೊಂಡರು. ತನ್ನಲ್ಲಿಯೇ ಇಲ್ಲದ ಯಾವುದೇ ಶಕ್ತಿಯನ್ನು ಯಾರೂ ಇತರರಿಗೆ ವರ್ಗಾಯಿಸಲು ಸಾಧ್ಯವಾಗದು. ಪುರೋಹಿತನು ಪೌರೋಹಿತ್ಯದಲ್ಲಿ ವ್ಯಯವಾದ ಅನುಗ್ರಹ ಸಾಮರ್ಥ್ಯವನ್ನೂ ಸಾತ್ವಿಕ ಬಲವನ್ನೂ, ನಿರಂತರ ಅಧ್ಯಯನ ಶೀಲನಾಗಿಯೂ, ಅನುಷ್ಠಾನದ ಮೂಲಕವೂ ಗಳಿಸುತ್ತಲೇ ಇರಬೇಕು. ಆಗ ಮಾತ್ರ ಅವನ ಆಶೀರ್ವಾದ ಫಲಿಸುತ್ತದೆ. "ಬಲಂ ತು ವಾಚಿ ದ್ವಿಜ ಸತ್ತಮಾನಾಂ" ಕ್ಷತ್ರಿಯರಿಗೆ ಬಾಹುಬಲ ಹೇಗೋ ಹಾಗೆ ಬ್ರಾಹ್ಮಣರಿಗೆ ವಾಗ್ಬಲ. "ಸಕ್ತುಮಿನ ತಿತವುನಾ ಪುನಂತೋ ಯತ್ರ ಧೀರಾ ಮನಸಾ ವಾಚ ಮಕ್ರತ । ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ" ನಿರಂತರ ವೇದಾಧ್ಯಯನ ಸಂಪನ್ನರಾದ ಬ್ರಾಹ್ಮಣರ ಮಾತು ಸಾರಣೆಯಲ್ಲಿ ಜೊಳ್ಳನ್ನು ತೆಗೆದಂತೆ ಸತ್ವಪೂರ್ಣವಾಗಿರುತ್ತದೆ. "ಏಷಾಂ ವಾಚಿ ಲಕ್ಷ್ಮೀಃ ನಿಹಿತಾ" ಇವರ ಮಾತಿನಲ್ಲಿ ಲಕ್ಷ್ಮಿ ನೆಲೆಸಿರುತ್ತಾಳೆ. ಆದುದರಿಂದ ಇವರ ಆಶೀರ್ವಚನ ಫಲಿಸಿಯೇ ಫಲಿಸುತ್ತದೆ.

"ಪೌರೋಹಿತ್ಯಂ ರಜನಿ ಚರಿತಂ..." ಪೌರೋಹಿತ್ಯ, ರಾತ್ರಿ ಸಂಚಾರ, ಗ್ರಾಮಣಿತ್ವ (ಗ್ರಾಮದ ಪಟೇಲ ಗಿರಿ) ನಿಯೋಗದ ಯಜಮಾನಿಕೆ ಮೊದಲಾದ ಕೆಲಸಗಳಲ್ಲಿ ಪ್ರವೃತ್ತಿಬೇಡ ಎನ್ನುವ ಉಕ್ತಿಯಿದೆ. ಆತ್ಮೋನ್ನತಿಗಾಗಿ ಒಂದಷ್ಟು ಜಪತಪ ಮಾಡಿಕೊಂಡು ಯಾವ ಉಸಾಬರಿಯೂ ಬೇಡವೆಂದು ಸುಮ್ಮನಿದ್ದು ಬಿಡಬಹುದಲ್ಲ ಎಂಬ ವೈರಾಗ್ಯ ಬರುವ ಸನ್ನಿವೇಶವೂ ಉಂಟು. ಆದರೆ ವೇದವಿದನಾದ ಬ್ರಾಹ್ಮಣನ ಕರ್ತವ್ಯಗಳಲ್ಲಿ



ಪೌರೋಹಿತ್ಯವೂ ಒಂದು. ಏಕೆಂದರೆ ಮನುಷ್ಯರಲ್ಲಿ ಅವನು ಶ್ರೇಷ್ಠತಮ. "ಬ್ರಾಹ್ಮಣೋ ದ್ವಿಪದಾಂ ಶ್ರೇಷ್ಠಃ ಗೌರ್ವರಿಷ್ಠಾ ಚತುಷ್ಪದಾಂ । ಗುರುರ್ಗರೀಯಸಾಂ ಶ್ರೇಷ್ಠಃ ಪುತ್ರಃ, ಸ್ಪರ್ಶವತಾಂ ವರಃ ॥" ಎರಡು ಕಾಲುಗಳುಳ್ಳ ಜೀವ ವರ್ಗದಲ್ಲಿ (ಮನುಷ್ಯರಲ್ಲಿ) ಬ್ರಾಹ್ಮಣ ಶ್ರೇಷ್ಠ. ನಾಲ್ಕು ಕಾಲಿನ ಪ್ರಾಣಿಗಳಲ್ಲಿ ಹಸುವು ಶ್ರೇಷ್ಠ. ಯಜನ–ಯಾಜನ, ದಾನ–ಪ್ರತಿಗ್ರಹ, ಅಧ್ಯಯನ–ಅಧ್ಯಾಪನ ಈ ಆರು ಪಟ್ಕರ್ಮಿಯಾದ ಬ್ರಾಹ್ಮಣನ ಕರ್ತವ್ಯಗಳು. ಈಶ್ವರ ಸೃಷ್ಟಿಯಲ್ಲಿ ಶ್ರೇಷ್ಠತಮವಾದ ಜನ್ಮ ಪಡೆದ ಮೇಲೆ, ಶ್ರೇಷ್ಠತೆಯನ್ನುಳಿಸಿ ಕೊಳ್ಳಬೇಕಾದರೆ, ಆತನಿಗೆ ಪೌರೋಹಿತ್ಯ ಅನಿವಾರ್ಯವಾಗುತ್ತದೆ.

ಪೌರೋಹಿತ್ಯಕ್ಕೆ ಸಂಬಂಧಿಸಿದಂತೆ, ಆಚಾರ್ಯ, ಬ್ರಹ್ಮ, ಸಹ ಋತ್ವಿಜರು, ಯಜಮಾನ (ಕರ್ತೃ) ಮೊದಲಾದ ವಿಶಿಷ್ಟ ಪಾತ್ರಗಳೂ, ಕಾಲ, ಕರ್ಮಾಂಗ, ಕರ್ಮ ಫಲ ಎಂಬ ಪ್ರಕ್ರಿಯೆಗಳೂ ಇವೆ. ಕರ್ತೃವಿಗೆ ಕರ್ಮಜ್ಞಾನ ಪೂರ್ತಿ ಇರಲೂಬಹುದು. ಇಲ್ಲದೆಯೂ ಇರಬಹುದು. ಇರಲೇಬೇಕೆಂಬ ನಿಯಮವಿಲ್ಲ. ಆದರೆ ಆಚಾರ್ಯ ಅಂದರೆ ಪುರೋಹಿತ (ಆ ಸತ್ಕಾರ್ಯದ) ಸಮಸ್ತ ಫಲಾಫಲಗಳಿಗೆ, ಪುಣ್ಯ–ಪಾಪದ ಫಲ ಪ್ರಾಪ್ತಿಗೆ ಹೊಣೆಗಾರನಾಗುತ್ತಾನೆ. "ಸರ್ವಾರಿಷ್ಟಂ ಪುರೋಹಿತಃ" ಎಂಬ ಮಾತು ಪ್ರಚಲಿತವಿದೆ. ಸಮಸ್ತ ಶುಭಾ ಶುಭಗಳಿಗೆ, ಒಳಿತು ಕೆಡುಕುಗಳಿಗೆ ಪುರೋಹಿತನೇ ಜವಾಬ್ದಾರನೆಂದು ಇದಕ್ಕೆ ಅರ್ಥ. "ಅರಿಷ್ಟೇತು ಶುಭಾಶುಭೇ" (ಅಮರ) ಅರಿಷ್ಟ ಶಬ್ದ ಶುಭ–ಅಶುಭ ಎರಡನ್ನೂ ಸೂಚಿಸುತ್ತದೆ. "ರಾಜಾ ರಾಷ್ಟ್ರಕೃತಂ ಪಾಪಂ ರಾಜ ಪಾಪಂ ಪುರೋಹಿತಃ" ಪ್ರಜೆಗಳಿಂದ ತೆರಿಗೆಯನ್ನು ವಸೂಲು ಮಾಡಿದ ಮೇಲೆ ತೆರಿಗೆಯ ಮೌಲ್ಯಕ್ಕೆ ತಕ್ಕಂತೆ ಪ್ರಜೆಗಳಿಗೆ ಸೌಲಭ್ಯ ನೀಡದೆ ಪ್ರಜಾದ್ರೋಹ ಮಾಡಿದರೆ ಪ್ರಜೆಗಳ ಶಾಪದ – ಪಾಪದ ಫಲ ರಾಜನ (ಸರಕಾರದ) ಮೇಲೆ ಆರೋಪಿತವಾಗುತ್ತದೆ. ಆ ಪಾಪ ರಾಜ ಪುರೋಹಿತನ ಮೇಲೆ ವರ್ಗಾವಣೆಯಾಗುತ್ತದೆ. ಕರ್ಮಫಲವೆಂಬುದು ಬತ್ತಳಿಕೆಯಿಂದ ಹೊರಬಂದ ಒಂದು ಅಸ್ತ್ರವಿದ್ದಂತೆ. ಈ ಅಸ್ತ್ರ ಪ್ರಯೋಗವಾದ ಮೇಲೆ ಅದು ಉಪಸಂಹಾರವಾಗಬೇಕು. ಅಥವಾ ಪ್ರತ್ಯಸ್ತ್ರದಿಂದ ಪರಿಹಾರವಾಗಬೇಕು. ಕೆಲವು ದಿವ್ಯಾಸ್ತ್ರಗಳು ಶರಣಾಗತಿ ಯಿಂದಲೂ ಪರಿಹಾರವಾಗುತ್ತವೆ. ಹಾಗೆಯೇ 'ಸಂಪೂರ್ಣ ಫಲಪ್ರಾಪ್ತಿರಸ್ತು' ಎಂದು ಆಶೀರ್ವದಿಸಿದ ಮೇಲೆ ಕರ್ತೃವಿನ ಪಾಪ ಪರಿಹಾರವಾಗ ಬೇಕಾದುದು ಅಥವಾ ಆತನಿಗೆ ಪುಣ್ಯಪ್ರಾಪ್ತಿಯಾಗಬೇಕಾದುದು ಪುರೋಹಿತನ ಪ್ರಾರ್ಥನೆ. ಜಪ, ತಪ, ಅನುಷ್ಠಾನ ಬಲದಿಂದ, "ಅವಶ್ಯಮನುಭೋಕ್ತವ್ಯಂ ಕೃತಂ ಕರ್ಮ ಶುಭಾಶುಭಂ" ಪುರೋಹಿತನಾದವನು ಜಪತಪಾದಿಗಳ ಅನುಷ್ಠಾನದಿಂದ ಪರಿಹರಿಸಿ ಕೊಳ್ಳಲಾಗದ ಕರ್ಮ ಫಲವನ್ನು ಸ್ವತಃ ಅನುಭವಿಸಬೇಕಾಗುತ್ತದೆ. ಈ ತತ್ತ್ವದ ಆಧಾರದ ಮೇಲೆಯೇ ಪೌರೋಹಿತ್ಯ ವೃತ್ತಿಯ ಬಗ್ಗೆ ಉದಾಸೀನ ತಳೆಯಬೇಕಾಗುತ್ತದೆ.

ಸೋಮಕನೆಂಬ ರಾಜನೊಬ್ಬನಿದ್ದ. ಹೆಚ್ಚು ಮಕ್ಕಳನ್ನು ಪಡೆಯುವ ಅಪೇಕ್ಷೆಯಿಂದ ಅವನು ನೂರು ಕನ್ಯೆಯರನ್ನು ಮದುವೆಯಾದ. ಅವರಲ್ಲಿ ಒಬ್ಬ ಮಹಿಷಿ ಮಾತ್ರ ಜಂತು ವೆಂಬ ಮಗನನ್ನು ಹಡೆದಳು. ಬಹು ಪುತ್ರಾಪೇಕ್ಷಿಯಾದ ಸೋಮಕನಿಗೆ ತೃಪ್ತಿಯಾಗಲಿಲ್ಲ. ನೂರು ಜನ ಪತ್ನಿಯರೂ ಪುತ್ರವತಿಯರಾಗುವುದೇ ಫಲವಾಗಿ ಉಳ್ಳಯಾಗವೊಂದನ್ನು

ರಾಜ ಪುರೋಹಿತರು ವಿವರಿಸುತ್ತಾರೆ. "ಏಕೈಕ ಪುತ್ರನಾದ ಜಂತುವನ್ನೇ ಪಶುವನ್ನಾಗಿ ಮಾಡಿ ಯಾಗ ಮಾಡಬೇಕು. ಜಂತುವಿನ ವಪೆಯ ಹೋಮ ಧೂಮವನ್ನು ಅಘ್ರಾಣಿಸಿದ ನೂರು ಜನ ಪತ್ನಿಯರೂ ಮಹಾವೀರ್ಯವಂತರಾದ ನೂರು ಮಕ್ಕಳಿಗೆ ಜನ್ಮವೀಯುತ್ತಾರೆ. ಜಂತು ಪುನಃ ತನ್ನ ತಾಯಿಯ ಗರ್ಭದಲ್ಲೇ ವಾಮಭಾಗದ ಸುವರ್ಣ ರೇಖೆಯೊಂದಿಗೆ ಮರುಹುಟ್ಟನ್ನು ಪಡೆಯುತ್ತಾನೆ."

ಹೆಂಗರುಳಿನ ರಾಜಮಾತೆಯರ ವಿಲಾಪದ ನಡುವೆಯೂ ಪುರೋಹಿತರು ಬಲಾತ್ಕಾರವಾಗಿ ಜಂತುವನ್ನು ಸೆಳೆದು ತಂದು ಪಶು ವಧಾಸ್ಥಾನದಲ್ಲಿ ನಿಲ್ಲಿಸಿ, ಅಭಿಮಂತ್ರಿಸಿ, ವಧಿಸಿದ ನಂತರ ಅವನ ವಪೆಯನ್ನು ತೆಗೆದು ಹೋಮಿಸಿಯೇ ಬಿಟ್ಟರು. ಈ ದೃಶ್ಯವನ್ನು ನೋಡಲಾಗದೇ ಮೂರ್ಛಿತರಾದ ರಾಜ ಮಹಿಷಿಯರು ಹೋಮ ಧೂಮವನ್ನು ಅಘ್ರಾಣಿಸಿ ಗರ್ಭಧರಿಸಿ ಯಥಾ ಸಮಯ ನೂರು ಗಂಡು ಮಕ್ಕಳನ್ನು ಪ್ರಸವಿಸಿದರು. ಹೀಗೆ ಪುರೋಹಿತರು ತಮ್ಮ ಸಾಧನಾ ಬಲದಿಂದ ಸೋಮಕನಿಗೆ ನೂರು ಮಕ್ಕಳಾಗುವಂತೆ ಮಾಡಿದರು. ಆದರೆ ಕಾಲಾಂತರದಲ್ಲಿ ಅವರು ದಾರುಣವಾದ ನರಕದಲ್ಲಿ ವಾಸ ಮಾಡಬೇಕಾಯಿತು, ಪಾಪದ ಬೆಂಕಿಯಲ್ಲಿ ಬೇಯ ಬೇಕಾಯಿತು. ಸೋಮಕನು ಮಾಡಿದುದು ಕಾಮ್ಯಯಜ್ಞ ಅವನು ಯಥೇಚ್ಛವಾದ ದಕ್ಷಿಣೆ ನೀಡಿ, ಆ ದಕ್ಷಿಣೆಯೊಂದಿಗೆ ತನ್ನ ಪಾಪಗಳನ್ನು ಪುರೋಹಿತರಿಗೆ ಧಾರೆಯೆರೆದು ಕೊಟ್ಟು ಬಿಟ್ಟ. ಆದರೆ ಪುರೋಹಿತ ಶಿಶು ಹತ್ಯೆಗೆ ಪ್ರೇರಕವಾಗಿ ನರಕದಲ್ಲಿ ಘೋರ ಪಾಪದ ಫಲವನ್ನು ಅನುಭವಿಸಬೇಕಾಯಿತು. (ಮುಂದೆ ತನ್ನ ಕಾರಣದಿಂದ ಪುರೋಹಿತ ನರಕ ಯಾತನೆಯನ್ನು ಅನುಭವಿಸುತ್ತಿದ್ದುದಕ್ಕಾಗಿ ಸೋಮಕ ಮರುಗಿ ಯಮನನ್ನು ಪ್ರಾರ್ಥಿಸುತ್ತಾನೆ. "ನನಗೆ ಪುತ್ರ ಪ್ರಾಪ್ತಿ, ಪುರೋಹಿರಿಗೆ ದಕ್ಷಿಣೆ ಪ್ರಾಪ್ತಿ–ಹೀಗೆ ನಾವಿಬ್ಬರೂ ಯಾಗದ ಫಲವನ್ನು ಅನುಭವಿಸಿದ್ದೇವೆ. ಆದುದರಿಂದ ಯಾಗ ನಿಮಿತ್ತವಾದ ಪಾಪದ ಫಲವನ್ನೂ ನಾವಿಬ್ಬರೂ ಸಮನಾಗಿ ಅನುಭವಿಸುವಂತೆ ಅನುಗ್ರಹಿಸು." ಸ್ವೇಚ್ಛೆಯಿಂದ ಪುರೋಹಿತನೊಂದಿಗೆ ನರಕವಾಸವನ್ನನುಭವಿಸಿ ಪುರೋಹಿತನ ಪಾಪವಿಮೋಚನೆಯಾದ ನಂತರ ಇಬ್ಬರೂ ನರಕದಿಂದ ಬಿಡುಗಡೆ ಹೊಂದಿದರು.

**ಮಹಾಭಾರತ :** ಆಚಾರ್ಯನಂತೆ ಸಹ ಋತ್ವಿಜರ ಪಾತ್ರವೂ ಬಹು ಮುಖ್ಯವಾದುದು. ಇವರೆಲ್ಲರೂ ಆಚಾರ್ಯರಷ್ಟೇ ಅರ್ಹತೆಯನ್ನು ಗಳಿಸಿರುತ್ತಾರೆ. ಮಂತ್ರ, ತಂತ್ರಗಳಲ್ಲಿ ಆಚಾರ್ಯನಿಗೆ ಎಲ್ಲ ರೀತಿಯಲ್ಲೂ ಸಹಕರಿಸುತ್ತಾರೆ. ಒಂದು ಶಿಕ್ಷಣ ಸಂಸ್ಥೆಯ ನೌಕ ವೃಂದದಲ್ಲಿ ಜವಾನ, ಗುಮಾಸ್ತ, ಅಧ್ಯಾಪಕ, ಉಪನ್ಯಾಸಕ, ಆಚಾರ್ಯ ಎಲ್ಲರೂ ಸೇರಿರುತ್ತಾರೆ. ಇವರಲ್ಲಿ ಪ್ರತಿಯೊಬ್ಬರ ಕಾರ್ಯ ಸ್ವರೂಪವೂ ಬೇರೆ ಬೇರೆ ಇರಬಹುದು. ಆದರೂ ಸಂಸ್ಥೆಯ ಕೆಲಸ ಸುಸೂತ್ರ ನಡೆಯಬೇಕಾದರೆ ಎಲ್ಲರೂ ಅನಿವಾರ್ಯ. ಹಾಗೆಯೇ ಕರ್ಮಾಂಗದಲ್ಲಿ ಸಹ ಋತ್ವಿಜರ ಪಾತ್ರ ಗೌಣವೆಂದು ಪರಿಗಣಿಸುವಂತಿಲ್ಲ.

**ಬ್ರಹ್ಮ**–ಯಾಜ್ಞಿಕ ಪ್ರಕ್ರಿಯೆಯಲ್ಲಿ ಈತನ ಪಾತ್ರ ವಿಶಿಷ್ಟವಾದುದು. ಇವನ ಕರ್ತವ್ಯ. "ಯಜ್ಞಮನಾ ಏವ ವರ್ತೇತ" ಅಂದರೆ ಎಲ್ಲವನ್ನೂ ಸೂಕ್ಷ್ಮವಾಗಿ ಗಮನಿಸುತ್ತಿರಬೇಕು. ಮಂತ್ರ, ತಂತ್ರ, ನ್ಯೂನ, ಅತಿರಿಕ್ತ ಲೋಪ ದೋಷಗಳಾಗದಂತೆ ಆಚಾರ್ಯನೊಂದಿಗೆ



ಸಹಮತ ಹೊಂದಿರಬೇಕು. ಯಾವುದೇ ಸ್ಖಾಲಿತ್ಯಕ್ಕೆ ಪ್ರಾಯಶ್ಚಿತ್ತಾಹುತಿಯನ್ನು ನೀಡಬೇಕು. ಜಿಜ್ಞಾಸೆಯುಂಟಾದಾಗ "ಇದಮಿತ್ಥಂ" ಎಂದು ಸಪ್ರಮಾಣವಾಗಿ ನಿರ್ಣಯಿಸಿ ಹೇಳಲು ಸಮರ್ಥನಿರಬೇಕು. (ಆದರೆ ವಿನಾ ಕಾರಣ ತನ್ನ ಪ್ರತಿಷ್ಠೆಯನ್ನು ತೋರಿಸಲು ಅಥವಾ ಪಾಂಡಿತ್ಯ ಪ್ರದರ್ಶನಕ್ಕಾಗಿ ಮೂಗು ತೂರಿಸಿ ಆಭಾಸವನ್ನುಂಟು ಮಾಡಬಾರದು. ಇಂತಹ ಸನ್ನಿವೇಶಗಳು ಲೇಖಕನ ಅನುಭವಕ್ಕೆ ಬಂದಿದ್ದಿದೆ). ಹೋಮದ ಬದಿಯಲ್ಲಿ ಗೊಂಬೆಯಂತೆ ಸುಮ್ಮನೆ ಕೂರುವುದಕ್ಕೆ ದಕ್ಷಿಣೆ ಏಕೆ ಕೊಡಬೇಕು. ಎಂದು ತಾತ್ಸಾರ ಮಾಡುವವರೂ ಇದ್ದಾರೆ. ಬ್ರಹ್ಮನ ಅಭಾವದ ಸನ್ನಿವೇಶಗಳಲ್ಲಿ ಯಾವುದೇ ಸ್ಖ್ಯಾಲಿತ್ಯಕ್ಕೆ ಅವಕಾಶವಾಗದಂತೆ ಎಚ್ಚರಿಕೆಯಿಂದ ಕಾರ್ಯನಿರ್ವಹಿಸುವ ಹೊಣೆಗಾರಿಕೆ ಆಚಾರ್ಯನಿಗೆ ಇರುತ್ತದೆ.

ಸಂಧ್ಯಾವಂದನಾದಿ ನಿತ್ಯ ಕರ್ಮಗಳ ಹೊರತಾಗಿ ನೈಮಿತ್ತಿಕ, ಕಾಮ್ಯ ಕರ್ಮಗಳು ಪವಿತ್ರ ಧಾರಣೆಯೊಂದಿಗೆ ಪ್ರಾರಂಭವಾಗುತ್ತವೆ. ಪವಿತ್ರವೆಂದರೇನು? ಶುದ್ಧಾಚಮನದ ನಂತರ (ದರ್ಭೇ ಷ್ವಾಸೀನಃ ದರ್ಭಾನ್ ಧಾರಯಮಾಣ) ಧರ್ಭಾಸನದ ಮೇಲೆ ಕುಳಿತು ವಿಶಿಷ್ಟ ಗ್ರಂಥಿಯುಳ್ಳ ನಾಲ್ಕು ದರ್ಭೆಗಳನ್ನು ಬಲಗೈ ಅನಾಮಿಕ ಬೆರಳಿನಲ್ಲಿ ಧರಿಸುವುದೇ ಪವಿತ್ರ. ಧಾರಣೆ (ಚತುರ್ಭಿಃ ದರ್ಭಪಿಂಜೂಲೈಃ ಬ್ರಾಹ್ಮಣಸ್ಯ ಪವಿತ್ರಕಂ–ಗ್ರಂಥಿಯುಕ್ತವಾದ ಎರಡು ದರ್ಭೆಗಳ ಪವಿತ್ರವೂ ಆಚಾರದಲ್ಲಿದೆ.) ಪವಿತ್ರಧಾರಣೆ ಶುಚಿತ್ವದ ಸಂಕೇತವೂ ಹೌದು. ತನ್ನ ತಾಯಿಯ ದಾಸ್ಯ ವಿಮೋಚನೆಗಾಗಿ ಗರುಡನು ಎಲ್ಲ ಅಡೆ ತಡೆಗಳನ್ನು ನಿವಾರಿಸಿಕೊಂಡು ಅಮೃತ ಕಲಶವನ್ನು ತರುತ್ತಿರುತ್ತಾನೆ. ತಡೆಯಲು ಬಂದ ದೇವೇಂದ್ರನ ಮೈತ್ರಿಯನ್ನೂ ಸಂಪಾದಿಸುತ್ತಾನೆ. ದೇವತೆಗಳಲ್ಲದವರಿಗೆ ಯಾರಿಗೂ ಅಮೃತಪಾನ ಮಾಡಿಸಬಾರದೆಂಬ ಧ್ಯೇಯವುಳ್ಳ ಇಂದ್ರ, ಗರುಡನಿಗೆ ಸರ್ಪಾಹಾರಿಯಾಗುವಂತೆ ಅನುಗ್ರಹಿಸಿ, ಗರುಡನು ಅಮೃತ ಕಲಶವನ್ನು ಕೆಳಗಿಟ್ಟೊಡನೆಯೇ ತಾನದನ್ನು ಅಪಹರಿಸುವೆನೆಂದು ಒಪ್ಪಂದ ಮಾಡಿಕೊಂಡು ಹೊರಟು ಹೋಗುತ್ತಾನೆ. ಅಮೃತ ಕಲಶವನ್ನು ಕದ್ರುವಿನ ಮಕ್ಕಳಾದ ಸರ್ಪಗಳ ಎದುರಿನಲ್ಲೇ ದರ್ಭೆ ಮೇಲಿರಿಸಿ ಗರುಡ ತಾಯಿಯನ್ನು ದಾಸ್ಯದಿಂದ ವಿಮೋಚನೆಗೊಳಿಸುತ್ತಾನೆ. ಸರ್ಪಗಳು ಸ್ನಾನ ಮಾಡಿ ಶುಚಿರ್ಭೂತರಾಗಿ ಅಮೃತ ಪಾನಕ್ಕೆ ಸಿದ್ಧರಾಗಿ ಬರುವಷ್ಟರಲ್ಲಿ ಅಮೃತ ಕಲಶ ಮಾಯವಾಗಿತ್ತು. ಇದು ಇಂದ್ರನ ಮೋಸವೆಂಬುದು ಸರ್ಪಗಳಿಗೆ ಅರಿವಾಯಿತು. ಚಾಪಲ್ಯ ವಶದಿಂದ ಸರ್ಪಗಳು ಅಮೃತವನ್ನಿಟ್ಟಿದ್ದ ದರ್ಭೆಯನ್ನೇ ನೆಕ್ಕ ತೊಡಗಿದವು. ಅಂದಿನಿಂದ ಅವುಗಳ ನಾಲಗೆ ಸೀಳಾಯಿತೇ ಹೊರತು ಅಮರತ್ವ ದೊರಕಲಿಲ್ಲ. (ಇದು ಮಹಾಭಾರತದ ಕಥೆ). ಅಲ್ಪ ಕಾಲದ ಅಮೃತದ ಸಂಪರ್ಕದಿಂದ ದರ್ಭೆಗೆ ಪಾವನತ್ವ ಲಭಿಸಿತು. ಹೀಗೆ ದರ್ಭೆ "ಪವಿತ್ರ" ವಾಯಿತು. (ಕರಾವಳಿ ಪ್ರದೇಶದಲ್ಲಿ ಸಿಗುವ ವಿಶಿಷ್ಟ ಜಾತಿಯ ದರ್ಭೆ ತುಂಬಾ ಒರಟಾಗಿಯೂ, ಗರಗಸದಂತೆ ಹರಿತವಾಗಿಯೂ ಇರುತ್ತದೆ. ಇದಕ್ಕೆ ವಿಶ್ವಾಮಿತ್ರ ದರ್ಭೆ ಎಂದು ಹೆಸರು. ಇನ್ನು ಕೆಲವು ಕಡೆ ದೊರಕುವ ತುಂಬಾ ಮೃದುವಾದ ದರ್ಭೆಗೆ ವಸಿಷ್ಠ ದರ್ಭೆ ಎನ್ನುತ್ತಾರೆ). ಪವಿತ್ರವಾದ ಈ ದರ್ಭೆಗೆ ಸೋಂಕು ತಗಲುವ ಸಂಭವ ಕಡಿಮೆ. ದರ್ಭಾಸನದಲ್ಲಿ ಕುಳಿತು ಪ್ರಾಣಾಯಾಮ ಮಾಡುವುದರಿಂದ

ಮತ್ತು ಮಂತ್ರ ಪಠನದಿಂದುಂಟಾಗುವ ಕಂಪನದ ಫಲವಾಗಿ ದೇಹದಲ್ಲಿ ಪ್ರವಹಿಸುವ ವಿದ್ಯುತ್ತು ನೆಲಕ್ಕೆ ಪ್ರವಹಿಸದೆ ಶಕ್ತ ಸಂಚಯವಾಗುತ್ತದೆ.

ಪುಣ್ಯಾಹ ವಾಚನದಿಂದ ಪುರೋಹಿತನ ಮುಖ್ಯ ಕರ್ತವ್ಯ ಪ್ರಾರಂಭವಾಗುತ್ತದೆ. ಅಹಃ ಅಂದರೆ ಹಗಲು, ಪುಣ್ಯಾಹ ಅದಕ್ಕೆ ಪುಣ್ಯತಮವಾದ ದಿನ ಎಂದು ಸಾಮಾನ್ಯ ವಾಗಿ ಅರ್ಥೈಸಬಹುದು. ಸೂರ್ಯೋದಯದಿಂದ ಸೂರ್ಯೋದಯದ ತನಕ ಇದರ ವ್ಯಾಪ್ತಿ ಇರುತ್ತದೆ. "ಯದಾ ವೈ ಸೂರ್ಯ ಉದೇತಿ, ಅಥ ನಕ್ಷತ್ರಂ ನೈತಿ" ಅಂದರೆ ಸೂರ್ಯೋದಯದಿಂದ ನಕ್ಷತ್ರಾಸ್ತದ ತನಕ ಅಂದರೆ ಸೂರ್ಯೋದಯದಿಂದ ಮುಂದಿನ ಸೂರ್ಯೋದಯದವರೆಗೂ ಅದರ ಪುಣ್ಯವ್ಯಾಪ್ತಿ ಇರುತ್ತದೆಂಬುದು ಆಚಾರ ಸಿದ್ಧವಾದುದು. ಶುದ್ಧಿ, ವೃದ್ಧಿ, ಅಭ್ಯುದಯಗಳು ಪುಣ್ಯಾಹದ ಫಲಗಳು. "ಯಾಭಿಃ (ಅದ್ಭಿಃ) ಪ್ರಜಾಪತಿಃ ಇಂದ್ರಂ ಸೋಮಂ ರಾಜಾನಂ ವರುಣಂ ಯಮಂ ಮನುಂ ಅಭ್ಯಷಿಂಚತ್ ತಾಭಿಃ ಅದ್ಭಿಃ ತ್ವಾಂ ಅಹಂ ಅಭಿಷಿಂಚಾಮಿ" ಎಂದು ಆಶೀರ್ವದಿಸುತ್ತಾ ಯಜಮಾನನನ್ನು ಪುಣ್ಯೋದಕದಿಂದ ಅಭಿಷೇಚಿಸುವುದು ಅಂದರೆ ಪುಣ್ಯೋದಕದ ಮಂತ್ರ ಸ್ನಾನದಿಂದ ಅವನನ್ನು ಶುದ್ಧೀಕರಿಸಿ ಮುಂದಿನ ಕರ್ಮಾಂಗಕ್ಕೆ ಅರ್ಹನನ್ನಾಗಿಸುವುದು ಪುಣ್ಯಾಹದ ಒಂದು ಅಂಗ. ಕರ್ತೃವಿನ ಪ್ರಾರ್ಥನೆಯ ಮೇರೆಗೆ ಓಂ ಪುಣ್ಯಾಹಂ, ಓಂ ಸ್ವಸ್ತಿ, ಓಂ ಋಧ್ಯತಾಂ ಸಮೃದ್ಧಿಃ ಅಸ್ತು ಶ್ರೀಃ ಎಂದು ಪ್ರತಿವಚನ ಗಳ ಮೂಲಕ ಆಶೀರ್ವದಿಸಲು ಸಮರ್ಥರಾದ ನಾಲ್ವರು ಋತ್ವಿಜರನ್ನು ಸಂತೋಷ ಪಡಿಸುವುದು ಮತ್ತೊಂದು ಅಂಗ.

ಷೋಡಶ ಕರ್ಮಗಳಲ್ಲಿ ಮತ್ತು ಇತರೆ ವೃದ್ಧಿ ಕಾರ್ಯಗಳಲ್ಲಿ 'ನಾಂದಿ' ಮಾಡಬೇಕು. ಈ ಪದಕ್ಕೆ ಪ್ರಾರಂಭ ಎಂಬ ಅರ್ಥ ಬಳಕೆಯಲ್ಲಿದೆ. ನಂದಂತಿ ಪಿತರಃ ಅಸ್ಮಿನ್ ಅಂದರೆ ಇದರಿಂದ ಪಿತೃಗಳು ಸಂತೋಷಿಸುತ್ತಾರೆ ಎಂಬ ಅರ್ಥವೂ ಇದೆ. ವೃದ್ಧಿ ಶ್ರಾದ್ಧವೆಂದು ಇದಕ್ಕೆ ಇನ್ನೊಂದು ಹೆಸರಿದೆ. ನಮ್ಮ ಸಂಸ್ಕೃತಿಯಲ್ಲಿ ಷೋಡಶ ಕರ್ಮಗಳ ಮೂಲ ಉದ್ದೇಶ ಸೃಷ್ಟಿಯ ನಿರಂತರತೆ (ವಂಶಾಭಿವೃದ್ಧಿ) ಯನ್ನು ಕಾಯ್ದುಕೊಳ್ಳುವುದೇ ಆಗಿದೆ. ಆದುದರಿಂದ ಅದಕ್ಕೆ ಕಾರಣ ಕರ್ತೃಗಳಾದ ಪಿತೃಗಳನ್ನು ಪ್ರಾರಂಭದಲ್ಲೇ ಸ್ಮರಿಸುವುದು ಔಚಿತ್ಯಪೂರ್ಣವಾಗಿದೆ. ಪುರೋಹಿತನು ಇಂತಹ ಮಹತ್ವವನ್ನು ಕರ್ತೃವಿಗೆ ವಿವರಿಸ ಬೇಕಾಗುತ್ತದೆ. ಪಾದ್ಯ, ಗಂಧಾದ್ಯುಪಚಾರಗಳ ನಂತರ (ದುರ್ಗಾ ಗಣಪತಿ ಕ್ಷೇತ್ರ ಪಾಲಾಶ್ಚ) ವಿಶ್ವೇ ದೇವರು, ಮಾತೃವರ್ಗ, ಪಿತೃವರ್ಗ, ಸಪತ್ನೀಕ ಮಾತಾ ಮಹವರ್ಗದವರನ್ನು ಸಂಭೋದಿಸಿ ಪ್ರತಿಯೊಂದು ಗುಂಪಿಗೂ ಪ್ರತ್ಯೇಕವಾಗಿ 'ಯುಗ್ಮ ಬ್ರಾಹ್ಮಣ ಭೋಜನ ಪರ್ಯಾಪ್ತಂ" ಇದಂ ಆಮಂ, ಸಸೋಪಸ್ಕರಂ, ಸತಾಂಬೂಲಂ, ಸದಕ್ಷಿಣಾಕಂ" ಅಂದರೆ (ಹತ್ತು) (ಒಟ್ಟು) ಎಂಟು ಜನರಿಗೆ ಊಟಕ್ಕೆ ಸಾಕಾಗುವಷ್ಟು ಪರಿಕರಗಳನ್ನು, ದಕ್ಷಿಣೆ ತಾಂಬೂಲವನ್ನು ಧಾರೆ ಎರೆಯಬೇಕೆಂಬುದು ಈ ಮಂತ್ರ ವಾಕ್ಯಗಳ ಅರ್ಥ. ಇದೇ ವೃದ್ಧಿ ಶ್ರಾದ್ಧ, ಶ್ರದ್ಧೆಯಿಂದ ಮಾಡುವ ನಾಂದಿ. ಉಕ್ತ ಸಂಖ್ಯೆಯ ಪ್ರತ್ಯೇಕ ಬ್ರಾಹ್ಮಣರನ್ನೇ ಆಹ್ವಾನಿಸಿ ಪ್ರತಿಯೊಬ್ಬರಿಗೂ ಒಂದೊಂದು ಊಟಕ್ಕೆ ಪರ್ಯಾಪ್ತ



ವಾಗುವ ಪರಿಕರಗಳನ್ನು ದಕ್ಷಿಣೆಯನ್ನೂ ನೀಡುವ ರೂಢಿ ಕೆಲವು ಕುಟುಂಬಗಳಲ್ಲಿ ಅನೂಚಾನವಾಗಿ ನಡೆದು ಬಂದಿದೆ.

**ದಾನ–ದಕ್ಷಿಣೆ.** ದಾನವನ್ನು ದಕ್ಷಿಣೆ ಅನುಸರಿಸುತ್ತದೆ. ಮಂತ್ರಪುರಸ್ಸರವಾಗಿ ತುಲಸೀದಲ–ಜಲಧಾರಾ ಪೂರ್ವಕವಾಗಿ ನೀಡುವುದು ದಾನ. ಅದನ್ನನುಸರಿಸಿ ನೀಡುವುದು ದಕ್ಷಿಣೆ. ಕೇವಲ ಮನಃ ಸಂಕಲ್ಪಪೂರ್ವಕವಾಗಿ ಸುಮ್ಮನೆ ನೀಡುವುದು ಧರ್ಮ. ದಾನ–ಧರ್ಮ ಎರಡಕ್ಕೂ ಪ್ರತ್ಯೇಕವಾದ ಮಹತ್ವವಿದೆ. ಪ್ರತಿಗೃಹೀತೃವಿಗಿಂತ ದಾನಿಯೇ ಶ್ರೇಷ್ಠವೆಂದು ಹೇಳುವುದುಂಟು. ಏಕೆಂದರೆ ದಾನ ನೀಡುವವನ ಕೈ ಮೇಲಕ್ಕಿರುತ್ತದೆ. ಸ್ವೀಕರಿಸುವವನ ಕೈ ಕೆಳಗಿರುತ್ತದೆ. ದಾನ–ದಕ್ಷಿಣೆಗಳಲ್ಲಿ ಮೂರು ವಿಚಾರಗಳನ್ನು ಪರಿಗಣಿಸಬೇಕಾಗುತ್ತದೆ.(1) ಕರ್ಮಾಂಗದ ಸ್ವರೂಪ (2) ದಾನ–ದಕ್ಷಿಣೆ ನೀಡುವವನ ಆರ್ಥಿಕ ಸಾಮರ್ಥ್ಯ ಮತ್ತು (3) ಸ್ವೀಕರಿಸುವವನ ಅರ್ಹತೆ. ಒಂದು ಸಂಸ್ಥೆಯಲ್ಲಿ ಜವಾನ, ಗುಮಾಸ್ತ, ಅಧೀಕ್ಷಕ, ಸಹಾಯಕ ಅಧಿಕಾರಿ, ಪ್ರಧಾನಾಧಿಕಾರಿ – ಹೀಗೆ ವಿವಿಧ ವರ್ಗದ ನೌಕರರಿರುತ್ತಾರೆ. ಸಂಸ್ಥೆಯ ಕಾರ್ಯ ಸುಸೂತ್ರವಾಗಿ ನಡೆಯ ಬೇಕಾದರೆ ಇವರೆಲ್ಲರ ಸಾಮೂಹಿಕ ಶ್ರಮ ಅನಿವಾರ್ಯ. ಯಾರೊಬ್ಬರೇ ಅಲಕ್ಷ್ಯ ಮಾಡಿದರೂ ಸಂಸ್ಥೆಯ ಕಾರ್ಯ ಕುಂಠಿತವಾಗುತ್ತದೆ. ಕೆಲಸ ಪೂರ್ತಿ ಕೆಡುವುದೂ ಉಂಟು. ಹಾಗೆಂದು ಇವರೆಲ್ಲರಿಗೂ ಸಮಾನ ವೇತನ ನೀಡಲಾಗುವುದಿಲ್ಲ. ಅಂತೆಯೇ ಆಚಾರ್ಯ, ಬ್ರಹ್ಮ, ಸಹ ಋತ್ವಿಜರು, ಪರಿಚಾರಕರು ಎಲ್ಲರಿಗೂ ಯೋಗ್ಯತಾನುಸಾರ ದಕ್ಷಿಣೆ ನೀಡಬೇಕು. "ಆಚಾರ್ಯಾಯ ದ್ವಿಗುಣಂ ದದ್ಯಾತ್" ಅಂದರೆ ಪ್ರಧಾನಾಚಾರ್ಯರಿಗೆ ದುಪ್ಪಟ್ಟು (ದಕ್ಷಿಣೆ) ನೀಡಬೇಕು. ಎಂಬುದು ಶಿಷ್ಟಾಚಾರ. ಆಗಾಗ ನಡೆಯುವ ವ್ರತ, ಪೂಜಾ ದಿನಗಳಲ್ಲಿ, ಜೀವಮಾನದಲ್ಲಿ ಒಮ್ಮೆಯೇ ನಡೆಯುವ ಉಪನಯನ, ವಿವಾಹ ಮೊದಲಾದ ಸಂಸ್ಕಾರಗಳಲ್ಲಿ, ಬದುಕಿನಲ್ಲಿ ಒಮ್ಮೆ ಮಾತ್ರ ನಡೆಯುವ ನೂತನ ಗೃಹ ಪ್ರವೇಶ ಇತ್ಯಾದಿ ಸಮಾರಂಭಗಳಲ್ಲಿ ಅಥವಾ ಯಜ್ಞಯಾಗಾದಿಗಳಲ್ಲಿ ಏಕರೂಪದ ದಕ್ಷಿಣೆ ನಿಡುವುದಲ್ಲ. ಒಂದು ಗಂಟೆಯ ಸತ್ಯನಾರಾಯಣ ಪೂಜೆಗೆ 10ರೂ. ದಕ್ಷಿಣೆ, ಒಂದೂವರೆ ಗಂಟೆ ಉಪನಯನ ಪೌರೋಹಿತ್ಯಕ್ಕೆ 15 ರೂ. ದಕ್ಷಿಣೆ ಎಂಬ ಲೆಕ್ಕಾಚಾರವೂ ಸರಿಯಲ್ಲ.

ಹಿಂದೆ ಮಹಾಯಾಗಗಳಲ್ಲಿ ಋತ್ವಿಜರನ್ನು ಆಯ್ಕೆ ಮಾಡುವಾಗ ಹೀಗೆ ಸಂಭಾಷಣೆ ನಡೆಯುತ್ತಿತ್ತಂತೆ.

"ಕೋಽ ಧ್ವರಃ"? ನನ್ನನ್ನು ಋತ್ವಿಜನನ್ನಾಗಿ ಆಹ್ವಾನಿಸಲಾಗುತ್ತಿರುವ ಯಾಗದ ಹೆಸರೇನು?

"ಕರ್ತ್ವಿಜಃ?" ಇದರಲ್ಲಿ ಭಾಗವಹಿಸುವ ಇತರೆ ಋತ್ವಿಜರು ಯಾರು? (ವಸಿಷ್ಠ, ವಿಶ್ವಾಮಿತ್ರರಂತಹ ವಿರೋಧ ಪರಂಪರೆಯ ಗುಂಪುಗಳಲ್ಲಿ ಪರಸ್ಪರ ಹೊಂದಾಣಿಕೆ ಯಿಲ್ಲದೆ ಒಂದು ಗುಂಪಿನವರಿದ್ದಲ್ಲಿ ಇನ್ನೊಂದು ಗುಂಪಿನವರ ಪ್ರವೇಶದಿಂದ ಘರ್ಷಣೆ ಯುಂಟಾಗಿ ಅಭಾಸವಾದೀತೆಂಬ ಭಾವನೆಯಿಂದಲೋ, ಬೇರಾವುದೋ ಕಾರಣ

ಗಳಿಂದಲೋ, ಸಮ್ಮತಿ–ಅಸಮ್ಮತಿ ಸೂಚಿಸುವ ಮೊದಲೇ ವಿಮರ್ಶೆ ಮಾಡುವುದು ಇದರ ಸ್ವಾರಸ್ಯವಿರಬಹುದೇ)

"ಕಾ ದಕ್ಷಿಣಾ?" ಎಷ್ಟು ದಕ್ಷಿಣೆ?

"ದ್ವಾದಶ ಶತಂ ಗಾವೋ ದಕ್ಷಿಣಾ" ಹನ್ನೆರಡು ನೂರು ಹಸರುಗಳೇ ದಕ್ಷಿಣೆ (10–15ಲಕ್ಷ?)

2–3 ತಲೆಮಾರಿಗೊಬ್ಬ ಯಜಮಾನ ಇಂತಹ ಯಾಗದ ಕರ್ತೃ. ಷಡಂಗ ವೇದಾಧ್ಯಯನ ಮಾಡಿದ, ಷಟ್ ಶಾಸ್ತ್ರ ಪಾರಂಗತ, ಶ್ರೌತಸ್ಮಾರ್ತ ಕರ್ಮಾನುಷ್ಠಾನ ನಿಷ್ಠನಾದ ಋತ್ವಿಜ ತನ್ನ ಜೀವಿತಾವಧಿಯಲ್ಲಿ ಒಂದು ಅಥವಾ ಎರಡು ಯಾಗದಲ್ಲಿ ಮಾತ್ರ ಭಾಗವಹಿಸುತ್ತಿದ್ದ. ಸಾವಿರಾರು ವಿದ್ಯಾರ್ಥಿಗಳಿಗೆ ಪುಕ್ಕಟೆಯಾಗಿ ಶಿಕ್ಷಣ ನೀಡುವ ಆಶ್ರಮ ಶಾಲೆಯ ಕುಲಪತಿಯಾಗಿರುತ್ತಿದ್ದ. ಆಶ್ರಮವಾಸಿಗಳಿಗೆ ಪಂಚಾಮೃತ, ಪಂಚಗವ್ಯಗಳ ಧಾರಾಳ ಉಪಯೋಗಕ್ಕೆ ಹಸುಗಳು ಅವಶ್ಯಕವಾಗಿದ್ದ ಕಾಲವದು. ಅಲ್ಲದೆ ಹಸುಗಳೇ ಸಂಪತ್ತಿನ ವಿನಿಮಯದ ಕಾಲವೂ ಆಗಿತ್ತು.

ಆಯಾ ಕರ್ಮಾಂಗದ ಸ್ವರೂಪವನ್ನನುಸರಿಸಿ ದಕ್ಷಿಣೆ ನೀಡಬೇಕು. ದಿನಕ್ಕೆ 100 ರೂ. ದುಡಿಯುವ ಒಬ್ಬ ಕೂಲಿಯವನು ಪೂಜಾ ದಕ್ಷಿಣೆ 50 ರೂ. ನೀಡುತ್ತಾನಾದರೆ ಆ 50 ರೂ. ಸಾರ್ವಕಾಲಿಕ ಪೂಜಾ ದಕ್ಷಿಣೆಯೆಂದು ಪರಿಗಣಿಸಿ ತಿಂಗಳಿಗೆ 70–80 ಸಾವಿರ ವೇತನ ಪಡೆಯುವ ನೌಕರನೂ 50 ರೂ. ದಕ್ಷಿಣೆ ನೀಡುವುದಲ್ಲ. ಒಂದು ಗ್ರಹಚಾರ ಶಾಂತಿಯಲ್ಲಿ ಮಹಾರಾಜ 1/2 ಕೆ.ಜಿ. ಬಂಗಾರ ದಾನ ನೀಡುತ್ತಾನಾದರೆ ಅದೇ ಶಾಂತಿ ಮಾಡುವ ಅರಮನೆಯ ನೌಕರ ನೀಡುವ 5 ಗ್ರಾಂ ಬಂಗಾರದ ದಾನ ಆತನ ಶಕ್ತಿಮೀರಿದುದು. ರಾಜ ಪುರೋಹಿತನಿಗೆ ಎರಡು ಪೌರೋಹಿತ್ಯದಿಂದ 505 ಗ್ರಾಂ ಬಂಗಾರ ದೊರಕಿದಂತಾಗುತ್ತದೆ. ಪ್ರತಿಯೊಬ್ಬನೂ ತನ್ನ ಆದಾಯದಲ್ಲಿ ಶೇಕಡಾ ಇಂತಿಷ್ಟು ಭಾಗಗಳನ್ನು ತೆರಿಗೆ, ದಾನ, ಧರ್ಮ, ಕುಟುಂಬ ನಿರ್ವಹಣೆ, ಅಪತ್ಕಾಲೀನ ನಿಧಿ, ಸಮಾಜಸೇವೆ ಹೀಗೆ ಅನೇಕ ಬಾಬ್ತುಗಳಿಗಾಗಿ ಪ್ರತ್ಯೇಕವಾಗಿ ತೆಗೆದಿರಿಸಿ ವಿನಿಯೋಗಿಸ ಬೇಕೆಂದು ಅರ್ಥಶಾಸ್ತ್ರ ಹೇಳುತ್ತದೆ. (ಮಲನಾಡಿನ ಹೆಚ್ಚಿನ ಮನೆಗಳಲ್ಲಿ ಈಗಲೂ ತಾವು ಬೆಳೆಯುವ ಭತ್ತ, ಅಡಕೆ, ಕಾಳುಮೆಣಸು, ಯಾಲಕ್ಕೆ ಮೊದಲಾದ ಫಸಲಿನ ಇಂತಿಷ್ಟು ಭಾಗ ಗುರುಮಠಕ್ಕೋ, ಹೊರನಾಡು, ಕಿಗ್ಗಾ ಮೊದಲಾದ ದೇವಾಲಯಗಳಿಗೋ ಅಥವಾ ಕುಲದೇವಾ ಸನ್ನಿಧಿಗೋ (10 ಕ್ವಿಂಟಾಲ್ ಬೆಳೆಯುವವರು 10 ಕೆ.ಜಿ. 50ಕ್ವಿಂಟಾಲ್ ಬೆಳೆಯುವವರು 50 ಕೆ.ಜಿ. ಹೀಗೆ) ಮುಡಿಪು ತೆಗೆದಿಟ್ಟು ಸಲ್ಲಿಸುವ ಸತ್ಸಂಪ್ರದಾಯ ರೂಢಿಯಲ್ಲಿದೆ). ಹೀಗೆ ನೈಮಿತ್ತಿಕ (ನಿತ್ಯ) ಅಥವಾ ಕಾಮ್ಯ ಕರ್ಮಾಂಗದ ಸ್ವರೂಪ. ಪ್ರತಿಗೃಹೀತೃವಿನ ಅರ್ಹತೆ, ದಾನ–ದಕ್ಷಿಣೆ ನೀಡುವವನ ಆರ್ಥಿಕ ಸಾಮರ್ಥ್ಯವನ್ನು ಪರಿಗಣಿಸಿ ನಿರ್ಧರಿಸಬೇಕೇ ಹೊರತು ಇಂತಹ ಕಾರ್ಯಕ್ರಮಕ್ಕೆ ಇಂತಿಷ್ಟು ದಕ್ಷಿಣೆ ಎಂದು ನಿಗದಿಪಡಿಸಲಾಗದು. ಸತ್ಕಾರ್ಯಗಳಿಗೆ ನಿಯತವಾದ ಫಲ ದೊರಕಿಯೇ ದೊರಕುತ್ತದೆ ಎಂಬ ದೃಢವಾದ ನಂಬಿಕೆಯ ಆಧಾರದ ಮೇಲೆಯೇ ಧಾರ್ಮಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳು ಅನೂಚಾನವಾಗಿ ನಡೆದು ಬರುತ್ತಿವೆ. ಸಮಾಜದಲ್ಲಿ ಪ್ರತಿಯೊಂದು



ವೃತ್ತಿಯನ್ನೂ ಗೌರವಿಸುತ್ತಿದ್ದ ಕಾಲವೊಂದಿತ್ತು. ಅದರಲ್ಲೂ ಬ್ರಾಹ್ಮಣ ಪುರೋಹಿತನಿಗೆ ವಿಶೇಷ ಗೌರವವಿತ್ತು. ಬೇಸಾಯದ ವೃತ್ತಿಯವನು ತನ್ನಲ್ಲಿ ಮಿಕ್ಕಿದ ದವಸ ದಾನ್ಯ, ಹಣ್ಣು ತರಕಾರಿಗಳನ್ನು ಹಂಚುತ್ತಿದ್ದ. ರಜಕ ಬಟ್ಟೆ ಮಡಿ ಮಾಡಿ ನೀಡುತ್ತಿದ್ದ, ಕಟ್ಟು ಮಸ್ತಾದ ಬಲಿಷ್ಠ ದುರ್ಬಲರಿಗೆ ಆಸರೆಯಾಗಿ ನಿಲ್ಲುತ್ತಿದ್ದ, ನೇಕಾರ ಊರವರೆಲ್ಲರಿಗಾಗಿಯೇ ಬಟ್ಟೆ ನೇಯುತ್ತಿದ್ದ. ಸಹಕಾರ ಸಂಘವಿಲ್ಲದೆಯೂ ಪರಸ್ಪರ ಸಹಕಾರದಿಂದಲೇ ಸಮಾಜದ ಎಲ್ಲರೂ ಪರಸ್ಪರರ ಅವಶ್ಯಕತೆಗಳನ್ನು ಪೂರೈಸುತ್ತಿದ್ದರು. ಅಗತ್ಯಕ್ಕಿಂತಲೂ ಹೆಚ್ಚು ನೀಡಬೇಕೆನ್ನುವ ಮನಸ್ಸಿನ ಔದಾರ್ಯವನ್ನು ಕೃತಿಯಲ್ಲಿ ತೋರಿಸುತ್ತಿದ್ದರು. ಒಂದು ಸಣ್ಣ ಉದಾಹರಣೆ – ಪ್ರಸ್ಥ ಪರಿಮಿತಧಾನ್ಯಂ ನಿಕ್ಷಿಪ್ಯ" ಎಂದು ಪುಣ್ಯಾಹಕ್ಕೆ ಬೇಕಾದ ಅಕ್ಕಿಯ ಪ್ರಮಾಣವನ್ನು ಹೇಳಲಾಗಿದೆ. "ಪ್ರಸೃತಿ ದ್ವಿತಯಂ ಮಾನಂ, ಪ್ರಸ್ಥಂಮಾನ ಚತುಷ್ಟಯಂ" ಎರಡು ಮುಷ್ಟಿಗೆ ಒಂದು ಬೊಗಸೆ. ಯಜಮಾನನ ಕೈಯಲ್ಲಿನ ಎರಡು ಬೊಗಸೆಗಳಿಗೆ ಒಂದು ಮಾನ. ನಾಲ್ಕು ಮಾನಕ್ಕೆ ಒಂದು ಪ್ರಸ್ಥ. ಈಗ ಪುಣ್ಯಾಹಕ್ಕೆ 3 ಕೆ.ಜಿ. ಅಕ್ಕಿ ನಾಂದಿಗೆ ನಾಲ್ಕು ಕೆ.ಜಿ. ಅಕ್ಕಿ ಬೇಕಾಗುತ್ತದೆಂದು ಯಾವನಾದರೊಬ್ಬ ಪುರೋಹಿತ ಯಜಮಾನನಿಗೆ ಹೇಳುತ್ತಾನಾದರೆ ಆತ ತುಂಬಾ ದುರಾಸೆಯವನೆಂಬ ಅಪಖ್ಯಾತಿಗೆ ಪಾತ್ರನಾಗುತ್ತಾನೆ ಮತ್ತೆ ಮುಂದೆಂದೂ ಆತನನ್ನು ಪೌರೋಹಿತ್ಯಕ್ಕೆ ಕರೆಯಲೇಬಾರದೆಂಬ ಸನ್ನಿವೇಶ ನಿರ್ಮಾಣವಾಗುತ್ತದೆ. ಈಗ 50–60 ವರ್ಷಗಳ ಹಿಂದೆ, ತಲೆಯ ಮೇಲೆ ಹೊರಲಾರ ದಷ್ಟು ಭಾರದ, ಪಾಣಿ ಪಂಚೆಯಲ್ಲಿ ಕಟ್ಟಿದ, ಅಕ್ಕಿ ಕಾಯಿಯ ಗಂಟನ್ನು ಹೊತ್ತು ಏದುಸಿರು ಬಿಡುತ್ತಾ ಮೈಲಿಗಟ್ಟಲೆ ನಡೆಯುವ ಪುರೋಹಿತರನ್ನು ಕಾಣುವ ದೃಶ್ಯ (ಜೊತೆಗೆ ಗೊಣಗುತ್ತಾ ಕಾಲೆಳೆಯುತ್ತಾ ನಡೆಯುವ ಸಣ್ಣ ಮಾಣಿಯ ತಲೆಯ ಮೇಲೂ ಅಂತಹುದೇ ಒಂದು ಪುಟ್ಟಗಂಟು) ಸಾಮಾನ್ಯವಾಗಿತ್ತು.

ಹಿಂದಿನ ಕಾಲದಲ್ಲಿ ಈಗಿನಂತೆ ಪೌರೋಹಿತ್ಯ ಒಂದು ಪ್ರಧಾನ ವೃತ್ತಿಯಾಗಿರಲಿಲ್ಲ. ಅಗ್ರಹಾರಗಳಲ್ಲಿ ಪೂಜಾ ಜಪತಪಾದಿ ಅನುಷ್ಠಾನಗಳಲ್ಲಿ ತೊಡಗಿಸಿಕೊಂಡು ತಮ್ಮ ಪಾಡಿಗೆ ತಾವು ಇರುತ್ತಿದ್ದರು. ಗೃಹಸ್ಥರ ಮನೆಗಳಲ್ಲಿ ಆಗಾಗ ನಡೆಯುವ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ದೊರಕುವ ಅಕ್ಕಿ, ಕಾಯಿ, ತರಕಾರಿ, ದಕ್ಷಿಣೆ ಇತ್ಯಾದಿ ದೈನಂದಿನ ಜೀವನ ನಿರ್ವಹಣೆಗೆ ಧಾರಾಳವಾಗಿ ಸಾಕಾಗುತ್ತಿತ್ತು. ಧನಿಕನೂ ದರಿದ್ರರೂ ಸೇರಿದಂತೆ ಎಲ್ಲ ವರ್ಗದವರ ಪೌರೋಹಿತ್ಯದಲ್ಲಿ ಒಬ್ಬ ಎರಡಾಣೆ, ಇನ್ನೊಬ್ಬ ನಾಲ್ಕಾಣೆ, ಮತ್ತೊಬ್ಬ ಎಂಟಾಣೆ, ಮಗದೊಬ್ಬ ಎರಡು ರೂಪಾಯಿ ದಕ್ಷಿಣೆ ನೀಡುತ್ತಿದ್ದರು. ತೀರಾ ಬಡವ ಬರೇ ಎಲೆ–ಅಡಕೆ ನೀಡಿ ಅಡ್ಡ ಬೀಳುತ್ತಿದ್ದ. ಎಲ್ಲರನ್ನೂ ಮನಃಪೂರ್ವಕವಾಗಿ ಸಂತೋಷದಿಂದ ಆಶೀರ್ವದಿಸುತ್ತಿದ್ದರು. ವೃತ್ತಿಯಲ್ಲಿ ತೃಪ್ತಿಯಿತ್ತು. ಪುರೋಹಿತರ ಮನೆಯಲ್ಲಿ ನಡೆಯುವ ಮದುವೆ–ಮುಂಜಿ ಮೊದಲಾದ ಯಾವುದೇ ವಿಶೇಷ ಸಮಾರಂಭಗಳಲ್ಲಿ ಶಿಷ್ಯರೂ, ಆಸುಪಾಸಿನವರೂ ಸಂಪೂರ್ಣ ಸಹಕಾರ–ಸಹಾಯ ನೀಡುತ್ತಿದ್ದರು. ಒಟ್ಟಾರೆ ನಿಶ್ಚಿಂತ ಬದುಕು.

**ಎರಡು ಅತಿರೇಕಗಳು :** ಶತಮಾನಗಳ ಹಿಂದೆ ಪುರೋಹಿತ ಶಾಹಿಯ ದಬ್ಬಾಳಿಕೆ ಯಿಂದ ಬೇಸತ್ತ ಜನರು ನಾಸ್ತಿಕರಾಗುವ ಹಂತಕ್ಕೆ ತಲುಪಿದ್ದರು. "ಇಂತಹ ಯಾಗ

ಮಾಡಬೇಕು, ಇಲ್ಲದಿದ್ದರೆ ನರಕ ಪ್ರಾಪ್ತಿಯಾಗುತ್ತದೆ", "ಇಷ್ಟು (ದಾನ, ದಕ್ಷಿಣೆ) ನೀಡದಿದ್ದರೆ ನಿನಗೆ ಒಳಿತಾಗುವುದಿಲ್ಲ" ಎಂದು ಜನರನ್ನು ಹೆದರಿಸಿ, ನಂಬಿಸಿ, ಶಾಂತಿ ಯಜ್ಞ ಯಾಗಾದಿಗಳಿಗೆ ಪ್ರೇರಿಸುತ್ತಾ ಒತ್ತಾಯಿಸುತ್ತಿದ್ದರು. ಪರಿಣಾಮವಾಗಿ ಪುರೋಹಿತ ವರ್ಗದ ಮೇಲೆಯೇ ದ್ವೇಷ, ಧಾರ್ಮಿಕ ಆಚರಣೆಗಳ ಮೇಲೆ ತಿರಸ್ಕಾರವುಂಟಾಗಿ ನಾಸ್ತಿಕತೆಯತ್ತ ಜನ ವಾಲ ತೊಡಗಿದರು. ಪಶುಯಾಗ, ಪ್ರಾಣಿ ಹಿಂಸೆಯನ್ನು ವಿರೋಧಿಸುವ ಬೌದ್ಧ ಜೈನ ಧರ್ಮಗಳ ಪ್ರಭಾವ ಹೆಚ್ಚ ತೊಡಗಿತು. ಹೀಗೆ ಸ್ವಯಂಕೃತ ಅಪರಾಧದಿಂದಲೋ ಎಂಬಂತೆ ಪುರೋಹಿತಶಾಹಿಯ ಅವನತಿಯಾಯಿತು. ಈ ಐತಿಹಾಸಿಕ ಹಿನ್ನೆಲೆಯಲ್ಲಿ ಆದಿಶಂಕರಾಚಾರ್ಯರು ಅವತರಿಸಿ ನಾಸ್ತಿಕತೆಯನ್ನು ಹೋಗಲಾಡಿಸಿ ಸನಾತನ ಧರ್ಮವನ್ನು ಉದ್ಧರಿಸಿದರು.

ಅತಿರೇಕದ ಇನ್ನೊಂದು ಮುಖವೂ ಇದೆ. ಒಂದು ಮನೆಯಲ್ಲಿ ಅಪರೂಪದ ಒಂದು ಜನನ ಶಾಂತಿ ಕಾರ್ಯಕ್ರಮ. ನಾಲ್ಕಾರು ಜನ ಪುರೋಹಿತರು 8.00 ಗಂಟೆಗೆ ಹೋಗಿ ಪೂರ್ವ ಸಿದ್ಧತೆಗೆ ತೊಡಗಿದರು. 9.00 ಗಂಟೆಯ ಹೊತ್ತಿಗೆ ಮನೆಯ ಯಜಮಾನಿ "ಭಟ್ರೇ", ಇನ್ನೂ ಬಾಲೆ ಬಾಣಂತಿಗೆ ಎರಿಲಿಲ್ಲ (ಸ್ನಾನ ಮಾಡಿಸಿಲ್ಲ). ನೀವು ಅವಸರ ಮಾಡಿದರೆ ಹೇಗೆ?" ಎಂದು ಗೊಣಗಿದರು. ಭಟ್ಟರೆಲ್ಲ ಸುಮ್ಮನಿದ್ದರು. 11.00 ಗಂಟೆಯ ಸುಮಾರಿಗೆ ಪುಣ್ಯಾಹದೊಂದಿಗೆ ಶಾಂತಿ ಪ್ರಕ್ರಿಯೆ ಪ್ರಾರಂಭವಾಯಿತು. ಅರ್ಧಗಂಟೆ ಆಗುವಷ್ಟರಲ್ಲಿ ಮನೆಯ ಯಜಮಾನ "ಭಟ್ರೇ ಚುರ್ಕುಮಾಡಿ, ಚುರ್ಕುಮಾಡಿ" ಎಂದು ಅವಸರಿಸತೊಡಗಿದರು. ಅಂತೂ ಇಂತೂ 2.30ಕ್ಕೆ ಊಟ ಪ್ರಾರಂಭವಾಯಿತು. ಇದ್ದಕ್ಕಿಂದ್ದಂತೆ ಗಾಳಿ ಮಳೆಯ ಸೂಚನೆಯಾಯಿತು. ನಾಲ್ಕಾರು ಮೈಲಿ ನಡೆದೇ ಹೋಗಬೇಕಾದ ಹಳ್ಳಿಯ ಒಂಟಿ ಮನೆಯದು. ನೂರಾರು ಜನರ ಪಂಕ್ತಿಯ ನಡುವೆ ಪ್ರತಿಯೊಬ್ಬರನ್ನೂ ಉದ್ದೇಶಿಸಿ ಯಜಮಾನರು ಉಪಚರಿಸತೊಡಗಿದರು. "ಸಾವ್ಕಾಶ ಆಗ್ಬೇಕು, ಭಟ್ರದ್ದು ಹೊತ್ತಾತು, ಜೋರು ಮಳೆ ಬರೋ ಹಂಗದೆ, ಭಟ್ರದ್ದೇ ಹೊತ್ತಾತು, ಭಟ್ರದ್ದೇ ಹೊತ್ತಾತು" ಎಂದು ಹೇಳುತ್ತಲೇ ಭಟ್ಟರಿಂದಲೇ ಕಾರ್ಯಕ್ರಮ ತಡವಾದುದನ್ನು ಮತ್ತು ಬರಲಿರುವ ಮಳೆಯಿಂದಾಗಿ ಸಂಭವಿಸುವ ಅನಾಹುತವನ್ನು ಎಲ್ಲರಿಗೂ ಮನವರಿಕೆ ಮಾಡುತ್ತಾ ಪಂಕ್ತಿ ಯುದ್ಧಕ್ಕೂ ನಡೆದಾಡತೊಡಗಿದರು. ವೈದಿಕರ ಸಾಲಿನಲ್ಲಿ ಊಟಕ್ಕೆ ಕುಳಿತಿದ್ದ ಚಿಗುರು ಮೀಸೆಯ ನವತರುಣ ಕೂಡಲೇ ಎದ್ದು ಯಜಮಾನನಿಗೆ ತಪರಾಕಿ ತಟ್ಟುವವನಂತೆ ಅಸಹನೆಯಿಂದ ಬುಸುಗುಡುತ್ತಿದ್ದ. ಅಪ್ಪ ಮಾಣಿಯನ್ನು ಸಮಾಧಾನಪಡಿಸದಿದ್ದರೆ ಅನಾಹುತ ನಡೆದೇ ಹೋಗುತ್ತಿತ್ತು (ಇದು ಲೇಖಕನ ಬಾಲ್ಯದ ಒಂದು ನೈಜ ಘಟನೆ). ಹೀಗೆ ಯಜಮಾನ ಕೊಡುವ ಮೂರು ಕಾಸಿನ ದಕ್ಷಿಣೆಗಾಗಿ ಯಜಮಾನನ ಮರ್ಜಿಯಂತೆ ಅವನು ಕರೆದಾಗ ಹೋಗಿ, ಅವನು ಹೇಳಿದಷ್ಟನ್ನೇ ಹೇಳಿದಂತೆಯೇ ಮಾಡಿಸಿ, ಅವನಾಡಿದುದೆಲ್ಲವನ್ನೂ ಸಹಿಸಿ, ಕೊನೆಗೆ ಕೊಟ್ಟಷ್ಟನ್ನೇ ಮಹಾಪ್ರಸಾದವೆಂದು ಸ್ವೀಕರಿಸುವ ಅನಿವಾರ್ಯತೆಯ ಕಾಲವೊಂದಿತ್ತು. ತಾನು ದಕ್ಷಿಣೆ ನೀಡಿ ಪುರೋಹಿತನನ್ನು ಸಾಕುತ್ತಿದ್ದೇವೆಂಬ ಧೋರಣೆಯ ಯಜಮಾನ (ಕರ್ತೃ) ಇದ್ದ ಕಾಲವದು. ಪೌರೊಹಿತ್ಯ ವೃತ್ತಿಯ ಬಗೆಗೆ ತಾತ್ಸಾರ ಬರಲು ಇಂತಹ ಘಟನೆಗಳೇ ಕಾರಣ.



ಈಗ ಕಾಲ ಬದಲಾಗಿದೆ. ವೃತ್ತಿ ಗೌರವವನ್ನು ಯಜಮಾನರೂ, ಪುರೋಹಿತರೂ ಅರಿತುಕೊಂಡಿದ್ದಾರೆ. ಹಿಂದೆ ಪ್ರತಿಯೊಂದು ಮನೆತನಕ್ಕೆ ಒಬ್ಬ ಕುಲ ಪುರೋಹಿತನಿರುತ್ತಿದ್ದ. ಆತನಿಗೆ ವಿಶೇಷ ಗೌರವ ವಿರುತ್ತಿತ್ತು. ಆತನನ್ನು ಅಸಡ್ಡೆ ಮಾಡಿದರೆ ಕೆಡಕು ಉಂಟಾಗುತ್ತದೆಂಬ ನಂಬಿಕೆಯಿತ್ತು.

**ಮಹಿಳೆ ಮತ್ತು ಪೌರೋಹಿತ್ಯ :** ಗೃಹಿಣಿಯು ಸಹಧರ್ಮಿಣಿ, ಅರ್ಧಾಂಗಿ, ಪುರುಷನ ಮೂರು ಪುರುಷಾರ್ಥ (ಧರ್ಮ, ಅರ್ಥ, ಕಾಮ) ಗಳಲ್ಲಿ ಈಕೆಗೆ ಸಮಪಾಲು. ಶ್ರೌತದಲ್ಲಿ ಮಂತ್ರೋಚ್ಚಾರಣೆಯೊಮದಿಗೆ ಹೋಮಿಸುವ ಅಧಿಕಾರವಿದೆ. ಅಗ್ನಿಹೋತ್ರಿ ಅನಿವಾರ್ಯ ಕಾರಣಗಳಿಗಾಗಿ ಪರ ಊರಿಗೆ ಹೋದಾಗ ಪತ್ನಿ ಸಮಂತ್ರಕವಾಗಿ ಅಗ್ನಿ ಪರಿಚರ್ಯೆ ಮಾಡಬೇಕು. ಯಜನ, ಅಧ್ಯಯನ, ಅಧ್ಯಾಪನಕ್ಕೆ ಅರ್ಹತೆಯಿದೆ. ದಾನ ಪ್ರತಿಗ್ರಹಗಳ ಬಗೆಗೆ ಸ್ಪಷ್ಟತೆಯಿಲ್ಲ. ಗಾರ್ಗಿ, ಮೈತ್ರೇಯೀ ಮೊದಲಾದ ಋಷಿಕೆಯರೂ ಸ್ವತಂತ್ರವಾಗಿ ಯಜ್ಞಗಳಲ್ಲಿ ಅತ್ವಿಜ್ಯ ವಹಿಸಿದ ಉಲ್ಲೇಖವಿಲ್ಲ. ಉಪನಯನದ ಸಂಕೇತವಾಗಿ ಮುದುಮಗಳಿಗೆ ಉತ್ತರೀಯವನ್ನು ಧಾರಣೆ ಮಾಡಿಸಲಾಗುತ್ತದೆ. ಕನ್ಯೆಗೆ ಉಪನಯನ ಸಂಸ್ಕಾರ ನಡೆದ ಬಗೆಗೂ ಉದಾಹರಣೆಯಿದೆ. ಸೀತೆ ಸಂಧ್ಯಾವಂದನೆ (ಸಂಧ್ಯಾಕಾಲೀನ ಜಪಾನುಷ್ಠಾನ) ಮಾಡುತ್ತಿದ್ದಳೆಂದು ರಾಮಾಯಣದಲ್ಲಿ ವಾಲ್ಮೀಕಿಗಳು ಉಲ್ಲೇಖಿಸಿರುತ್ತಾರೆ.

**ಸಂಧ್ಯಾಕಾಲ ಮನಾಃ ಶ್ಯಾಮಾ ಧ್ರುವಮೇಷ್ಯತಿ ಜಾನಕೀ ।**
**ನದೀಂ ಚೇಮಾಂ ಶುಭಜಲಾಂ ಸಂಧ್ಯಾರ್ಥೇ ವರವರ್ಣಿನೀ ॥**

**ಸುಂದರಕಾಂಡ 14–48**

"ಸೀತಾದೇವಿ ಸಂಧ್ಯಾಕಾಲದ ಅನುಷ್ಠಾನಗಳಲ್ಲಿ ನಿಯತವಾದ ಬುದ್ಧಿಯುಳ್ಳವಳು. ತಿಳಿನೀರಿನ ಈ ಸರೋವರಕ್ಕೆ ಸಂಧ್ಯಾವಂದನಾರ್ಥವಾಗಿ ಬಂದೇ ಬರುವಳು."

ಸೀತೆಯನ್ನು ಹುಡುಕುತ್ತ ಬಂದು ತಿಳಿನೀರಿನ ಸರೋವರವನ್ನು ಕಂಡು ಹನುಮಂತ ಉದ್ಗರಿಸುವ ಮಾತಿದು. ಸಿತೆ ಸಂಧ್ಯಾವಂದನೆ ಮಾಡುತ್ತಿದ್ದಳೆಂಬುದಕ್ಕೆ ಇದು ಪ್ರಮಾಣ. ಯಾಕೆಂದರೆ ಹನುಮಂತ ಮಹಾಪ್ರಾಜ್ಞ, ಅವನ ತಿಳುವಳಿಕೆಯಲ್ಲಿ ತಪ್ಪಿಲ್ಲ. ಆದರೆ ಹಿಂದಿನ ಕಾಲದಲ್ಲಿ ಮಹಿಳೆಯರು ಪೌರೋಹಿತ್ಯ (ಯಾಜನ) ದಲ್ಲಿ ಭಾಗವಹಿಸುತ್ತಿದ್ದ ರೆಂಬುದಕ್ಕೆ ಇದು ಪ್ರಮಾಣವಾಗಲಾರದು.

ಹಿಂದೊಮ್ಮೆ ಮಹಾರಾಷ್ಟ್ರದಲ್ಲಿ (ಪೂನಾ) ಕಾರ್ಯನಿರ್ವಹಿಸುವ ಮಹಿಳಾ ಪುರೋಹಿತ ವರ್ಗವೊಂದರ ಬಗ್ಗೆ ಸಾಪ್ತಾಹಿಕದಲ್ಲಿ ಸಚಿತ್ರ ಲೇಖನ ಪ್ರಕಟವಾಗಿತ್ತು. ಈ ವೃತ್ತಿ ಪುರುಷರ ಮೇಲಿನ ಪಂಥಾಹ್ವಾನವೆಂದು ಅವರ ಅಭಿಪ್ರಾಯವಾಗಿತ್ತು. ಇತ್ತಿಚೆಗೆ ಮೈಸೂರಿನಲ್ಲಿ ಒಂದು ಮಹಿಳಾ ಯಾಜಕ ವರ್ಗ ಪೌರೋಹಿತ್ಯ ಪ್ರಾರಂಭಿಸಿದೆ. ಯಾಜ್ಞಿಕ ಪ್ರಕ್ರಿಯೆಯಲ್ಲಿ ಬ್ರಹ್ಮ, ಆಚಾರ್ಯ, ಋತ್ವಿಕ್, ಪುರೋಹಿತ ಮೊದಲಾದ ಎಲ್ಲ ಶಬ್ದಗಳೂ ಪುಲ್ಲಿಂಗದಲ್ಲೇ ವ್ಯವಹರಿಸಲ್ಪಡುತ್ತವೆ. ಆದುದರಿಂದ ಮಹಿಳೆಯರ ಈ ಪೌರೊಹಿತ್ಯ ವೃತ್ತಿ ಗೊಂದಲಮಯವಾಗಿದೆಯೆಂದು ನನ್ನ ಅನಿಸಿಕೆ. ಪುರುಷ ಪ್ರಧಾನವಾದ ಇತರೆ ಅನೇಕ

ವೃತ್ತಿಗಳಂತೆ ಪೌರೋಹಿತ್ಯದಲ್ಲೂ ಮಹಿಳೆಯರ ಪೈಪೋಟಿಯ ಅವಶ್ಯಕತೆ, ಅನಿವಾರ್ಯತೆ ಮತ್ತು ಔಚಿತ್ಯವನ್ನು ಕುರಿತು ಪ್ರಾಜ್ಞರು ಚಿಂತಿಸಬೇಕು.

**ಕರ್ಮಾಂಗ ಫಲ :** ಕರ್ಮಾಂಗದ ಪ್ರಾರಂಭದಲ್ಲಿ 'ದೇಶಕಾಲೌ ಸಂಕೀರ್ತ್ಯ' ಎಂದು ಹೇಳಲಾಗಿದೆ. ಅಂದರೆ ಕರ್ಮಾಂಗದ ಫಲವು ದೇಶ–ಕಾಲವನ್ನು ಅನುಸರಿಸಿಯೇ ಇರುತ್ತದೆ ಎಂದಾಯಿತು.

**ನ ಬುದ್ಧಿ ಶಾಸ್ತ್ರಾಧ್ಯಯನೇನ ಶಕ್ಯಂ ಪ್ರಾಪ್ತುಂ ವಿಶೇಷಂ ಮನುಜೈರಕಾಲೇ ।**
**ಮುರ್ಖೋ ಪಿ ಪ್ರಾಪ್ನೋತಿ ಕದಾಚಿದರ್ಥಾನ್ ಕಾಲೋ ಹಿ ಕಾರ್ಯಂ ಪ್ರತಿ ನಿರ್ವಿಶೇಷಃ ॥**

ಒಬ್ಬಾತನಿಗೆ ಫಲ ಪ್ರಾಪ್ತಿಯ ಯೋಗವಿಲ್ಲದಿರುವಾಗ ಬುದ್ಧಿಯ ಬಲದಿಂದಾಗಲೀ ಶಾಸ್ತ್ರಾಧ್ಯಯನದಿಂದಾಗಲೀ ಅಕಾಲದಲ್ಲಿ ವಿಶೇಷ ಫಲ ಪ್ರಾಪ್ತಿಯಾಗುವುದಿಲ್ಲ. ಕಾಲವು ಪ್ರಾಪ್ತವಾದೊಡನೆಯೇ ಮೂರ್ಖನೂ ಸಂಪತ್ತನ್ನು ಪಡೆಯುತ್ತಾನೆ. ಆದುದರಿಂದ ಕಾರ್ಯಸಿದ್ಧಿಗೆ ಸಾಮಾನ್ಯವಾಗಿ ಕಾಲವೂ ಕಾರಣವಾಗಿರುತ್ತದೆ.

ಮಹಾರಾಜರು, ರಾಷ್ಟ್ರಪತಿಗಳು ಅಥವಾ ಮಹಾಮಹಿಮರು ಆಹ್ವಾನಿಸಿದ ಮಾತ್ರಕ್ಕೆ ಎಲ್ಲೆಂದರಲ್ಲಿಗೆ, ಯಾವಾಗ ಬೇಕಾದರೂ ಬರುತ್ತಾರೆಂದಾಗಲೀ ಮತ್ತು ನೀಡಿದುದೆಲ್ಲವನ್ನೂ ಸ್ವೀಕರಿಸುತ್ತಾರೆಂದಾಗಲೀ ಯಾರೂ ನಿರೀಕ್ಷಿಸುವುದಿಲ್ಲ. ಸಿಂಗರಿಸಿದ, ಸ್ವಚ್ಛವಾದ ಪ್ರದೇಶಕ್ಕೆ ಆತ್ಮೀಯ ಆಹ್ವಾನದ ಮೇರೆಗೆ ಅವರು ಚಿತ್ತೈಸಿ 'ಸರ್ವಜನ ಹಿತಾಯ' ಕಾರ್ಯ ನೆರವೇರಿಸಿ ಭಕ್ತಿಯಿಂದ ಅರ್ಪಿಸಿದ ಪರಿಶುದ್ಧ ಕಾಣಿಕೆ, ಉಡುಗೊರೆಗಳನ್ನು ಸ್ವೀಕರಿಸಿ ತೆರಳುತ್ತಾರೆ. ಹಾಗೆಯೇ ಯಜ್ಞ–ಶಾಂತಿ ಮೊದಲಾದ ಕರ್ಮಾಂಗಗಳಲ್ಲಿ ನಾವು ದೇವತೆಗಳನ್ನು ಆಹ್ವಾನಿಸುವ ಪ್ರದೇಶವನ್ನು ಆಯ್ಕೆ ಮಾಡುವಾಗ ಜಾಗ್ರತೆವಹಿಸಬೇಕು. ನಾವು ನೀಡುವ ಹವಿಸ್ಸು ಸಮಿಧಾದಿಗಳನ್ನು ಚುನಾಯಿಸಬೇಕು. ಸ್ಪಷ್ಟವಾದ ಮಂತ್ರೋಚ್ಚಾರಣೆಯಿಂದ ಆಹ್ವಾನಿಸಿ, ಸ್ತುತಿಸಿ, ಶುದ್ಧವಾದ ಮನಸ್ಸಿನಿಂದ, ಭಕ್ತಿ ಪುರಸ್ಸರವಾಗಿ ಹವಿಸ್ಸನ್ನು ಅರ್ಪಿಸಬೇಕು. ಹಾಗಾದಾಗ ಮಾತ್ರವೇ ದೇವತೆಗಳು ಸಂತುಷ್ಟರಾಗುತ್ತಾರೆ. ಸಕಾಲದಲ್ಲಿ ನಮ್ಮ ಸತ್ಕಾರ್ಯ ಸತ್ಫಲವನ್ನು ನೀಡುತ್ತದೆ.

ಸಮಿಧ, ದರ್ಭೆ, ಮತ್ತಿತರ ಹೋಮ ದ್ರವ್ಯದ ಲಕ್ಷಣಗಳನ್ನು ಶಾಸ್ತ್ರದಲ್ಲಿ ಹೇಳಿದೆ. ಹೋಮಿಸುವ ವಿಧಾನವೂ ಉಕ್ತವಾಗಿದೆ. ಆದರೆ ಈಗ ಸಲಕ್ಷಣವಾದ ಸಮಿತ್ತು ದರ್ಭೆಗಳನ್ನಾಗಲೀ, ಇತರೆ ದ್ರವ್ಯಗಳನ್ನಾಗಲೀ ಶಾಸ್ತ್ರೀಯವಾದ ವಿಧಾನದಲ್ಲಿ ಸಂಗ್ರಹಿಸಲು ಮತ್ತು ಹೋಮಿಸಲು ಸಾಧ್ಯವಾಗದಿರುವುದೇ ಉಕ್ತವಾದ ಸಂಪೂರ್ಣ ಫಲ ಸಿಗದಿರಲು ಕಾರಣವಾಗಿದೆ. ಚಂದ್ರನ ಉದಯಾಸ್ತಗಳನ್ನನುಸರಿಸಿ ಸಮುದ್ರದಲ್ಲಿ ಏರಿಳಿತ ವಾಗುವಂತೆ ಸಮಿತ್ತು ಮೊದಲಾದ ಔಷಧೀಯ ಸಸ್ಯಗಳಲ್ಲಿ ಔಷಧೀಯ ಗುಣಗಳು ಏರುಪೇರಾಗುತ್ತವೆ. ಈ ರಹಸ್ಯವನ್ನು ಅರಿತು ಸಕಾಲದಲ್ಲಿ ಸಮಿಧಾದಿಗಳನ್ನು ಸಂಗ್ರಹಿಸ ಬೇಕು. ಅದು ತೀರಾ ಹಸಿಯಾಗಿರಲೂ ಬಾರದು. ಒಣಗಿರಲೂ ಬಾರದು. ನಿಯತವಾದ ಅಳತೆಯಲ್ಲಿರಬೇಕು. ಹೋಮದಲ್ಲಿ ಯಜ್ಞೇಶ್ವರನ ಅವಯವಗಳನ್ನು ಅರಿತು ಹೋಮಿಸ ಬೇಕು. ಹೀಗೆ ನೂರಕ್ಕೆ ನೂರರಷ್ಟು ಲಕ್ಷಣ ಶಾಸ್ತ್ರವನ್ನನುಸರಿಸಿ ಮಾಡುವ ಸತ್ಕಾರ್ಮಾನು ಷ್ಠಾನಕ್ಕೆ ಸಕಾಲದಲ್ಲಿ ಸತ್ಫಲ ದೊರಕುತ್ತದೆ. ಈ ದಿಸೆಯಲ್ಲಿ



ವೈಜ್ಞಾನಿಕ ಸಂಶೋಧನೆಗಳು ನಡೆದಿವೆ, ನಡೆಯುತ್ತಿವೆ ಮತ್ತು ಅದೃಷ್ಟವಾದ ಫಲಪ್ರಾಪ್ತಿಯ ಸತ್ಯತೆಯನ್ನು ಪ್ರತಿಪಾದಿಸುತ್ತಿವೆ.

**ದೇವತಾ ಜ್ಞಾನ ಹೀನಸ್ತು ಮಂತ್ರ ಹೀನೋ ಽಪಿ ಋತ್ವಿಜಃ ।**
**ಅಜ್ಯ ಹೀನಂ ಕುಲಂ ಹಂತಿ ಸ್ವರಹೀನಸ್ತು ಯೋಷಿತಃ ॥**
**ನಿಹಂತಿ ದಕ್ಷಿಣಾಹೀನಂ ಯಜಮಾನಂ ನ ಸಂಶಯಃ ।**
**ಅನ್ನಹೀನಃ ಪ್ರಜಾ ಹಂತಿ ನಾಸ್ತಿಯಜ್ಞಸಮೋ ರಿಪುಃ ॥**

ಋಷಿಚ್ಛಂದೋ ದೇವತಾ ಸ್ವರ–ಅನುದಾತ್ತ ಪರಿಜ್ಞಾನವಿಲ್ಲದ ಮಂತ್ರೋಚ್ಚಾರಣೆಯಿರುವ, ಅಜ್ಯ ಮತ್ತಿತರ ಹೋಮದ್ರವ್ಯಗಳ ಕೊರತೆಯಿರುವ ಮತ್ತು ಕರ್ಮಾಂಗಕ್ಕೆ ವಿಹಿತವಾದ ದಕ್ಷಿಣೆಯಿಲ್ಲದ ಯಜ್ಞ (ಭಗವಂತನ ಆರಾಧನೆ = ಯಜ–ದೇವಪೂಜಾ ಸಂಗತಿ ಕರಣ ದಾನೇಷು–ಕ್ರಿಯಾಪದ) ಶತ್ರುವಿನಂತೆ ಋತ್ವಿಜರಿಗೂ, ಮಹಿಳೆಯರಿಗೂ, ಯಜಮಾನನಿಗೂ, ದೇಶದ ಸಮಸ್ತ ಪ್ರಜೆಗಳಿಗೂ ಕೆಡುಕನ್ನುಂಟು ಮಾಡುತ್ತದೆ.

**"ಋಚಃ ಸಾಮಾನಿ ಯಜೂಂಷಿ ಸಾ ಹಿ ಶ್ರೀ ರಮ್ಯತಾ ಸತಾಂ ॥**

ಋಕ್ಸಾಮ ಯಜುರೆಂಬ ಮೂರು ವೇದಗಳೇ ನಿಜವಾದ ಸಂಪತ್ತೆಂಬುದು ವೇದವಾಣಿ. ಈ ವೇದಗಳನ್ನು ಅಧ್ಯಯನ ಮಾಡಿದ ವೈದಿಕ ವಿದ್ವಾಂಸರು ಸಮಾಜದ ಅಮೂಲ್ಯ ಸಂಪತ್ತು ಇಂತಹ ವಿದ್ವಾಂಸರು ತಮ್ಮ ಅನುಷ್ಠಾನ ಬಲದಿಂದ ಈ ಸಂಪತ್ತನ್ನು ಹೆಚ್ಚಿಸಿಕೊಂಡು ಶ್ರೌತ–ಸ್ಮಾರ್ತ ಕರ್ಮಗಳ ಅನುಷ್ಠಾನಕ್ಕೆ ಪ್ರೇರಿಸುತ್ತಾ ತಮ್ಮಲ್ಲಿನ ಆ ಸಂಪತ್ತನ್ನು ಇತರರಿಗೆ ಹಂಚುವುದರ ಮೂಲಕ ಸಮಾಜವನ್ನೂ ಶ್ರೀಮಂತಗೊಳಿಸ ಬೇಕು. ಆಗ ಅವರ ಅಧ್ಯಯನ ಸಾರ್ಥಕವಾಗುತ್ತದೆ.

**ದದತೋ ಮೇಽಕ್ಷಯಂ ವಿತ್ತಂ । ಧರ್ಮೇ ಶ್ರದ್ಧಾ ಚ ವರ್ಧತಾಂ ॥**
**ಮನೋ ಮೇ ರಮತಾಂ ಸತ್ಯೇ । ತ್ವತ್ರಸಾದ್ಧುತಾಶನ ॥**

**"ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್"**

**ಚತುರ್ಭಿಶ್ಚಚತುರ್ಭಿಶ್ಚದ್ವಾಭ್ಯಾಂ ಪಂಚಭಿರೇವಚ ।**
**ಹೂಯತೇ ಚ ಪುನರ್ದ್ವಾಭ್ಯಾಂ ತಸ್ಮೈಯಜ್ಞಾತ್ಮನೇ ನಮಃ ॥**

ಅಶ್ರಾವಯ (4), ಅಸ್ತುಶ್ರೌಷಟ್ (4), ಯಜ (2), ಯೇ ಯಜಾಮಹೇ (5), ವಷಟ್ (2) ಎಂಬ ನಾಲ್ಕು ನಾಲ್ಕು ಎರಡು, ಐದು ಮತ್ತು ಎರಡು ಅಕ್ಷರಗಳ ಮಂತ್ರಗಳಿಂದ ಹೋಮಿಸಲ್ಪಡುವ ಯಜ್ಞರೂಪಿಯಾದ ಪರಮಾತ್ಮನೇ! ನಿನಗೆ ನಮಸ್ಕಾರ. ನಮ್ಮನ್ನು ಸನ್ಮಾರ್ಗದಲ್ಲಿ ನಡೆಸು. ನಾನು ದಾನ ಮಾಡುವ ಸಂಪತ್ತು ಅಕ್ಷಯವಾಗುವಂತೆ, ಧರ್ಮದಲ್ಲಿ ಶ್ರದ್ಧೆ ಹೆಚ್ಚುವಂತೆ, ನಾನು ಸತ್ಯವನ್ನೇ ನುಡಿಯುವಂತೆ ಅನುಗ್ರಹಿಸು ಎಂದು ಪ್ರಾರ್ಥಿಸೋಣ.

# ಬ್ರಾಹ್ಮಣರು ಯಾರು ?

ಬ್ರಹ್ಮ ಶಬ್ದವನ್ನು ಬ್ರಾಹ್ಮಣ ಪದದ ಮೂಲವೆಂದು ಹೇಳಲಾಗಿದೆ. ಬ್ರಹ್ಮ ಅಂದರೆ ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದ, ಜಗನ್ನಿಯಾಮಕ ಪರಬ್ರಹ್ಮ ಎಂಬುದು ಒಂದು ಅರ್ಥ ಮತ್ತು ಈ ಪರಬ್ರಹ್ಮ ಸ್ವರೂಪವನ್ನು ಅರಿಯಲು ಬೇಕಾದ ಜ್ಞಾನರಾಶಿ ಯಾದ ವೇದಗಳು ಎಂದು ಇನ್ನೊಂದು ಅರ್ಥ. ಆದ್ದರಿಂದ ಬ್ರಾಹ್ಮಣನನ್ನು ವೇದ ಸ್ವರೂಪಿಯಾದ ದೇವತೆ ಎಂದು ಹೇಳಲಾಗಿದೆ.

"**ಯಾವತೀರ್ವೈದೇವಯಾಸ್ತಾಸ್ಸರ್ವಾವೇದವಿದಿ ಬ್ರಾಹ್ಮಣೇ ವಸಂತಿ ತಸ್ಮದ್ಬ್ರಾಹ್ಮಣೇಭ್ಯೋ ವೇದವಿಧ್ಭ್ಯೋ ದಿವೇದಿವೇ ನಮಸ್ಕುರ್ಯಾತ್...**" ಅಂದರೆ ವೇದ ವಿದ್ವಾಂಸನಾದ ಬ್ರಾಹ್ಮಣನು ಸಕಲದೇವತಾ ಸ್ವರೂಪನಾಗಿದ್ದು ಅವನನ್ನು ನಮಸ್ಕರಿಸಿ ಗೌರವಿಸಬೇಕೆಂಬುದು ತೈತ್ತರೀಯ ಆರಣ್ಯಕದ ಈ ಮಂತ್ರದ ಅರ್ಥ ಅಂತೆಯೇ ಈ ಜಗತ್ತು ದೈವಾಧೀನ, ದೇವತೆಗಳು ಮಂತ್ರಾಧೀನ, ಅಂತಹ ಮಂತ್ರಗಳನ್ನು ಅನುಷ್ಠಾನದ ಮೂಲಕ ಸಿದ್ಧಿಸಿಕೊಂಡ ಬ್ರಾಹ್ಮಣರು ನನಗೆ ದೇವರಿದ್ದಂತೆ (ಬ್ರಾಹ್ಮಣೋ ಮಮ ದೇವತಾಃ) ಎಂಬ ಶ್ರೀಕೃಷ್ಣನ ಹೇಳಿಕೆ ಮಹಾಪುರಾಣದಲ್ಲಿದೆ.

**ವೇದ ಪುರಾಣೇತಿಹಾಸ ಪ್ರಾಮಾಣ್ಯಾತ್ ನಾರಾಯಣ ಮುಖೋದ್ಗತಾಃ।**
**ಸರ್ವಾತ್ಮನಃ ಸರ್ವಕರ್ತಾರಃ ಸರ್ವ ಭಾವಾಶ್ಚ ಬ್ರಾಹ್ಮಣಾಃ ॥**

ಎಂಬುದು ಬ್ರಾಹ್ಮಣರ ಲಕ್ಷಣ. ಬ್ರಾಹ್ಮಣರು ಶ್ರೀ ಮನ್ನಾರಾಯಣನ ಮುಖದಿಂದ ಹುಟ್ಟಿದರು. ಅವರು ಸರ್ವಾತ್ಮರೂ ಸರ್ವ ಕರ್ತೃಗಳೂ ಸರ್ವಭಾವಸ್ವರೂಪರೂ ಆಗಿದ್ದಾರೆಂಬುದು ವೇದಪುರಾಣೇತಿಹಾಸಗಳಿಂದ ಸಿದ್ಧವಾಗಿದೆ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ-ಕರ್ಮ-ವಿಭಾಗಶಃ** – ಎಂಬ ಗೀತಾ ವಚನಕ್ಕೆ ಬೃಗುಮಹರ್ಷಿಗಳ ವಿವರಣೆ ಹೀಗಿದೆ.

"**ನ ವಿಶೇಷೋಸ್ತಿ ವರ್ಣಾನಾಂ ಸರ್ವಂ ಬ್ರಾಹ್ಮಮಿದಂ ಜಗತ್**"– ಈಶ್ವರ ಸೃಷ್ಟಿಯಲ್ಲಿ ಮೊದಲು ಎಲ್ಲರೂ ಬ್ರಾಹ್ಮಣರೇ ಆಗಿದ್ದರು. "ಕರ್ಮಭಿಃ ವರ್ಣತಾಂಗತಂ" ಕರ್ಮ ಗಳಿಗನುಗುಣವಾಗಿ ವರ್ಣ ವ್ಯವಸ್ಥೆಯಾಯಿತು.

**ಕಾಮ ಭೋಗ ಪ್ರಿಯಾ ಸ್ತೀಕ್ಷ್ಣಾಃ ಕ್ರೋಧನಾಃ ಪ್ರಿಯ ಸಾಹಸಾಃ।**
**ತ್ಯಕ್ತ ಸ್ವಧರ್ಮಾ ರಕ್ತಾಂಗಾಃ ತೇ ದ್ವಿಜಾಃ ಕ್ಷತ್ರತಾಂ ಗತಾಃ ॥**

ಬ್ರಾಹ್ಮಣೋಚಿತವಾದ ಧರ್ಮಾನುಷ್ಠಾನಗಳನ್ನು ತ್ಯಜಿಸಿ, ಕಾಮಭೋಗಗಳಲ್ಲಿ ಆಸಕ್ತರಾಗಿ ತೀಕ್ಷ್ಣ ಸ್ವಭಾವವುಳ್ಳವರಾಗಿ, ಸಾಹಸಕಾರ್ಯದಲ್ಲಿ ಪ್ರವೃತ್ತರಾದವರು ಕ್ಷಿತ್ರಿಯ ರಾದರು. ರಜೋಗುಣ ದ್ಯೋತಕವಾಗಿ ಇವರ ವರ್ಣವೂ ಕೆಂಪಾಯಿತು.



**ಗೋಭ್ಯೋ ವೃತ್ತಿಂ ಸಮಾಸ್ಥಾಯ ಪೀತಾಃ ಕೃಷ್ಯುಪಜೀವಿನಃ।**
**ಸ್ವಧರ್ಮಾನ್ನಾನುತಿಷ್ಠಂತಿ ತೇ ದ್ವಿಜಾಃ ವೈಶ್ಯತಾಂ ಗತಾಃ ॥**

ಸ್ವಧರ್ಮೋಚಿತವಾದ ಕರ್ಮಾನುಷ್ಠಾನ ಮಾಡದೇ, ಪಶು, ಪಾಲನೆ ಮತ್ತು ಕೃಷಿಯಿಂದ ಬದುಕಲು ಕಲಿತ ಬ್ರಾಹ್ಮಣರು ವೈಶ್ಯರಾದರು. ರಜೋಗುಣ ಮತ್ತು ತಮೋಗುಣ ಮಿಶ್ರಿತವಾದ ಸ್ವಾಭಾವವುಳ್ಳ ಇವರ ಬಣ್ಣವು ಸುವರ್ಣವರ್ಣವೆನಿಸಿತು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯರ ಈ ಮೇಲಿನ ಮನೋಧರ್ಮಕ್ಕನುಗುಣವಾಗಿ ಉಪನಯನ ದಲ್ಲಿ ಇವರಿಗೆ ಆಯಾ ಬಣ್ಣದ ದೀಕ್ಷಾವಸ್ತ್ರವನ್ನು ತೊಡಿಸುವಂತೆ ಧರ್ಮಶಾಸ್ತ್ರದಲ್ಲಿ ಹೇಳಿದೆ.

**ಕಾಷಾಯಂ ಬ್ರಾಹ್ಮಣಸ್ಯ ಮಾಂಜಿಷ್ಠ ಹಾರಿದ್ರೇ ಇತರಯೋಃ।**

**–ಗೌತಮ ಧರ್ಮಸೂತ್ರ.**

ತ್ಯಾಗ, ವೈರಾಗ್ಯ ದ್ಯೋತಕವಾದ ಕಾಷಾಯ ವಸ್ತ್ರ ಬ್ರಾಹ್ಮಣ ವಟುವಿಗೆ, ಮಾಂಜಿಷ್ಠ(ಮಂಜೂಟಿ)ದಂತೆ ಕೆಂಪು ಬಣ್ಣದ ಬಟ್ಟೆ ಕ್ಷತ್ರಿಯ ವಟುವಿಗೆ ಮತ್ತು ಹಾರಿದ್ರ– ಹಳದಿ ಬಟ್ಟೆ ವೈಶ್ಯ ವಟುವಿಗೆ ದೀಕ್ಷಾವಸ್ತ್ರವೆಂದು ಧರ್ಮಶಾಸ್ತ್ರದಲ್ಲಿ ಹೇಳಿದೆ. ಆದರೆ ಈಗ ಬ್ರಾಹ್ಮಣ ವಟುವಿಗೂ ಹಳದಿ ದೀಕ್ಷಾವಸ್ತ್ರ ಉಡಿಸುವ ಆಚಾರ ಯಾವಾಗ– ಹೇಗೆ ರೂಢಿಗೆ ಬಂತೆಂಬುದು ಚಿಂತನೀಯ ವಿಷಯ. ಇರಲಿ.

**ಹಿಂಸಾನೃತ ಪ್ರಿಯಾ ಲುಬ್ಧಾಃ ಸರ್ವಕರ್ಮೋಪ ಜೀವಿನಃ।**
**ಕೃಷ್ಣಾಃ ಶೌಚಪರಿಭ್ರಷ್ಟಾಃ ತೇ ದ್ವಿಜಾಃ ಶೂದ್ರತಾಂಗತಾಃ ॥**

ಶೌಚಾಚಾರಗಳಿಂದ ಭ್ರಷ್ಟರಾಗಿ; ಹಿಂಸೆಯಲ್ಲಿ ಪ್ರವೃತ್ತಿ, ಸುಳ್ಳು ಹೇಳುವುದರಲ್ಲಿ ಆಸಕ್ತಿ ಇರುವಂತಹ ಹಾಗೂ ನಾನಾವಿಧವಾದ ಕುತ್ಸಿಕ ಕರ್ಮಗಳಲ್ಲಿ ನಿರತರಾದವರು ಶೂದ್ರರಾದರು. ಇವರು ಕಪ್ಪು ಬಣ್ಣದವರಾಗಿ ತಮೋಗುಣ ಪ್ರಧಾನ ಸ್ವಭಾವ ದವರಾದರು.

**ಇತ್ಯೇತಾ ಚತುರೋವರ್ಣಾಃ ಯೇಷಾಂ ಬ್ರಾಹ್ಮೀ ಸರಸ್ವತೀ।**
**ವಿಹಿತಾ ಬ್ರಹ್ಮಣಾಪೂರ್ವಂ ಲೋಭಾತ್ತ್ವಜ್ಞಾನತಾಂಗತಾಃ ॥**

ಹೀಗೆ ಮೊದಲು ಬ್ರಾಹ್ಮಣರಾಗಿದ್ದವರೆಲ್ಲರಿಗಾಗಿ ಬ್ರಹ್ಮನು ವೇದಗಳನ್ನು ಪ್ರಕಟಿಸಿದ. ಆದರೆ ಲೋಭ ಮತ್ತು ಅಜ್ಞಾನಭಾವ ಹೊಂದಿದವರು ವೇದಾಧ್ಯಯನಕ್ಕೆ ಅನಧಿಕಾರಿ ಗಳಾದರು. ಅದೇ ಪರಂಪರೆ ಮುಂದುವರೆದು ವೇದಾಧ್ಯಯನಾನರ್ಹರೆಂಬ ವರ್ಗ ವುಂಟಾಯಿತು.



# ಜಗದ್ಗುರುಗಳಿಗೆ ಜರತಾರಿ ಏಕೆ ?

ಈ ಪ್ರಶ್ನೆ ಆಗಾಗ ಕೆಲವು ತಥಾಕಥಿತ ಬುದ್ಧಿ ಜೀವಿಗಳ ಮನಸ್ಸನ್ನು ಕಲಕುತ್ತಿರುವುದುಂಟು. ಇದರ ಹಿನ್ನಲೆಯಲ್ಲಿ ಕೇವಲ ಕುಜೋದ್ಯಮವಡಗಿರುವುದು ಮೇಲ್ನೋಟಕ್ಕೆ ತಿಳಿಯುತ್ತದೆ. ಆದರೂ ಪ್ರಶ್ನೆಯಲ್ಲಿ ಒಂದು ವೈಚಾರಿಕ ದೃಷ್ಟಿಕೋಣವೂ ಇದೆಯೆಂದು ಅನ್ನಿಸುತ್ತದೆ.

ಪರಮ ಸಾತ್ವಿಕರೂ, ಅತ್ಯಂತ ಸರಳ–ನೇರ–ನಡೆ–ನುಡಿಯ ಬದುಕಿಗೆ ಆದರ್ಶ ಪ್ರಾಯರೂ ಆಗಿದ್ದ ಮಠಾಧಿಪತಿಗಳೊಬ್ಬರು ನವರಾತ್ರಿಯಲ್ಲಿ ಜರತಾರಿಶಲ್ಯಧರಿಸಿ, ಸಿಂಹಾಸನಾಸೀನರಾಗಿ ನವರಾತ್ರಿ ಉತ್ಸವದಲ್ಲಿ ಭಾಗವಹಿಸುವ ಪ್ರಾಚೀನ ಸತ್ಸಂಪ್ರದಾಯವನ್ನು ಅನುಸರಿಸುತ್ತಿದ್ದರು. ಯಾವುದೋ ಸಂದರ್ಭದಲ್ಲಿ ಇವರ ಶಿಷ್ಯರೊಬ್ಬರು ಮಾತು ಮಾತಿನ ಭರಾಟೆಯಲ್ಲಿ ಸಂನ್ಯಾಸಿಗಳಿಗೆ ಜರತಾರಿಯ ವೈಭವವೇಕೇ? ಎಂಬ ಪ್ರಶ್ನೆಯನ್ನು ಕೇಳಿಯೇ ಬಿಟ್ಟರು. ನಂತರ ಅವರು ಪಶ್ಚಾತ್ತಾಪಪಟ್ಟಿರಲೂಬಹುದು. ಆದರೆ ಅಂದಿನಿಂದ ಸ್ವಾಮಿಗಳು ಜರತಾರಿ ಧರಿಸುವುದನ್ನು ನಿಲ್ಲಿಸಿದರು. ಸಿಂಹಾಸನ ಮೂಲೆ ಸೇರಿತು. ಮುಂದೆಂದೂ ಯಾರ–ಯಾವುದೇ ಆಗ್ರಹಕ್ಕೂ ಅವರು ಮನಸ್ಸು ಬದಲಿಸಲಿಲ್ಲ. ಶಿಷ್ಯರು ಅಭಿಮಾನದಿಂದ ಸಿಂಹಾಸನವನ್ನೇ ಅಲಂಕರಿಸಿ ಪೂಜಿಸುವುದನ್ನು ಆಚರಣೆಗೆ ತಂದರು. ಇದು ಶೀರ್ಷಿಕೆಯಲ್ಲಡೆಗಿದ ಕುಹಕದ ದುಷ್ಪರಿಣಾಮದ ಒಂದು ಉದಾಹರಣೆ.

ಆದಿ ಶಂಕರರು "**ಕರತಲ ಭಿಕ್ಷಃ, ತರು ತಲವಾಸಃ**" ಎಂದು ಸಂನ್ಯಾಸಿಗಳ ಲಕ್ಷಣವನ್ನು ಹೇಳುತ್ತಾರೆ. ಅಂದರೆ ಸನ್ಯಾಸಿಗಳಿಗೆ, ಜಗದ್ಗುರುಗಳಿಗೆ, ಅಥವಾ ಮಠಾಧಿ ಪತಿ, ಗುರುಗಳಿಗೆ, ಅವರಿಗಾಗಿ– ಏನೂ ಬೇಕಿಲ್ಲವೆಂಬುದು ನೂರಕ್ಕೆ ನೂರು ಸರಿ ಹಾಗಾದರೆ ಅವರೆಲ್ಲ ಜರತಾರಿ ಧರಿಸುವ, ಸಿಂಹಾಸನ ಏರುವ, ವೈಭವದ ವಾಹನಗಳಲ್ಲಿ ಸಂಚರಿಸುವ, ಔಚಿತ್ಯವೇನು? ಎಂಬ ಪ್ರಶ್ನೆ ಉದ್ಭವಿಸುವುದು ಸಹಜವೇ.

ಶೀರ್ಷಿಕೆಯ ಮೊದಲಪದವನ್ನು ವಿಶ್ಲೇಷಿಸೋಣ, "ಜಗದ್ಗುರು" ಶಬ್ದವನ್ನು ಎರಡು ರೀತಿಯಲ್ಲಿ (ಬಹುವ್ರೀಹಿ, ತತ್ಪುರುಷ ಸಮಾಸಗಳಲ್ಲಿ) ವ್ಯಾಖ್ಯಾನಿಸುತ್ತಾರೆ. ಜಗತ್ತೇ ಗುರುವಾಗಿ ಉಳ್ಳವರು ಜಗದ್ಗುರುಗಳು ಜಗತ್ತು ಅಂದರೆ ಈಶ್ವರ ಸೃಷ್ಟಿ. "ಸರ್ವಂ ಖಲ್ವಿದಂ ಬ್ರಹ್ಮ", ಸಮಸ್ತ ಸೃಷ್ಟಿಯನ್ನೇ ಭಗವಂತನೆಂದು ಅರಿತವರು. ಆತನನ್ನೇ "ಗುರು" ವೆಂದು ತಿಳಿದವರು ಜಗದ್ಗುರುಗಳು.

ಜಗತ್ತಿನ ಸಮಸ್ತ ಜೀವರಾಶಿಗೆ ಮಾರ್ಗದರ್ಶಕರಾಗಿ, ಜೀವಜಗತ್ತಿನ ಉನ್ನತಿಗೆ, ಉದ್ಧಾರಕ್ಕೆ, ಶ್ರೇಯಸ್ಸಿಗೆ ದಾರಿ ತೋರುವ, ಜಗತ್ಸ್ವರೂಪನಾದ ಭಗವಂತನ ಸಾಕ್ಷಾತ್ಕಾರಕ್ಕೆ ಬೆಳಕು ತೋರುವ "ಗುರು" ಜಗದ್ಗುರುಗಳು, ಭಗವಂತನನ್ನೂ ಜಗದ್ಗುರುವೆಂದು ವ್ಯವಹರಿಸುವುದುಂಟು.



**ಗುರುಗಳು ಏಕೆ ಬೇಕು ?**

"ಗುರು" ಎಂದರೆ ಹಿರಿದು. ದೊಡ್ಡದು, ಮಹತ್ವವುಳ್ಳದ್ದು ಎಂದು ಅರ್ಥ,. ಗುರುವೇ ಗುರುವಿಗೆ ಸರಿಸಾಟಿ, ಜಗತ್ತಿನ ಸಮಸ್ತ ಜನಸಮುದಾಯಕ್ಕೆ ಅದ್ವೈತ ಸಿದ್ಧಾಂತವನ್ನು ಬೋಧಿಸಿದ ಶಂಕರ ಭಗವತ್ಪಾದರು ದೈವಾಂಶ ಸಂಭೂತರು. ಬಾಲ್ಯದಲ್ಲೇ ಸ್ವಯಂ ಸ್ಫೂರ್ತಿಯಿಂದ ಸಮಸ್ತವನ್ನೂ ಅಭ್ಯಸಿಸಿದ ಸರ್ವಜ್ಞರು. ಆದರೂ ತಮ್ಮ ಜ್ಞಾನಾರ್ಜನೆಯ ಸಾರ್ಥಕತೆಗಾಗಿ ಯೋಗ್ಯ ಗುರುವನ್ನು ಅರಸುತ್ತಾ ಹೊರಟಿದ್ದರಲ್ಲವೇ? ಅಂದ ಮೇಲೆ ಗುರು ಸರ್ವೇಶ್ವರನಿಗಿಂತಲೂ ಸರ್ವ ಪ್ರಥಮ, ಬ್ರಹ್ಮಾ ವಿಷ್ಣು, ಮಹೇಶ್ವರ, ಹಾಗೂ ಪರಬ್ರಹ್ಮ ಸ್ವರೂಪನೆಂದು ಗುರುವನ್ನು ವರ್ಣಿಸಲಾಗಿದೆ. ದೇವತಾರಾಧನೆಗಿಂತಲೂ ಮೊದಲು ಗುರು ಸ್ಮರಣೆ ಮಾಡುವ ಸತ್ಸಂಪ್ರದಾಯವನ್ನು ನಾವು ಅನುಸರಿಸುತ್ತಿದ್ದೇವೆ.

ಭಗವಂತನಿಗಿಂತಲೂ ಗುರುವೇ ಸರ್ವಾಧಿಕನೆಂದು ಸಂತ ನಾನಕರು ಹೇಳುತ್ತಾರೆ. "**ಗುರು ಗೋವಿಂದ್‌ದೋವೂ ಖಡ್ಮೆ, ಕಾಕೇ ಲಾಗೌ ಪಾ ಈ**". "ಭಗವಂತ ಮತ್ತು ಗುರು ಇಬ್ಬರೂ ಏಕಕಾಲದಲ್ಲಿ ಪ್ರತ್ಯಕ್ಷರಾದ ಸಮಸ್ಯೆ ಎದುರಾದರೆ ಮೊದಲು ಗುರುವನ್ನು ವಂದಿಸುತ್ತೇನೆ. ಏಕೆಂದರೆ ಭಗವಂತನ ಸ್ವರೂಪ ಜ್ಞಾನವನ್ನುಂಟು ಮಾಡಿ ಆತನ ಸಾಕ್ಷಾತ್ಕಾರದ ಮಾರ್ಗವನ್ನು ತೋರಿದವನು ಗುರು". ಗುರುವಿಲ್ಲದೇ ಭಗವಂತನ ಅಸ್ತಿತ್ವದ ಅರಿವಾಗಲಾರದು" ಎಂದು ಅವರು ಹೇಳುತ್ತಾರೆ.

ಸದ್ಗುರುವಿನ ಉಪದೇಶ ಪಡೆದು ಅನುಷ್ಠಾನ ಮಾಡಿದ ವಿದ್ಯೆ ಮಾತ್ರವೇ ಸಕಾಲದಲ್ಲಿ ಸರಿಯಾದ ಫಲ ನೀಡುತ್ತದೆ. ಸಿದ್ಧಿಸುತ್ತದೆಯೆಂಬುದಕ್ಕೆ ಯವಕ್ರೀತ ಮುನಿಯ ಉದಾಹರಣೆ ನಿಡುತ್ತಾರೆ. ಭರದ್ವಾಜ ಮುನಿಯ ಏಕೈಕ ಪುತ್ರ ಯುವಕ್ರೀತ. ಸಾಂಪ್ರದಾಯಿಕವಾದ ಶಿಕ್ಷಣವಿಲ್ಲದೆಯೇ ಸಮಸ್ತವೇದಗಳೂ, ತನ್ನಲ್ಲಿ ಮೂರ್ತಿಮತ್ತಾಗಿ ನೆಲಸುವಂತೆ ಇಂದ್ರನಿಂದ ವರ ಪಡೆದು ವಿದ್ಯಾಪಾರಂಗತ ನೆನಸಿಕೊಂಡಿದ್ದ. ರೈಭ್ಯ ಮಹರ್ಷಿಯ ಕೋಪಾಗ್ನಿಯಿಂದ ಜನಿಸಿದ ರಾಕ್ಷಸನಿಂದ ಹತನಾದ. ಪರಾವಸು, ಅರ್ವಾವಸುಗಳೆಂಬ ಅಣ್ಣ ತಮ್ಮಂದಿರು ರೈಭ್ಯರ ಮಕ್ಕಳು. ರೈಭ್ಯರ ಶಿಷ್ಯನಾದ ಬೃಹದ್ಯುಮ್ನ ಮಹಾರಾಜ ತನ್ನ ಯಾಗದಲ್ಲಿ ಈ ಇಬ್ಬರು ಗುರು ಪುತ್ರರನ್ನು ಋತ್ವಿಜರನ್ನಾಗಿ ಆಹ್ವಾನಿಸಿದ, ಪರಾವಸು ಪ್ರಾಮಾಣಿಕವಾಗಿ ತನ್ನ ತಂದೆಯನ್ನು ಕೊಂದು ಬ್ರಹ್ಮ ಹತ್ಯಾ, ಪಿತೃ ಹತ್ಯಾದೋಷಕ್ಕೆ ಗುರಿಯಾಗುತ್ತಾನೆ. ಅರ್ವಾವಸು ಸೂರ್ಯಾಷ್ಟಾಕ್ಷರೀ ಮಂತ್ರವನ್ನು ಜಪಿಸಿ, ಸೂರ್ಯನ ಅನುಗ್ರಹದಿಂದ ಅಣ್ಣನ ಬ್ರಹ್ಮ ಹತ್ಯಾಪಾತಕವನ್ನೂ ಪರಿಹರಿಸುತ್ತಾನೆ. ಮತ್ತು ಅದೇ ಮಂತ್ರ ಸಿದ್ಧಿಯಿಂದ ಯವಕ್ರೀತನನ್ನೂ ಬದುಕಿಸುತ್ತಾನೆ. ಸಾಂಗವೇದಾಧ್ಯಯನ ಸಂಪನ್ನನಾಗಿ, ತಪಶ್ಚರ್ಯ ನಿರತನಾದ ತನ್ನನ್ನು ರೈಭ್ಯರ ಅಕಾರಣವಾದ ಕೋಪಾಗ್ನಿ ದಹಿಸಲು ಕಾರಣವೇನೆಂದು ಯವಕ್ರೀತ ಅಗ್ನಿ ಮೊದಲಾದ ದೇವತೆಗಳನ್ನು ಪ್ರಶ್ನಿಸುತ್ತಾನೆ. ಆಗ ದೇವತೆಗಳು ಹೀಗೆ ಉತ್ತರಿಸುತ್ತಾರೆ.

**ಮೈವಂ ಕೃಥಾ ಯವಕ್ರೀತ ಯಥಾ ವದಸಿ ವೈ ಮುನೇ ।**
**ಋತೇ ಗುರುಮಧೀತಾ ಹಿ ಸುಖಂ ವೇದಾಸ್ತ್ವಯಾ ಪುರಾ ॥**

"ವೇದಾಧ್ಯಯನ ಸಂಪನ್ನನನ್ನು ಯಾವುದೇ ವಿಧವಾದ "ಕೃತ್ಯೆ" (ಆಭಿಚಾರಿಕಗಳು) ಬಾಧಿಸಲಾರವೆಂಬುದು ಸತ್ಯ. ಆದರೆ ಗುರು ಶುಶ್ರೂಷೆಯಿಂದ, ಗುರುವಿನ ಒಲುಮೆಗೆ ಪಾತ್ರನಾಗಿ, ಗುರುಮುಖದಿಂದ ಉಪದೇಶ ಪಡೆದ ವಿದ್ಯೆ ಮಾತ್ರ ಫಲಿಸುತ್ತದೆ. ಆದರೆ ನೀನು ಗುರು ಮುಖದಿಂದ ಸಂಪ್ರದಾಯ ಬದ್ಧವಾದ ಶಿಕ್ಷಣವನ್ನು ಪಡೆದಿಲ್ಲವಾದ್ದರಿಂದ ಅದರ ಪಾವಿತ್ರ್ಯದ ಪ್ರಭಾವ ನಿನ್ನನ್ನು ಉಳಿಸಲಿಲ್ಲ".

ಹೀಗೆ ಅಪಾರ ಮಹಿಮಾ ಸಂಪನ್ನರಾದ ಗುರುಗಳಿಂದಾಗಲೀ, ಸರ್ವಸಂಗ ಪರಿತ್ಯಾಗಿಗಳಾದ ಸಂನ್ಯಾಸಿಗಳಿಂದಾಗಲೀ ನಾವು ಮೋಕ್ಷ ಸಾಧಕವಾದ ಜ್ಞಾನವನ್ನು ಮಾತ್ರವೇ ಪಡೆಯಬಹುದು. ಆತ್ಮೋನ್ನತಿಯನ್ನೂ ಸಾಧಿಸಬಹುದು. ಆದರೆ ಯುಗ ಧರ್ಮದ ಪ್ರಭಾವದಿಂದಾಗಿ ಎಲ್ಲರೂ ಒಮ್ಮೆಲೇ ಮೋಕ್ಷ ಸಾಧನೆಯ ಹಂತವನ್ನು ತಲಪಲು ಸಾಧ್ಯವಿಲ್ಲ. ಮೋಕ್ಷದ ಮೊದಲ ಮೂರು ಹಂತಗಳ ಸಾಧನೆಗೆ, ಅಂದರೆ ಐಹಿಕ ಜೀವನದ ಸಫಲತೆಗೆ ವೈಭವದ ವಸ್ತುಗಳೂ, ವಿಲಾಸ ಸಾಮಗ್ರಿಗಳೂ ನಮಗೆ ಅನಿವಾರ್ಯ. ಇಂತಹವುಗಳನ್ನೂ, ಇವುಗಳೆಲ್ಲದರ ಮೂಲವಾದ ದ್ರವ್ಯವನ್ನೂ ನಾವು ಗುರುಗಳಿಂದ ಅಪೇಕ್ಷಿಸುವುದಾದರೆ, ಅವರಿಗೆ ನಾವೇ ವೈಭವದ ವಸ್ತು ಮತ್ತು ದ್ರವ್ಯದ ವಿಕಾರವನ್ನೂ ಸಮರ್ಪಿಸಿ ಅನುಗ್ರಹ ಪ್ರಸಾದವೆಂದು ಪುನಃ ಸ್ವೀಕರಿಸಬೇಕು. ಆಮುಷ್ಮಿಕ ವಿದ್ಯೆಯೊಂದನ್ನುಳಿದು ಬೇರೆ ಯಾವುದನ್ನೇ ನಾವು ಅಪೇಕ್ಷಿಸಿದರೂ ಅವರು ಶೂನ್ಯದಿಂದ ಸೃಷ್ಟಿಸಿ ಅನುಗ್ರಹಿಸುತ್ತಾರೆಂದು ನಿರೀಕ್ಷಿಸಲಾಗದು. ನಮಗಾಗಿಯಾದರೂ ನಾವು ಅವರಿಗೆ ಎಲ್ಲವನ್ನೂ ಸಮರ್ಪಿಸಬೇಕು. (ತೇನ ತ್ಯಕ್ತೇನ ಭುಂಜೀಥಾಃ–ಗೀತೆ) ಅವರನ್ನು ವೈಭವದಿಂದ ಪಲ್ಲಕ್ಕಿಯಲ್ಲೋ, ರಥದಲ್ಲೋ ಮೆರವಣಿಗೆ ಮಾಡಬೇಕು. ಭಗವಂತನ ಸನ್ನಿಧಿಯಲ್ಲೂ ಅವರು ಜರತಾರಿ ಶಲ್ಯದಿಂದ ಸಿಂಗರಿಸಿಕೊಂಡು ಸಿಂಹಾಸನಾ ರೋಢರಾಗಿ ಧ್ಯಾನಾಸಕ್ತರಾಗಿರುವುದನ್ನು ಕಂಡು ಆನಂದಿಸಬೇಕು.

ಜಗತ್ತಿಗೇ ಜ್ಞಾನದ ಬೆಳಕು ತೋರುವ ಗುರುಗಳಿಗಾಗಲೀ, ಸಂನ್ಯಾಸಿಗಳಿಗಾಗಲೀ, ಅಥವಾ ಅವರು ಸಾಕ್ಷಾತ್ಕರಿಸುವ ನಿರ್ಗುಣನೂ, ನಿರಾಕಾರನೂ, ಸರ್ವ ವ್ಯಾಪಿಯೂ ಆದ ಭಗವಂತನಿಗಾಗಲೀ, ಅವರಿಗಾಗಿ ಏನೂ ಬೇಡ, ಆದರೆ ನಮಗೆ ಬೇಕು. ಸೌಂದರ್ಯ ಪ್ರಜ್ಞೆಯಿಲ್ಲದ ಸಣ್ಣ ಮಕ್ಕಳಿಗೆ ಚಂದದ ಉಡುಪನ್ನೂ ವಿವಿಧ ಆಭರಣ ಗಳನ್ನೂ ತೊಡಿಸುವುದು ಬಂಧುಗಳ, ತಾಯ್ತಂದೆಯರ ಸಂತೋಷಕ್ಕಾಗಿ, ಮನೆಯನ್ನೋ, ದೇವಾಲಯವನ್ನೋ, ಭಗವಂತನ ವಿಗ್ರಹವನ್ನೋ ಅಲಂಕರಿಸುವುದು, ದೇವರ ಮೂರ್ತಿ ಯನ್ನು ಮೆರವಣಿಗೆ ಮಾಡುವುದು, ರಥೋತ್ಸವಾದಿಗಳನ್ನು ನೆರವೇರಿಸುವುದು –ನಮ್ಮ ನೋಡುಗರ ಕಣ್ಣಿನ ಆನಂದಕ್ಕಾಗಿ (ಭಗವಂತನು ಏನನ್ನೂ ತಿನ್ನುವುದಿಲ್ಲವೆಂದು ಗೊತ್ತಿದ್ದರೂ ನಾನಾ ವಿಧವಾದ ನೈವೇದ್ಯವನ್ನು ಅರ್ಪಿಸುವುದು ನಮ್ಮ ತೃಪ್ತಿಗಾಗಿ, ಅತನ



ಅನುಗ್ರಹ ಪ್ರಾಪ್ತಿಗಾಗಿ, ಜಿಹ್ವಾಚಾಪಲ್ಯ ತೀರಿಸುವುದಕ್ಕಾಗಿ ಉದರಂಭರಣಕ್ಕಾಗಿ.)

ದೇವಲಯಗಳಿಗೋ, ಗುರುಹಿರಿಯರ ದರ್ಶನಕ್ಕೋ, ರಾಜ–ಮಹಾರಾಜರ ಅಥವಾ ಅವರ ಪ್ರತಿನಿಧಿ ಅಧಿಕಾರಿಗಳ ಭೇಟಿಗೋ ಶುಚಿರ್ಭೂತರಾಗಿ ಸಿಂಗರಿಸಿಕೊಂಡು ಹೋಗುವುದು ನಮಗಾಗಿಯೇ ಹೊರತು ದೇವರಿಗಾಗಿಯೂ ಅಲ್ಲ, ಅಧಿಕಾರಿ ಗಳಿಗಾಗಿಯೂ ಅಲ್ಲ. ಅವರನ್ನು ಮೆಚ್ಚಿಸುವುದರ ಮೂಲಕ ಸ್ವಾರ್ಥ ಸಾಧನೆಗಾಗಿ, ಇಷ್ಟಾರ್ಥ ಸಿದ್ಧಿಗಾಗಿ, ಹಾಗೆಯೇ ಗುರುಗಳ–ಸಂನ್ಯಾಸಿಗಳ ವೈಭವದ ಆಚರಣೆಗಳು ಶಿಷ್ಯರ ಇಷ್ಟಪೂರ್ತಿಗಾಗಿ, ಶಿಶುವಿನ ತೊಡುಗೆಯಾಗಲೀ, ಭಗವಂತನ ಅಲಂಕಾರ ಗಳಾಗಲೀ, ಗುರುಗಳ ಬಿರುದು ಬಾವಲಿಗಳಾಗಲೀ, ಅವರವರು, ಸ್ವತಃ ಖರೀದಿಸಿದ್ದಲ್ಲ, ಹಿರಿಯರು ಉಡುಗೊರೆಯಾಗಿ ನೀಡಿದ್ದು, ಭಕ್ತರು ಶ್ರದ್ಧಾ ಭಕ್ತಿಯಿಂದ ಸಮರ್ಪಿಸಿದುದು.

**ಆದ್ದರಿಂದ ನಮಗಾಗಿ, ನಮ್ಮ ಸಂತೋಷಕ್ಕಾಗಿ, ನಮ್ಮ ತೃಪ್ತಿಗಾಗಿ ಗುರುಗಳು ಪೀತಾಂಬರಧರಿಸಬೇಕು, ಪಲ್ಲಕ್ಕಿಯಲ್ಲಿ ಮೆರವಣಿಗೆ ಬರಬೇಕು. ಸಿಂಹಾಸನ ವಿರಬೇಕು. ಎಲ್ಲ ಆಡಂಬರವನ್ನೂ ಸಹಿಸಬೇಕು. ಇದೇ ಶಿಷ್ಯರ, ಭಕ್ತರ ಅಪೇಕ್ಷೆಯಾಗಿರಬೇಕು.**

# ಪ್ರೇಮ ಮತ್ತು ವಿವಾಹ

12–02–2004ರಂದು ದೂರದರ್ಶನದಲ್ಲಿ ಒಂದು ಸ್ವಾರಸ್ಯಕರ ಸುದ್ದಿ ಪ್ರಸಾರ ವಾಯಿತು. ಉತ್ತರ ಪ್ರದೇಶದ ಒಂದು ಕೋಮಿನವರಲ್ಲಿ ಪಂಚಾಯ್ತಿ ಕಟ್ಟೆಯಲ್ಲಿ ಮದುವೆ ನಿರ್ಣಯವಾಗಬೇಕು. ಪಂಚಾಯ್ತು ನಿರ್ಣಯದಂತೆ ಮದುವೆ ನಡೆಯದಿದ್ದರೆ ಅಥವಾ ನಿರ್ಣಯಕ್ಕೆ ವಿರುದ್ಧವಾಗಿ ಮದುವೆ ನಡೆದರೆ ಮರಣದಂಡನೆ ಶಿಕ್ಷೆ. ಈ ವರೆಗೆ 17 ಮರಣದಂಡನೇಯಾಗಿದೆ.–ವಧೂವರರ ಅಥವಾ ಮಾತಾಪಿತೃಗಳ ಪಾತ್ರ ಗೌಣ ವಾಗಿರುವ ಇಂತಹ ಆಚರಣೆ21ನೇ ಶತಮಾನದ ನಂಬಲಾಗ ಸತ್ಯ.

ಹಿಂದೊಂದು ಕಾಲದಲ್ಲಿ ಕುಟುಂಬದ ಹಿರಿಯರು, ಪುರೋಹಿತರು ಬಂಧು ಬಳಗದವರು ಸೇರಿ ಮದುವೆಯನ್ನು ನಿರ್ಧರಿಸುತ್ತಿದ್ದ ಶಿಷ್ಟಸಂಪ್ರದಾಯವಿತ್ತು ಅಂತಃಪಟ ಸರಿಸುವತನಕ ವಧೂವರರು ಪರಸ್ಪರ ಮುಖಾವಲೋಕನ ಮಾಡದ ಮತ್ತು ರಾತ್ರಿ ಅರುಂಧತೀ ದರ್ಶನದ ತನಕ ವಾಙ್ನಿಯಮ (ಪರಸ್ಪರ ಮಾತನಾಡದೆ ಮೌನದಿಂದಿರುವ ನಿಯಮ) ಪಾಲಿಸುವ ಶಿಷ್ಟಾಚಾರವಿತ್ತು. ಆದರೆ ಆಧುನಿಕ ವಿಚಾರಗಳು ನಮ್ಮ ಮೇಲೂ ಪ್ರಭಾವ ಬೀರುತ್ತಿದೆ. (Every thing is fair in love and war) (ಪ್ರೇಮಾಂಗಣ ಮತ್ತು ರಣಾಂಗಣಗಳಲ್ಲಿ ಎಲ್ಲವೂ ಸುಂದರ) ಎಂಬುದು ಇತ್ತೀಚೆಗೆ ಬೀಸುತ್ತಿರುವ ಹೊಸಗಾಳಿ,

ಪ್ರೇಮ ಮತ್ತು ವಿವಾಹಕ್ಕೆ ಸಂಬಂಧಿಸಿದಂತೆ, ಪ್ರಣಯ ಪ್ರಸಂಗವನ್ನು ಸವಿಯುವ ರೀತಿಯನ್ನು ಕುರಿತಂತೆ, ವಿವಿಧ ದೇಶಗಳ ಅನೇಕ ಜನಾಂಗದವರ ಆಚಾರ ವಿಚಾರಗಳ ಸ್ವಾರಸ್ಯಕರ ಸಂಗತಿಗಳು ಇಲ್ಲಿವೆ.

ಪೆರುಗ್ವೇ ದೇಶದ ಚಾಕೊ ಮತ್ತು ಚೊರೋಟಿ ಜನಾಂಗದ ಇಬ್ಬರು ಮಹಿಳೆಯರಲ್ಲಿ ಒಬ್ಬನೇ ಪುರುಷನನ್ನು ಮದುವೆಯಾಗಲು ಪೈಪೋಟಿ ಉಂಟಾಗುತ್ತದೆ. ಚೂಪಾದ ಕೈಚೀಲ ಧರಿಸಿ ಇಬ್ಬರೂ,  ಪರಸ್ಪರ ಕಾದಾಡುತ್ತಾರೆ. ಗೆದ್ದವರು ಆ ಪುರುಷನನ್ನು ಮದುವೆಯಾಗುತ್ತಾರೆ. ಪ್ರಣಯ ನಿಮಿತ್ತ, ಪರಿಣಯಕ್ಕಾಗಿ ಕಲಹ; ಹೇಗಿದೆ? ಪ್ರಿಯಕರನನ್ನು ಒಲಿಸಿಕೊಳ್ಳುವ, ಆಯ್ಕೆ ಮಾಡುವ ಅನೇಕ ವಿಧಾನಗಳು ವಿನೋದ ಪೂರ್ಣವಾಗಿದೆ. "ಪುಪು ಆ" ಸಮಿಪದ ಟ್ರೋಬ್ರಿಯಂಡ್ ನಡುಗಡ್ಡೆಯಲ್ಲಿನ ಹುಡುಗಿ ಯರು ತಮ್ಮ ಆಯ್ಕೆಯ ಪ್ರಿಯಕರನನ್ನು ಸಮೀಪಿಸಿ ಆತನನ್ನು ಕಚ್ಚುವುದರ ಮೂಲಕ ಪ್ರೇಮನಿವೇದನೆ ಮಾಡುತ್ತಾರೆ.

Bundling ಎಂದು ಕರೆಯಲ್ಪಡುವ ವಿಶಿಷ್ಟ ರೀತಿಯ ಪ್ರಣಯಕೇಳಿ ಥಂಡಿ ಹವಾಮಾನದ ಸ್ಕಾಟ್‌ಲ್ಯಾಂಡ್, ನ್ಯೂ ಇಂಗ್ಲೆಂಡ್, ವೇಲ್ಸ್, ಹಾಲೆಂಡ್ ಮೊದಲಾದ ಊರುಗಳಲ್ಲಿ ಪ್ರಚಲಿತವಾಗಿತ್ತು ಪ್ರೇಮಿಗಳು ಬಟ್ಟೆಯನ್ನು ಧರಿಸಿ, ಉಣ್ಣೆಯ ಪ್ರತ್ಯೇಕ ಬ್ಲಾಂಕೆಟ್‌ಗಳನ್ನು ಸುತ್ತಿಕೊಂಡು ಹಾಸಿಗೆಯಲ್ಲಿ ಒಟ್ಟಿಗೆ ಮಲಗುವ ವಿಶಿಷ್ಟ ಸಂಪ್ರದಾಯ ಇಲ್ಲಿ ಜನಪ್ರಿಯವಾಗಿತ್ತು.

19ನೇ ಶತಮಾನದ ಸುಮಾರಿಗೆ ಸ್ಕಾಟ್‌ಲ್ಯಾಂಡಿನ ಕೆಲವು ಕಡೆ ಗರ್ಭಧರಿಸುವಿಕೆಯೇ ಮದುಮಗಳಿಗೆ ಮದುವೆಯಾಗಲು ಅರ್ಹತೆಯೆಂಬ ವಿಚಿತ್ರ ನಿಯಮ ಜಾರಿಯಲ್ಲಿತ್ತು ಆದರೆ ನಮ್ಮ ಭಾರತೀಯ ಪರಂಪರೆಯಲ್ಲಿ ಮದುವೆಗೆ ಮೊದಲು ಗರ್ಭಧರಿಸುವುದು ಮಹಾಪರಾಧ, ಮಾತ್ರವಲ್ಲ ಬಹಿಷ್ಕಾರಾರ್ಹ, ಇತ್ತೀಚೆಗೆ ದೃಶ್ಯ ಮಾಧ್ಯಮಗಳಲ್ಲಿ ಕಾಣುವ ಇಂತಹ ಸನ್ನಿವೇಶಗಳಿಗೆ ಶಾಸ್ತ್ರ, ಸಮ್ಮತಿಯೂ ಇಲ್ಲ; ಕುಟುಂಬದ ಹಿರಿಯರ ಅನುಮೋದನೆಯಂತೂ ಇಲ್ಲವೇ ಇಲ್ಲ, ಇದು ದೇಶಾಂತರದ ಕೀಳು ಸಂಸ್ಕೃತಿಯ ಅಂಧಾನುಕರಣೆಯೇಸರಿ, ಭಾವೀ ಜನಾಂಗದ ಮೇಲೆ ಇದರ ಪ್ರಭಾವದ ದುಷ್ಪರಿಣಾಮ ಖಂಡಿತಾ ಉಂಟಾಗುತ್ತದೆ.

ಗಿಡ ಮರಗಳನ್ನು ಸುತ್ತಿ ಪ್ರಣಯಗೀತೆಯೊಂದಿಗೆ ಕುಣಿದಾಡಿದ ನಂತರವೇ ಗುರು ಹಿರಿಯರ ಸಮ್ಮತಿಯಿಂದಲೋ, ವಿರೋಧದಿಂದಲೋ ವಿವಾಹ ನಿಶ್ಚಿತಾರ್ಥದ ಶಾಸ್ತ್ರ, ದೃಶ್ಯಮಾಧ್ಯಮಗಳ ಪ್ರಭಾವದಿಂದ ಇತ್ತೀಚೆಗೆ ರೂಢಿಗೆ ಬರುತ್ತಿದೆ. ಮುಂದೊಂದು ದಿನ ಇದೇ ಶಿಷ್ಟ ಸಂಪ್ರದಾಯವೆಂದು ಪ್ರಚಲಿತವಾದರೂ ಆಶ್ಚರ್ಯವಿಲ್ಲ. ಆದರೆ ಶಾಂತ ಸಾಗರದ ದ್ವೀಪವೊಂದರಲ್ಲಿ ಹಿರಯರೇ ಮದುವೆಯ ನಿಶ್ಚಿತಾರ್ಥ ನೆರವೇರಿಸುತ್ತಾರೆ. ಗೌರವಾನ್ವಿತ ವ್ಯಕ್ತಿಯೊಂದಿಗೆ ಮದುವೆ ನಿಶ್ಚಿತಾರ್ತವಾದ  ಹುಡುಗಿ ಮದುವೆಗೆ ಮೊದಲು



ಪ್ರಿಯಕರನನ್ನು ಭೇಟಿಯಾಗುವಂತಿಲ್ಲ, ಮದುವೆಯತನಕ ತಂದೆಯ ನಿಗಾವಣೆಯಲ್ಲಿ ಪರಸ್ಪರ ಬಂಧನದಲ್ಲಿರಬೇಕು.

ಜರ್ಮನಿಯಲ್ಲಿ ಪ್ರೇಮ ಪರೀಕ್ಷೆ ವಿಶಿಷ್ಟರೀತಿಯಲ್ಲಿ ನಡೆಯುತ್ತದೆ. ಹುಡುಗಿ ಯೊಬ್ಬಳನ್ನು ಪ್ರೇಮಿಸಿದ ಪ್ರಿಯಕರ ಆಕೆಯನ್ನು ಮದುವೆಯಾಗಲು ವಿಳಂಬಿಸಿದರೆ ಊರಿನ ತರುಣರು ಆತನನ್ನು ಮನೆಯೊಳಗೆ ಕೂಡಿಹಾಕುತ್ತಾರೆ. ಹೊರಗಡೆ ಸುತ್ತುವರಿದು ಹೊಗೆ ಕೊಳವೆಯನ್ನು ಮುಚ್ಚಿ ಒಳಗೆ ಹೊಗೆ ತುಂಬುವಂತೆ ಮಾಡುತ್ತಾರೆ. ನಂತರ ಮಾಳಿಗೆಯನ್ನು ಹತ್ತಿ ಆತನನ್ನು ಛೇಡಿಸುತ್ತಾರೆ. ಇಷ್ಟರಲ್ಲಿ ಅವನು ಉತ್ಸಾಹಕುಂದದೆ ಶಪಥಕ್ಕೆ ಬದ್ಧನಾಗಿಯೇ ಇದ್ದರೆ ಸಂಭ್ರಮದಿಂದ ಮದುವೆ ನರವೇರಿಸುತ್ತಾರೆ. ಹಾಗಲ್ಲದೆ ಆತ ಒಂದು ವೇಳೆ ನಕರಾತ್ಮಕವಾಗಿ ಸ್ಪಂದಿಸಿದರೆ ಹಗ್ಗದ ತುದಿಗೆ ಕಟ್ಟಿ ಸಣ್ಣ ಕೊಳದಲ್ಲಿ ಮೂರು ಬಾರಿ ಎಳೆದಾಡುತ್ತಾರೆ. ಮುಗ್ಧ ಹೆಣ್ಣುಗಳನ್ನು ಪ್ರೇಮಿಸಿ ಕೈಕೊಡುವ, ಅಥವಾ ಮದುವೆಯನ್ನು ವಿಳಂಬಿಸುವ ನವತರುಣರನ್ನು ಶಿಕ್ಷಿಸುವ ಸಾಮಾಜಿಕ ನಿಷ್ಠುರ ಕಟ್ಟು ಕಟ್ಟಳೆ ಹಾಗೂ ಇದಕ್ಕೆ ನ್ಯಾಯಾಂಗದ ಸಮರ್ಥನೆ ನಮ್ಮ ದೇಶಕ್ಕೆ ಪ್ರಸ್ತುತ ಅನಿವಾರ್ಯ ವೆಂದು ಕೆಲವರಿಗಾದರೂ ಅನ್ನಿಸಬಹುದು.

ಭಾರತದಲ್ಲಿ ನವವಧು ಅಥವಾ ಮರ್ಯಾದೆಯುಳ್ಳ ಯಾವುದೇ ಹೆಣ್ಣು ಮುಸುಕು ಧರಿಸುವ ಸಂಪ್ರದಾಯವಿತ್ತು. ಇದೆ. "ಪರನಾರಿ ಸೋದರ" ಭಾವನೆ ಈ ಆಚರಣೆಯ ಹಿನ್ನಲೆ ಪರ ಪುರುಷನ ಕೆಟ್ಟ ದೃಷ್ಟಿ ತನ್ನ ಮೇಲೆ ಬೀಳದಿರಲೆಂದು ವಧು ಪರದೆ ಧರಿಸುವ ರೂಢಿ ಪ್ರಾಚೀನ ಕಾಲದಿಂದಲೂ ಗ್ರೀಕ್ ಮತ್ತು ರೋಮನ್ನರಲ್ಲಿತ್ತು.

ಹೆಚ್ಚು ತಾಳಿಕೆ–ಬಾಳಿಕೆಯುಳ್ಳ ಬೆಲೆಬಾಳುವ ಬಂಗಾರದ ಉಂಗುರ ಮಧ್ಯದ ಬೆರಳಲ್ಲಿದ್ದು ನೇರವಾಗಿ ಹೃದಯವನ್ನು ತಲಪುವ ಒಂದು ನರವನ್ನು ಪ್ರಚೋದಿಸುತ್ತದೆ. ತನ್ಮೂಲಕ ಶಾಶ್ವತವಾದ ಪ್ರೀತಿ, ಜೀವನ ಪರ್ಯಂತ ಪರಸ್ಪರ ಬದ್ಧತೆಯುಂಟಾಗುತ್ತದೆ. ಎಂಬ ನಂಬುಗೆಯಿಂದ ಮದುವೆಯ ಅಂಗವಾಗಿ, ಪ್ರೇಮದ ದ್ಯೋತಕವಾದ ಉಂಗುರ ವನ್ನು ವಧುವಿನ ಮಧ್ಯದ ಬೆರಳಿಗೆ ತೊಡಿಸುವ ಪದ್ಧತಿ ಈಜಿಪ್ಟಿನಲ್ಲಿ 9ನೇ ಶತಮಾನ ದಿಂದಲೂ ಪ್ರಚಲಿತವಿತ್ತು. ಈಗೀಗ ನಮ್ಮಲ್ಲೂ ಆಚರಣೆಗೆ ಬರುತ್ತಿದೆ. ಕ್ರಿಶ್ಚಿಯನ್ ಸಂಪ್ರದಾಯದ ಅನುಕರಣೆ ಇರಬಹುದೇ ?

"ಅಕ್ಷತಾರೋಪಣ" ಸಾಂಪ್ರದಾಯಿಕ ವಿವಾಹ ವಿಧಿಯಿಂದ ಮಾಯವಾಗುತ್ತಿರುವ ಒಂದು ಆಚರಣೆ. ಇಂಡೊನೇಷ್ಯಾದ ಜನರು ಈಗಲೂ ಇದಕ್ಕೆ ಪ್ರಾಶಸ್ತ್ಯ ನೀಡುತ್ತಾರೆ. ಅಕ್ಕಿಯನ್ನು ಸುರಿದು (ಅಕ್ಷತಾರೋಪಣ) ವರನ ಅನುರಾಗದ ಆತ್ಮವನ್ನು ತೃಪ್ತಿಪಡಿಸದೆ ಇದ್ದರೆ ಮದುವೆಯ ನಂತರ ಆ ಪ್ರೇಮಾತ್ಮ ಹಾರಿಹೋಗಿ ಎಂದಿಗೂ ವಾಪಸಾಗುವುದಿಲ್ಲ ಎಂಬುದು ಇವರ ನಂಬಿಕೆ. ಮದುವೆಯಲ್ಲಿ ಅಕ್ಷತಾರೋಪಣ ಫಲೋತ್ಪಾದಕತೆ ಮತ್ತು ಸಮೃದ್ಧಿಯ ದ್ಯೋತಕ. ತಲೆಯ ಮೇಲೆ ಅಕ್ಕಿ ಸುರಿಯುವ ಈ ಸಂಪ್ರದಾಯ ಗ್ರೀಕರನ್ನೂ ಬಿಟ್ಟಿಲ್ಲ. ಬಟ್ಟೆಯನ್ನು ಕೊಳೆಯಾಗಿಸುವ, ಬಣ್ಣ ಬಣ್ಣದ ಅಕ್ಕಿಯನ್ನಾಗಲೀ, ಬಣ್ಣದ

ಬೆಂಡಿನ ಚೂರುಗಳನ್ನಾಗಲೀ ಬೇಕಾಬಿಟ್ಟಿಯಾಗಿ ಆಮಂತ್ರಕವಾಗಿ, ಮೈತುಂಬಾ ಎರಚಿಕೊಳ್ಳುವುದಕ್ಕೆ ಯಾವುದೇ ಅರ್ಥವಿಲ್ಲ.

ಮಧುಚಂದ್ರ ಯುರೋಪಿನ ಹಳೆಯ ಸಂಪ್ರದಾಯ. ಮದುವೆಗೆ ಸಂಬಂಧಿಸಿದ ಎಲ್ಲ ಆಚರಣೆಗಳೂ ಮುಗಿದ ಮೇಲೆ ಸುಮಾರು ಒಂದು ತಿಂಗಳ ತನಕ ನವದಂಪತಿಗಳು ಕಾಮೋತ್ತೇಜಕವಾದ ಮಧುಮಿಶ್ರಿತ ಮದಿರಾಪಾನ ಮಾಡುವುದು ಮತ್ತು ಜೇನು ಸೇವಿಸುತ್ತಾ ಬೋಜನ ಮಾಡುವುದೇ ಮಧುಚಂದ್ರ.

ನವದಂಪತಿಗಳ ಹಾಸಿಗೆಯ ಮೇಲೆ ಗುಂಡುಗುಂಡಾದ ಸುಂದರ ಗಂಡು ಮಗುವನ್ನು ಉರುಳಾಡಿಸುವುದು ಗ್ರೀಕರ ಸಂಪ್ರದಾಯ, ಆರೋಗ್ಯ ದೃಢಕಾಯದ ಗಂಡು ಸಂತಾನದ ನೀರಿಕ್ಷೆ ಇಲ್ಲಿನ ಆಶಯ. ಗಂಡುಕೂಸನ್ನು ಹಾಸಿಗೆಯಲ್ಲಿ ಮಲಗಿಸಿ ದಂಪತಿಗಳನ್ನು ಛೇಡಿಸುವ ನಗೆ ಸಂಪ್ರದಾಯ ನಮ್ಮಲ್ಲೂ ಇದೆ. ದಂಪತಿಗಳು ಸಮಾಗಮಕ್ಕಾಗಿ 3ದಿನ ಕಾಯವುದು ಬ್ರಿಟನ್ನಿನ ಕೆಲವೆಡೆ ರೂಢಿಯಲ್ಲಿದೆ. ಮೊದಲ ರಾತ್ರಿ ಭಗವಂತನಿಗಾಗಿ, 2ನೇ ರಾತ್ರಿ ಸಂತ ಜೋಸೆಫ್‌ನಿಗಾಗಿ ಮತ್ತು ಮೂರನೇರಾತ್ರಿ ದಂಪತಿಗಳ ಕುಲದೇವತೆಗಾಗಿ. ಮೀಸಲು, "ಗಂಧರ್ವಾದಿಗಳು ಉಪಭೋಗಿಸಿದ ನಂತರ ಕೊನೆಯದಾಗಿ ಮಾನವ ಅಂದರೆ ವರ-ಉಪಭೋಗಿಸಬೇಕು"-ಸೂರ್ಯಸೂಕ್ತದ ಖಿಲ ಮಂತ್ರ). ನಾಲ್ಕನೇ ರಾತ್ರಿಯೇ ಸಮಾಗಮ.

ಇರಾಕ್‌ನಲ್ಲಿ ದಂಪತಿಗಳಿಗೆ ನಿರ್ಬಂಧ ಕಡಿಮೆ, ಹೆಣ್ಣುಗಂಡನ್ನು ಒಂದು ಕೊಠಡಿಯಲ್ಲಿ ಕೂಡಿಹಾಕಿ ಬೀಗಹಾಕಲಾಗುವುದು. ಆಂತರಂಗಿಕ ವ್ಯವಹಾರ ಮುಗಿದ ಮೇಲೆ ಮದುಮಗಳು ಒಳಗಿನಿಂದ 3ಬಾರಿ ಬಾಗಿಲು ಬಡಿಯುತ್ತಾಳೆ. ಪುರೋಹಿತ ಬಾಗಿಲು ತೆರೆದು ಗುಂಡುಹಾರಿಸಿ ಮುಂದಿನ ಸಡಗರದ ಪ್ರಕ್ರಿಯೆಯನ್ನು ಘೋಷಿಸುತ್ತಾನೆ.

ವಿವಿಧ ದೇಶಗಳ ಪ್ರೀತಿ-ಪ್ರೇಮ, ವೈವಾಹಿಕ ವಿಧಿ-ವಿಧಾನಗಳು ಕೆಲವು ಸೂಕ್ಷ್ಮ ವ್ಯತ್ಯಾಸಗಳೊಂದಿಗೆ ಭಾರತೀಯ ವೈವಾಹಿಕ ಪದ್ಧತಿಗೆ ಹೋಲಿಕೆಯಾಗುತ್ತವೆ. ಈ ಸಂಪ್ರದಾಯಗಳ ಪ್ರಾಚೀನತೆಯ ಬಗೆಗೆ ಅಂದರೆ ಯಾರು-ಯಾರನ್ನು ಅನುಕರಿಸಲು ಪ್ರಾರಂಭಿಸಿದರು ಎಂಬ ಬಗ್ಗೆ ವಿಮರ್ಶೆ ಅಗತ್ಯವಿದೆ.

ವಿದೇಶಗಳಲ್ಲಿನ ಪ್ರೇಮದ ಪರಿಭಾಷೆ ಮತ್ತು ವೈವಾಹಿಕ ಕಲ್ಪನೆಗೂ, ಭಾರತೀಯ ವೈವಾಹಿಕ ವಿಧಿವಿಧಾನಗಳಿಗೂ ಕೆಲವು ಸಾಮ್ಯಗಳೂ ಬಹಳಷ್ಟು ವೈರುಧ್ಯವೂ ಇರ ಬಹುದು. ಕೆಲವು ಸಂಗತಿಗಳು ಅನುಕರಣೆಯಂತೆ ಭಾಸವಾದರೂ ಯಾರು ಯಾರನ್ನು ಅನುಕರಿಸಿದರು ಎಂಬ ಪ್ರಾಚೀನತೆಯ ಬಗೆಗೆ ಪ್ರಾಜ್ಞರು ವಿಮರ್ಶಿಸುವಕಾಲ ಬಂದಿದೆ. ಇರಲಿ.

ಭಾರತೀಯ ಸಾಂಸ್ಕೃತಿಕ ಪರಂಪರೆಯಲ್ಲಿ ಬ್ರಾಹ್ಮ ದೈವ, ಆರ್ಷ, ಪ್ರಾಜಾಪತ್ಯ, ಅಸುರ, ಗಾಂಧರ್ವ, ರಾಕ್ಷಸ ಮತ್ತು ಪೈಶಾಚ ಎಂಬುದಾಗಿ ಎಂಟು ವಿಧವಾದ ವಿವಾಹಗಳನ್ನು



ಪ್ರಸ್ತಾಪಿಸಲಾಗಿದೆ. (ಮನುಸ್ಮೃತಿ). ಯಜ್ಞದಲ್ಲಿ ಋತ್ವಿಜನಾಗಿ ಭಾಗವಹಿಸುವ ಶ್ರೋತ್ರಿಯ ನಿಗೆ ಸಾಲಂಕೃತ ಕನ್ಯೆಯನ್ನು ದಾನ ಮಾಡುವುದು "ದೈವ" ವಿವಾಹ. ವರನಿಂದ ಕುಮಾರೀ ಪೂಜಾರ್ಥವಾಗಿ ಒಂದೋ ಎರಡೋ ಗೋಮಿಥುನವನು ತೆಗೆದುಕೊಂಡು ಕನ್ಯೆಯನ್ನು ವಿವಾಹ ಮಾಡಿ ಕೊಡುವುದು "ಆರ್ಷ" ವಿವಾಹ ಇದರಲ್ಲಿ ಕನ್ಯಾ ವಿಕ್ರಯ ದೋಷವಿಲ್ಲ. "ನೀನು ಈಕೆಯೊಂದಿಗೆ ಮಾತ್ರವೇ ಗೃಹಸ್ಥಧರ್ಮ ವನ್ನಾಚರಿಸುತ್ತಿರಬೇಕು. ಬೇರೆ ಕನ್ಯೆಯನ್ನು ವರಿಸಬಾರದು. ಸಂನ್ಯಾಸ ಸ್ವೀಕರಿಸಬಾರದು" ಎಂದು ಶರತ್ತು ವಿಧಿಸಿ ಮಾಡುವ ಕನ್ಯಾದಾನ "ಪ್ರಾಜಾಪತ್ಯ" ವೆನಿಸುವುದು. ಬಂಧು ಬಾಂಧವರಿಗೆ ಹೇರಳ ಹಣ ನೀಡಿ ಮಾಡಿಕೊಳ್ಳುವ ವಿವಾಹಕ್ಕೆ (ಕನ್ಯಾಶುಲ್ಕ?) "ಆಸುರ" ವಿವಾಹವೆಂದು ಹೆಸರು. ವಧೂವರರು ಪರಸ್ಪರ ಅರಿತು, ಇಷ್ಟಪಟ್ಟು ಮಾಡಿಕೊಳ್ಳುವ ವಿವಾಹ "**ಗಾಂಧರ್ವ**" ವಿವಾಹ. (Love marriage). ಪರಾಕ್ರಮದ ಮೂಲಕವಾಗಿ ಮಾಡಿಕೊಳ್ಳುವುದು "**ರಾಕ್ಷಸ**" ವಿವಾಹ. ಕಳ್ಳತನದಿಂದ ಕನ್ಯೆಯನ್ನು ಅಪಹರಿಸಿ ತಂದು ಬಲಾತ್ಕರಿಸಿ ವಿವಾಹವಾಗುವುದು "ಪೈಶಾಚ" ವಿವಾಹವೆನಿಸುತ್ತದೆ. ಬ್ರಾಹ್ಮಾದಿ ಮೊದಲ ನಾಲ್ಕು ವಿವಾಹ ಪದ್ದತಿಗಳಲ್ಲಿ ಮೊದಲನೆಯದು ಶ್ರೇಷ್ಠ ಉಳಿದವುಗಳು ಅಷ್ಟು ಪ್ರಶಸ್ತವಲ್ಲ-ಅಸುರಾದಿ ನಾಲ್ಕು ಪದ್ದತಿಗಳು ನಿಂದ್ಯವಾದವುಗಳು, ಚಾತುವರ್ಣದಲ್ಲಿ ಆಯಾ ವರ್ಣದವರು ಸ್ವವರ್ಣದವರನ್ನು ವಿವಾಹವಾಗುವುದು ಶಾಸ್ತ್ರ ಸಮ್ಮತ.

ಈಗ ಪ್ರಚಲಿತವಿರುವ ಬ್ರಾಹ್ಮವಿವಾಹ ಪದ್ದತಿ ಅತಿಶ್ರೇಷ್ಠ. ಕನ್ಯಾಪಿತನು "ಧರ್ಮ ಸಂತಾನ ಪಡೆಯವುದಕ್ಕಾಗಿ ಈ ಕನ್ಯೆಯನ್ನು ವರಿಸಬೇಕು". ಎಂದು ಹೇಳಿ ಕನ್ಯಾದಾನ ಮಾಡುತ್ತಾನಾದುದರಿಂದ ಇದು ಸೃಷ್ಟಿಯ ನಿರಂತರತೆಯದ್ಯೋತಕ. ಈ ಧರ್ಮಪತ್ನಿ ಯಲ್ಲಿ ಜನಿಸುವ ಮೊದಲನೆಯ ಸಂತಾನ ಧರ್ಮಸಂತಾನ ವೆನಿಸುವುದು. ಮುಂದಿನದು ಕಾಮ ಸಂತತಿ.

**ಬ್ರಾಹ್ಮವಿವಾಹದ** ಪ್ರಕ್ರಿಯೆ ವರನ ಸಮಾವರ್ತನದಿಂದ ಪ್ರಾರಂಭವಾಗುತ್ತದೆ. ಮುಂದೆ ಕ್ರಮವಾಗಿ ವಧೂಗೃಹ ಗಮನ, ವಾಗ್ದಾನ, ಕನ್ಯಾವರಣ, ವಧೂವರ ನಿರೀಕ್ಷಣೆ, ಕನ್ಯಾದಾನ, ತಂತುವೇಷ್ಟನ ಅಕ್ಷತಾರೋಪಣ, ವಿವಾಹ ಹೋಮ, ಪಾಣಿಗ್ರಹಣ, ಲಾಜಾಹೋಮ, ಸಪ್ತಪದಿ, ಮಾಂಗಲ್ಯ ಧಾರಣ, ಗೃಗಪ್ರವೇಶನೀಯ ಹೋಮ ಔಪಾಸನೆ-ಹೀಗೆ ಅನೇಕ ಪ್ರಕರಣಗಳಿವೆ. ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ, ಸಂನ್ಯಾಸ, ಎಂಬುದಾಗಿ ಮನುಷ್ಯನ ಜೀವಿತದ ನಾಲ್ಕು ಹಂತಗಳು. ಗುರುಕುಲವಾಸಿ ಯಾಗಿದ್ದು ಗುರುಗಳದ ಆಜ್ಞಾಧಾರಕನಾಗಿ ಅಧ್ಯಯನವೇ ಪ್ರಧಾನವಾಗಿರುವ ಬ್ರಹ್ಮಚಾರಿ ಗೃಹಸ್ಥನನ್ನು ಆಶ್ರಯಿಸುವುದು ಅನಿವಾರ್ಯ, ಕಿರಿಯರಿಗೆ ಕೌಟುಂಬಿಕ ಹೊಣೆಗಾರಿಕೆ ಯನ್ನು ಒಪ್ಪಿಸಿ ನಿವೃತ್ತ ಜೀವನ ಸಾಗಿಸುತ್ತಿರುವ ವಾನಪ್ರಸ್ಥಾಶ್ರಮಿಯೂ ಗೃಹಸ್ಥನನ್ನು ಅವಲಂಬಿಸಬೇಕಾಗುತ್ತದೆ. ಸಂನ್ಯಾಸಿಯಂತೂ "ಕರತಲಭಿಕ್ಷಃ, ತರುತಲವಾಸಃ" ಆದ್ದರಿಂದ ಗೃಹಸ್ಥಾಶ್ರಮ ಉಳಿದ ಮೂರು ಆಶ್ರಮಗಳಿಗಿಂತಲೂ ಶ್ರೇಷ್ಠವಾದುದು.

ಗೃಹಿಣಿಯೊಡಗೂಡಿ, ಸ್ವಂತ ಮನೆಯಲ್ಲಿದ್ದು ಅಧ್ಯಯನ (1) ಯಾಗಾದ್ಯನುಷ್ಠಾನ (2) ಋಷಿತರ್ಪಣಾದಿಗಳಿಂದ (3) ದೇವ, ಋಷಿ, ಪಿತೃ–ಋಣಯತ್ರವನ್ನು ತೀರಿಸುವ ಸಲುವಾಗಿ, ಧಾರ್ಮಿಕ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಾ ಗೃಹಸ್ಥ ಧರ್ಮದ ಪಾಲನೆಗೆ ವಿವಾಹ ಸಂಸ್ಕಾರವೊಂದು ರಹಸ್ಯ ದಾರಿಯಿದ್ದಂತೆ.

**ಸಮಾವರ್ತನೆಯೆಂದರೆ** ದೀಕ್ಷಾಂತ ಸಮಾರಂಭ (Convocation)ದ ಒಂದು ರೂಪ. ಅಧ್ಯಯನವನ್ನು ಮುಗಿಸಿ, ಗುರುದಕ್ಷಿಣೆ ನೀಡಿ, ಸ್ನಾತಕನಾಗಲು ಗುರುವಿನ ಅನುಮತಿ ಪಡೆಯುವುದು. "ಆಯುಷೇವಪಾಮಿ, ಸುಶ್ಲೋಕ್ಯಾಯ, ಸ್ವಸ್ತಯೇ" ಎಂಬುದಾಗಿ ಆಯುಷ್ಯಾಭಿವೃದ್ಧಿಗಾಗಿಯೂ, ಕೀರ್ತಿಗಾಗಿಯೂ, ಮಂಗಳಕ್ಕಾಗಿಯೂ, ಕೇಶ, ಶ್ಮಶ್ರು ನಖಾದಿಗಳನ್ನು ಕತ್ತರಿಸಿಕೊಂಡು ಆಕರ್ಷಣಿಯವಾಗುವುದು. ಬ್ರಹ್ಮಚರ್ಯೆ ಯಲ್ಲಿ ಪ್ರಸಾಧನಗಳನ್ನು ಉಪಯೋಗಿಸಬಾರದು. ಮೀಸೆ ಕತ್ತರಿಸಿಕೊಳ್ಳುವುದು 16ನೇ ವಯಸ್ಸಿನಲ್ಲಿ ಗೋದಾನವ್ರತದಲ್ಲಿ, ಆದರೆ ಈಗ 13ನೇ ವಯಸ್ಸಿನ ಮಹಾನಾಮ್ನೀ ವ್ರತ, ನಂತರದ ಮಹಾವ್ರತ, ಉಪನಿಷದ್ವ್ರತ ಮತ್ತು ಗೋದಾನ ವ್ರತ ಸಂಸ್ಕಾರಗಳು ರೂಢಿಯಲ್ಲಿಲ್ಲ. ಕಣ್ಣುಗಳ ರಕ್ಷಣೆಗಾಗಿ ಕಾಡಿಗೆ, ಕಿವಿಗೆ ಕುಂಡಲ, ಹಣೆಗೆ ಗಂಧಾಕ್ಷತಾದಿ ಗಳಿಂದ ಅಲಂಕಾರ ಇವೆಲ್ಲಕ್ಕೂ ಅರ್ಥಪೂರ್ಣವಾದ ಮಂತ್ರಗಳುಂಟು. ಪುಷ್ಪಮಾಲಿಕೆ ಯನ್ನು ತಲೆಯಲ್ಲಿ ಧರಿಸಬೇಕು. ಬದಲಿಗೆ ಈಗ ಲಲಾಟ ಪ್ರದೇಶದಲ್ಲಿ ಮಣಿ ಮಾಲೆಯನ್ನು ಧರಿಸುವುದು ಅಥವಾ ಬೆಂಡಿನ ಬಾಸಿಂಗ ಧರಿಸುವುದು ರೂಢಿಯಲ್ಲಿದೆ. ಪುಷ್ಪಮಾಲಿಕೆಯನ್ನು ಕತ್ತಿನಲ್ಲಿ ಧರಿಸುವುದಕ್ಕೆ ಶಾಸ್ತ್ರ ಸಮ್ಮತಿಯಿಲ್ಲ, ಆದರೆ ಶಿಷ್ಟಾಚಾರವಿದೆ. ಮರಹತ್ತುವುದು, ಬಾವಿ ಇಳಿಯುವುದು ನದಿಯಲ್ಲಿ ಈಜಾಡುವುದು ಮೊದಲಾದ ಅಪಾಯಕಾರಿಯಾದ, ಬಾಲ್ಯ ಸಹಜವಾದ ಚೇಷ್ಟೆಗಳನ್ನು ಮುಂದು ವರಿಸುವುದಿಲ್ಲವೆಂದು ಮಾನಸಿಕವಾದ ಪ್ರತಿಜ್ಞೆ ಸ್ವೀಕರಿಸಬೇಕು. ಇದು ಗೃಹಸ್ಥನಾಗಿ, ಗೃಹಿಣಿಯೊಂದಿಗೆ ಕುಟುಂಬ ನಿರ್ವಹಣೆಯ ಜವಾಬ್ದಾರಿಯ ಪೂರ್ವಸಿದ್ಧತೆ, ಬ್ರಹ್ಮಚರ್ಯದಲ್ಲಿ ಕಲಿತಿರುವುದನ್ನು ಗೃಹಸ್ಥನಾಗಿ, ಕಾರ್ಯಾನುಷ್ಠಾನ ಗೊಳಿಸಬೇಕು. ಅದಕ್ಕೆ ಲೋಕಾನುಭವ ಪಡೆಯಲು ಕಾಶಿಯಾತ್ರೆಯ ನೆಪದಲ್ಲಿ ಲೋಕ ಸಂಚಾರ ಮಾಡಬೇಕು. ದೀರ್ಘ ಪ್ರಯಾಣದ ದ್ಯೋತಕವಾಗಿ (ಉತ್ತರ ಹಿಂದುಸ್ತಾನದ) ಕೆಲವಡೆ (ಹೆಣ್ಣು) ಕುದುರೆಯ ಮೇಲೆ (ಮುಂದೆ ಹೆಣ್ಣನ್ನು ಪಳಗಿಸಬೇಕಲ್ಲ!) ಸವಾರಿ ಮಾಡುತ್ತಾ ವಧೂ ಗೃಹಕ್ಕೆ ಹೋಗುವ ಪದ್ಧತಿಯಿದೆ. ಅಲಂಕೃತನಾದ, ಆಕರ್ಷಕ ನವತರುಣನನ್ನು ಗುರುತಿಸಿದ ಕನ್ಯಾಪಿತ ಆತನನ್ನು ಮನೆಗೆ ಕರೆದು ಮಧುಪರ್ಕಾದಿಗಳಿಂದ ಸತ್ಕರಿಸುವುದು ಮತ್ತು ಆತನ ಕುಲಗೋತ್ರಾದಿ ಪೋರ್ವೋತ್ತರಗಳನ್ನು ವಿಚಾರಿಸುವುದು ಸಹಜಕ್ರಿಯೆ.

**ವಾಗ್ದಾನ ಕನ್ಯಾವರಣ :** ಸಾಮಾನ್ಯ ಪರಿಚಯದ ನಂತರ ಸ್ನಾತಕ ತಾನು "ಕನ್ಯಾರ್ಥಿ"ಯೆಂದು ಮೂರು ಬಾರಿ ಉಚ್ಚರಿಸುತ್ತಾನೆ. ಕನ್ಯಾಪಿತ "**ಸ್ವಾಗತಂ**" ಹೇಳುತ್ತಾನೆ. ವರ ತನಗೆ ಯೋಗ್ಯಳಾದ ಕನ್ಯೆಯನ್ನು ಹುಡುಕುವುದೇ ಶಾಸ್ತ್ರವಿಹಿತ. ಆದರೆ ಇದಕ್ಕೆ



ವ್ಯತಿರಿಕ್ತವಾಗಿ ಬಹಳ ಹಿಂದಿನಿಂದ ಇತ್ತೀಚಿನ ದಿನಗಳವರೆಗೆ ಕನ್ಯಾಪಿತನೇ ವರಾನ್ವೇಷಿ ಯಾಗಿ ಅಲೆದಾಡುತ್ತಿದ್ದ ಕಾಲವಿತ್ತು.

ಆಶ್ವಲಾಯನರು, ಅಪಸ್ತಂಭರು ಹಿರಣ್ಯಕೇಶೀಯರು, ಶೌನಕರು ಹೀಗೆ ಅನೇಕ ಸ್ಮೃತಿಕಾರರ, ಸೂತ್ರಕಾರರ ಮೂಲ ಧ್ಯೇಯ ಒಂದೇ ಇದ್ದರೂ ಚಿಂತನೆಯ ಸ್ವರೂಪದಲ್ಲಿ ಅಲ್ಪಪ್ರಮಾಣದ ಭೇದಗಳಿಂದಾಗಿ ಷೋಡಶ ಕರ್ಮಗಳಲ್ಲದೆ ಇತರೆ ಧಾರ್ಮಿಕ ವಿಧಿವಿಧಾನಗಳ ಆಚರಣೆಯಲ್ಲೂ ಸಣ್ಣಪುಟ್ಟ ವ್ಯತ್ಯಾಸಗಳುಂಟಾದವು. ಆದರೆ ಅಂತಹ ವ್ಯತ್ಯಾಸಗಳನ್ನು ಗಂಭಿರವಾಗಿ ಪರಿಗಣಿಸಬೇಕಾಗಿಲ್ಲ.

ವಾಗ್ದಾನವೆಂದರೆ ಕನ್ಯಾಪಿತ ಮಾತಿನ ಮೂಲಕ ಕನ್ಯೆಯನ್ನು ಭಾವೀ ಅಳಿಯನಿಗೆ ನೀಡುವುದು ಅಂದರೆ ಕರಾರು ಅಥವಾ ಒಪ್ಪಿಗೆ, ಕನ್ಯಾರ್ಥಿಯಾಗಿ ಬಂದ ಸ್ನಾತಕನ ಗುಣಲಕ್ಷಣಗಳು ಮೇಲ್ನೋಟಕ್ಕೆ ಒಪ್ಪಿಗೆಯಾದರೆ ವಿವಾಹಕ್ಕೆ ಸಮ್ಮತಿಸುವುದು. ತಾನು ಅಪೇಕ್ಷಿಸುವ ಗುಣ ಲಕ್ಷಣಗಳನ್ನು ಹೇಳಿ ಮುಂದೆ ವಿಧಿಪೂರ್ವಕ ಕನ್ಯಾದಾನ ಮಾಡುವುದಾಗಿ ಒಪ್ಪಿಗೆ ನೀಡುವುದೇ ವಾಗ್ದಾನ.

**ಅವ್ಯಂಗೇಽಪರಿತೇಽಕ್ಲೀಬೇ ದಶದೋಷ ವಿವರ್ಜಿತೇ ।**
**ಇಮಾಂ ಕನ್ಯಾಂ ಪ್ರದಾಸ್ಯಾಮಿ ದೇವಾಗ್ನಿ ದ್ವಿಜ ಸನ್ನಿಧೌ ॥**

ಅಂಗಹೀನ, ಶೀಲಭ್ರಷ್ಟ, ನಪುಂಸಕ, ಹುಚ್ಚ, ನಿರುದ್ಯೋಗಿ, ಅಪಸ್ಮಾರ ಪೀಡಿತ, ಬಹುದೂರವಾಸಿ (ಅಪರಿಚಿತ ಜಾಗದಲ್ಲಿರುವವನು), ಕುಷ್ಠರೋಗಿ, ಮೂರ್ಖ, ಸದಾ ಮೋಕ್ಷವನ್ನೇ ಚಿಂತಿಸುವವ, ಆಶಿಕ್ಷಿತ, ವಿವಾಹದಲ್ಲಿ ಆಸಕ್ತಿ ಇಲ್ಲದವ ಇಂತಹ ದೋಷ, ಅವಗುಣಗಳಿಲ್ಲವೆಂದು ಖಚಿತಪಡಿಸಿ ಕೊಂಡು ಈ ವರನಿಗೆ ದೇವಾಗ್ನಿ ದ್ವಿಜ ಸನ್ನಿದಿ ಯಲ್ಲಿ ತನ್ನ ಕನ್ಯೆಯನ್ನು ಕೊಡುವುದಾಗಿ ಸೂಚಿಸುವ ಒಪ್ಪಿಗೆ (ಸಂಪೂರ್ಣ ಬದ್ಧತೆ ಅಲ್ಲ). ವಾಗ್ದಾನ ಒಂದು ವೇಳೆ ಈ ಹಂತದಲ್ಲಿ ಸಂಬಂಧ ನಿಂತರೂ ವಧೂವರರು ಬೇರೆ ಬೇರೆಯಾಗಿ ಸ್ವಂತದ ಆಯ್ಕೆಯ ಮೇರೆಗೆ ವಿವಾಹವಾಗುವುದಕ್ಕೆ ಶಾಸ್ತ್ರ ವಿರೋಧವಿಲ್ಲ.

**ಕನ್ಯಾವರಣ :** ಕನ್ಯಾಪಿತ ಕನ್ಯಾದಾನ ಮಾಡುವುದಾಗಿ ನಿಶ್ಚಯಿಸಿದ ನಂತರ ಉಭಯ ಕುಲದ ಹಿರಿಯರ ಉಪಸ್ಥಿಯಲ್ಲಿ ಅವರ ಅನುಮೋದನೆ ಪಡೆಯುವ ಕಾರ್ಯಕ್ರಮವೇ ಕನ್ಯಾವರಣ. ವಧು–ವರರ ತಂದೆ, ಅಜ್ಜ, ಮುತ್ತಜ್ಜ ಹೀಗೆ ಮೂರು ತಲೆಮಾರುಗಳ ಪರಿಚಯವನ್ನು ಹಿರಿಯರ ಸಭೆಯಲ್ಲಿ ಉಚ್ಚ ಸ್ವರದಲ್ಲಿ ಮೂರು ಬಾರಿ ಘೋಷಿಸಬೇಕು. "ಕುಲ ಶೀಲವತೇ ಕನ್ಯಾಂ ದದ್ಯಾತ್" ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಲಾಗುತ್ತದೆ. ಅಂದರೆ ವಿವಾಹೇಚ್ಛುಗಳ ಕುಟುಂಬದ ಹಿರಿಯರ ಕುಲಾಚಾರಗಳ ಬಗ್ಗೆ ಪರಸ್ಪರ ತೃಪ್ತಿಯುಂಟಾದರೆ ಮಾತ್ರ ಮಧುಪರ್ಕ ಕನ್ಯಾದಾನಾದಿ ಮುಂದಿನ ಪ್ರಕ್ರಿಯೆಗೆ ಹಿರಿಯರ ಸಮ್ಮತಿಯ ಮುದ್ರೆ ಬೀಳುತ್ತದೆ. ಕುಲಶೀಲಗಳ ವಿಮರ್ಶೆಯಲ್ಲಿ ಹಿರಿಯರಿಗೆ ಪೂರ್ಣ ತೃಪ್ತಿಯಾಗದಿದ್ದರೆ ಈ ಸಂಬಂಧ ನಿಂತು ಹೋಗಲೂಬಹುದು.

ಗುರುಗಳು, ರಾಜರೇ ಮೊದಲಾದಂತೆ ಅತ್ಯಂತ ಗೌರವಯುತ ವ್ಯಕ್ತಿಗಳಿಗೆ ನೀಡುವಂತೆ ಕನ್ಯಾಪಿತ ತಾನು ದಾನ ಮಾಡುವ ಕನ್ಯೆಯ ಪಾಣಿಗ್ರಹಣ ಮಾಡಲಿರುವ ಸ್ನಾತಕನಿಗೆ ಸಲ್ಲಿಸುವ ಗೌರವದ ಸ್ವರೂಪವೇ **ಮಧುಪರ್ಕ ಪೂಜೆ**. ವರನಿಗೆ ಪ್ರಾಶನ ಮಾಡಲು ಮೊಸರು–ಜೇನಿನ ಮಿಶ್ರಣವನ್ನು ನೀಡಲಾಗುತ್ತದೆ. ಅದನ್ನು ವರ ಅನ್ನದ ಸಾರವೆಂದು ಭಾವಿಸಿ (ವಿರಾಜೋದೋಹೋಸಿ) ತಾನು ಸೇವಿಸುವ ಈ ಅನ್ನದ ಸಾರ ತನ್ನ ಸ್ಥಾನದಲ್ಲಿ ನಿಲ್ಲುವ ತನ್ನ ಪುತ್ರಾದಿಗಳಿಗೂ ಉಂಟಾಗಲಿ **(ಮಯಿ ದೋಹಃ ಪದ್ಯಾಯೈ ವಿರಾಜಃ)** ಎಂದು ಪ್ರಾಶನ ಮಾಡುತ್ತಾನೆ. ಆಹಾರ ಸೇವಿಸಿಯೇ ಕನ್ಯಾ ಪಾಣಿಗ್ರಹಣ ಮಾಡಬೇಕೆಂದು ಶಾಸ್ತ್ರವಷನವಿದೆ.

**ಭುಕ್ತ್ವಾ ಸಮುದ್ವಹೇತ್ಕನ್ಯಾಂ ಸಾವಿತ್ರೀ ಗ್ರಹಣಂ ತಥಾ।**
**ಉಪೋಷಿತಾಃ ಸುತಾಂ ದದ್ಯಾತ್ ಅರ್ಚಿತಾಯ ದ್ವಿಜಾಯ ತು ॥**

"**ಸಮಾರ್ತ್ನೆ ಊಟ" ಚೌಲದ್ ಪಂಕ್ತಿ**"– ಸಮಾವರ್ತನೆಯ ನಂತರ ಕನ್ಯಾಪಾಣಿ ಗ್ರಹಣಾತ್ ಪೂರ್ವ ವರನು ಸೇವಿಸುವ ಸಾತ್ವಿಕ ಭೋಜನ ಚೂಡಾಕರ್ಮ ಉಪನಯನ ಗಳಲ್ಲಿ "**ಮಾತ್ರಾಸಹ ಭೋಜನ**" ರೂಢಿಯಲ್ಲಿರುವ ಆಚಾರಗಳು, ಆದರೆ ಕನ್ಯಾದಾತೃಗಳು ಉಪವಾಸವಿರಬೇಕು.

ಮಧುಪರ್ಕ ಪೂಜಾಂಗವಾಗಿಯೂ, ಮುಂದೆ ಕನ್ಯಾದಾನಾಂಗವಾಗಿಯೂ ಗೋದಾನ ನೀಡುವ ಸಂಪ್ರದಾಯವಿದೆ. ತಾನು ದಾನ ಮಾಡುವ, ಮಾಡಿದ ಕನ್ಯೆ ಯೊಡನೆ ಗೃಹಸ್ಥ ಧರ್ಮೊಚಿತವಾದ ದೇವ–ಪಿತೃಕಾರ್ಯಾದಿಗಳಲ್ಲಿ ಅತ್ಯಂತ ಅವಶ್ಯಕವಾದ ಪಂಚಾಮೃತ, ಪಂಚಗವ್ಯಕ್ಕಾಗಿ ಅಳಿಯನಿಗೆ ಪ್ರತ್ಯಕ್ಷ ಗೋದಾನ ಮಾಡುವುದು ಔಚಿತ್ಯಪೂರ್ಣ, ಅಲ್ಲದೇ ಹಸುಗಳೇ ಹಿಂದಿನ ಕಾಲದಲ್ಲಿ ದ್ರವ್ಯ–ವಿನಿಮಯದ ಮಾಧ್ಯಮವಾಗಿತ್ತು ಅಧಿಕ ಹಸುಗಳನ್ನು ಹೊಂದಿದವನು ದೊಡ್ಡ ಶ್ರೀಮಂತನೆಂದು ಪರಿಗಣಿಸಲಾಗುತ್ತಿತ್ತು. ಹಸುವಿನ ಬದಲಿಗೆ ಸಾಂಕೇತಿಕವಾಗಿ ನೀಡಿದ ತೆಂಗಿನ ಕಾಯಿಯನ್ನು ವರ "ರುದ್ರಮಾತೆಯೂ, ವಸು ಪುತ್ರಿಯೂ, ಆದಿತ್ಯ ಸಹೋದರಿಯೂ, ಅಮರತ್ವ ಪ್ರಾಪಕಳೂ" ಆದ ಈ ಹಸುವನ್ನು ಹಿಂಸಿಸದೆ ಬಿಟ್ಟುಬಿಡಿ "ಓಂ ಉತ್ಸೃಜತ" ಎಂದು ಹೇಳಿ ಉರುಳಿಸುವುದು ರೂಢಿ.

**ನೀರೀಕ್ಷಣೆ** : ಅಂದರೆ ಸಮುಹೂರ್ತಕ್ಕಾಗಿ ಕಾಯುವುದು, ಘಂಟಾನಾದ, ವೇದ ಘೋಷ, ಭಗವನ್ನಾಮ ಸಂಕೀರ್ತನರೂಪದ ರಾಗವಾದ ಮಂಗಳಶ್ಲೋಕ, ಸುಮಧುರ ವಾದ್ಯಧ್ವನಿಗಳ ನಡುವೆ ವಧೂವರರು ತಮ್ಮ ಕಲ್ಪನೆಯ ದಾಂಪತ್ಯ ಜೀವನವನ್ನು ಆಸೆಯಿಂದ ಕಾಯುವುದು, ಈತನಿಂದ ಆಕೆ, ಆಕೆಯಿಂದ ಈತ ಭವಿಷ್ಯಕ್ಕಾಗಿ ನಿರೀಕ್ಷಿಸುವುದು. ನಿರೀಕ್ಷೆಯ ಸಮಯದಲ್ಲೇ ಮೂರು ತಲೆಮಾರಿನ ನಾಮಗೋತ್ರೋ ಚ್ಚಾರಣೆಯೊಂದಿಗೆ ಕನ್ಯಾವರಣೆ ಮಾಡುವುದು ಕೆಲವು ಸ್ಮೃತಿಕಾರರ ಮತ, ನಿರೀಕ್ಷಣೆ ಯೆಂಬುದು ಅತಿ ಮುಖ್ಯವಾದ ಮತ್ತು ಮಧುರವಾದ ಘಟ್ಟ. ಏಕೆಂದರೆ ಪ್ರಾಚೀನ



ಹಿಂದೂ ಸಂಪ್ರದಾಯದಂತೆ ನಡೆಯುವ, ಹಿರಿಯರು ನಿಶ್ಚಯಿಸುವ ಮದುವೆಯಲ್ಲಿ ವಧೂವರರು ಪರಸ್ಪರ ಮುಖಾವಲೋಕನ ಮಾಡುವುದೇ ಅಂತಃಪಟ ಸರಿದ ಮೇಲೆ. (ಗಿಡಮರಗಳನ್ನು ಸುತ್ತಿ ಪ್ರೇಮ ನಿವೇದನೆಯಾದ ಮೇಲೆ ನಡೆಯುವ ಮದುವೆಗಳಲ್ಲಿ ಅಂತಃಪಟ ಹಿಡಿಯುವ ಔಚಿತ್ಯ ಇದೆಯೇ?) ಅಂತಃ ಪಟ ಸರಿದೊಡನೆಯೇ ವರ "ಅಘೋರ ಚಕ್ಷುರಪತಿಘ್ನ್ಯೇಧಿ ಶಿವಾ ಪಶುಭ್ಯಃ ಸುಮನಾಸ್ಸುವರ್ಚಾಃ! ವಿರಸೂರ್ದೇವ ಕಾಮಾಸ್ಯೋನಾ ಶಂ ನೋ ಭವ ದ್ವಿಪದೇ ಶಂ ಚತುಷ್ಪದೇ"॥ ಎಂಬ ಮಂತ್ರ ಪಠಿಸುತ್ತಾನೆ. ಕನ್ಯಾಪಿತ ವರನ ಲಕ್ಷಣಗಳನ್ನು ಪರಿಶೀಲಿಸಿದುದನ್ನು ಹಿಂದೆ ಪ್ರಸ್ತಾಪಿಸಲಾಗಿದೆ. ವಧು ವರನ ಮುಖಾವಲೋಕನ ಮಾಡುವಾಗ ಆಕೆಯಿಂದ ತಾನು ನಿರೀಕ್ಷಿಸುವ ಆಕೆಯ ಲಕ್ಷಣಗಳನ್ನು ಈ ಮಂತ್ರದಲ್ಲಿ ಹೇಳಲಾಗಿದೆ.

**ಅಘೋಚರಕ್ಷು** : ವಧುವೆ, ನಿನ್ನ ನೋಟ ಸೌಮ್ಯವಾಗಿರಲಿ. ಅಪತಿಘ್ನ್ಯೇಧಿ ಗಂಡನಿಗೆ ಕೆಡುಕನ್ನುಂಟು ಮಾಡದಿರುವವಳಾಗಿ ಸಮೀಪಿಸು (ನಿನ್ನ ನೋಟ ಸೌಮ್ಯವಾಗಿದ್ದರೆ ಎಲ್ಲರೂ ನಿನಗೆ ಸೌಮ್ಯಾರಾಗಿಯೇ ಕಾಣುತ್ತಾರೆ) ಶಿವಾಪಶುಭ್ಯಃ– ಪಶುಗಳ ವಿಚಾರದಲ್ಲಿ ವಿಶೇಷವಾಗಿ ಹಸುಗಳ ವಿಚಾರದಲ್ಲಿ ಮಂಗಳಕರಳಾಗಿರು, (ಏಕೆಂದರೆ ಹಸುಗಳೇ ನಿಜವಾದ ಸಂಪತ್ತು. ಆ ಸಂಪತ್ತನ್ನು ಸರಿಯಾಗಿ ನಿರ್ವಹಿಸಬೇಕು.) ಸುಮನಾಃ ಸುವರ್ಚಾಃ–ಸೌಮನಸ್ಯವುಳ್ಳವಳೂ ತೇಜಸ್ವಿನಿಯೂ ಆಗಿರಬೇಕು. ವೀರಸೂ;–ಸತ್ಸಂತಾನ ವನ್ನು ಪಡೆಯುವವಳಾಗು, ದೇವಕಾಮಾನಾವಿಬ್ಬರೂ ಮಾಡುವ ದೇವತಾರಾಧನೆಯಲ್ಲಿ ಅವರು ಸಂತೋಷಿಸಿ ನಿನ್ನನ್ನು ಹರಸುವಂತಿಬೇಕು. (ಹೆಚ್ಚೇನು ಹೇಳಲಿ!) ಶಂ ನೋ ಭವ ದ್ವಪದೆ ಶಂ ಚತುಷ್ಪದೇ– ದ್ವಿಪದಿಗಳಾದ ನಮ್ಮೆಲ್ಲರಿಗೂ ಬೆಕ್ಕು, ನಾಯಿ, ಹಸು ಮೊದಲಾದಂತೆ ಮನೆಯಲ್ಲಿ ಸಾಕುವ ಚತುಷ್ಪಾದಿಗಳಿಗೂ ಮಂಗಳಕರಳಾಗಿಬೇಕು. ಒಳಿತನ್ನೇ ಬಯಸಬೇಕು. ಮಾಡಬೇಕು.

ಸಂತೋಷ ಸಂಭ್ರಮ, ಉದ್ವೇಗ, ಆತಂಕ, ಉತ್ಸಾಹ, ಕುತೂಹಲಗಳ ಮಿಶ್ರಭಾವನೆ ಯಿಂದ ಭವಿಷ್ಯದ ನಿರೀಕ್ಷಣೆಯೇ ಅಂತಃಪಟದ ಆಚೀಚೆ ನಿಂತು ವಧೂವರರು ಮಾಡುವ ನಿರೀಕ್ಷಣೆ.

ನಿರೀಕ್ಷೆಯಲ್ಲಿ ವಧು ಪೂರ್ವಾಭಿಮುಖವಾಗಿಯೂ ವರ ಪಶ್ಚಿಮಾಭಿಮುಖ ನಾಗಿಯೂ ನಿಲ್ಲಬೇಕೆಂದೂ ನಂತರ ಪಶ್ಚಿಮಾಭಿಮುಖಿಯಾದ ಕನ್ಯೆಯನ್ನು ಪೂರ್ವಾಭಿ ಮುಖನಾದ ವರ ಪ್ರತಿಗ್ರಹಿಸಬೇಕೆಂಬುದೂ ಶಾಸ್ತ್ರಕಾರರ ಬಹು ಮತಾಭಿಪ್ರಾಯ. ಕನ್ಯಾದಾನದ ನಂತರ ನಿರೀಕ್ಷಣೆಯನ್ನು ಮಾಡಬೇಕೆಂದೂ ಋಷಿಮತವಿದೆ. ಆದರೆ ನಿರೀಕ್ಷಣೆಯ ನಂತರವೇ ಕನ್ಯಾದಾನ ಮಾಡುವುದು ಶಿಷ್ಟಾಚಾರವಾಗಿ ಬೆಳೆದು ಬಂದಿದೆ.

**ಕನ್ಯಾದಾನ ಸಂಕಲ್ಪ** : "ಸಂಕಲ್ಪಃಕರ್ಮಮಾನಸಂ" ಸಂಕಲ್ಪ ಶಬ್ದಕ್ಕೆ–ನಾನು ಇಂತಹ ಸತ್ಕಾರ್ಯವನ್ನು ಮಾಡುತ್ತೇನೆ ಎಂದು ಮನಸ್ಸಿನಲ್ಲಿ ದೃಢವಾಗಿ ನಿರ್ಧರಿಸುವುದು – ಎಂಬುದು ಸರಳವಾದ ಅರ್ಥ. ಕನ್ಯಾದಾನಾದಿ ಮಹಾದಾನಗಳಲ್ಲಿ ಮಹಾಸಂಕಲ್ಪ ಹೇಳುವುದು ಪದ್ಧತಿ. ದೇಶ–ಕಾಲಾದಿಗಳ ವಿಸ್ತಾರವಾದ ಸ್ಮರಣೆಯೇ ಮಹಾಸಂಕಲ್ಪ.

ಕಾಂತಿಮತಿಯೂ, ಶುದ್ಧಳೂ, ಸಾತ್ವಿಕಳೂ, ಸ್ವರ್ಣಾಭರಣ ಭೂಷಿತೆಯೂ ಆದ ಕನ್ಯೆಯನ್ನು ಧರ್ಮ ಪ್ರಜಾ ಸಂಪಾದನೆಗಾಗಿ ದೇವಾಗ್ನಿದ್ವಿಜ ಸನ್ನಿಧಿಯಲ್ಲಿ ಧಾರಾ ಪೂರ್ವಕವಾಗಿ ನಿನಗೆ ದಾನ ಮಾಡುತ್ತಿದ್ದೇನೆಂದು ಹೇಳಿ ದಾನ ಮಾಡುವುದು ಕನ್ಯಾದಾನ. ನಿಮ್ಮ ದಾಂಪತ್ಯದಲ್ಲುಂಟಾಗುವ ಸತ್ಸಂತತಿಯಿಂದ ನಾನೂ ಸೇರಿದಂತೆ ಹಿಂದಿನ ಮತ್ತು ಮುಂದಿನ ಹನ್ನೆರಡು ತಲೆಮಾರಿನ ಪಿತೃಗಳಿಗೆ ಆತ್ಮಾನಂದವುಂಟಾಗಿ ಬ್ರಹ್ಮಲೋಕ ಪ್ರಾಪ್ತಿಯಾಗಲಿ, ತನ್ಮೂಲಕ ಕನ್ಯಾದಾನ ಸಾರ್ಥಕವಾಗಲಿ ಎಂದು ಕನ್ಯಾಪಿತ ಹಾರೈಸುತ್ತಾನೆ. ಧರ್ಮ, ಅರ್ಥ, ಕಾಮಗಳಲ್ಲಿ ಈಕೆಯನ್ನು ಅತಿಕ್ರಮಿಸಬಾರದು ಎಂದು ಭಾಷೆ ಪಡೆಯುತ್ತಾನೆ. ಚತುರ್ವಿಧ ಪುರುಷಾರ್ಥಗಳಲ್ಲಿ ಮೊದಲ ಮೂರು ಮಾತ್ರ ದಂಪತಿಗಳು ಒಟ್ಟಾಗಿ ಸಾಧಿಸಬೇಕಾದವು, ಮೋಕ್ಷಸಾಧನೆ ವ್ಯಯಕ್ತಿಕ.

**ಅಕ್ಷತಾರೋಪಣ** – ಭಗೋ ಯಜ್ಞಃ, ಶ್ರೀಯೋ ಧರ್ಮಃ, ಪ್ರಜಾ ಯಶಃ ಐಶ್ವರ್ಯ, ಪರಾಕ್ರಮಗಳಲ್ಲಿ, ಯಜ್ಞಯಾಗಾದಿಗಳಲ್ಲಿ ಸಂತಾನ ಪ್ರಾಪ್ತಿಯಲ್ಲಿ, ಯಶಸ್ಸನ್ನು ಪಡೆಯುವಲ್ಲಿ, ನಮ್ಮ ಕಾಮನೆಗಳು, ಆಸೆಗಳು ಹೆಚ್ಚಲಿ, ವೃದ್ಧಿಯಾಗಲಿ ಎಂದು ವಧೂವರರು ಪರಸ್ಪರ ತಮ್ಮ ಮನಸ್ಸಿನ ಬಯಕೆಗಳನ್ನು ವಿನಿಮಯ ಮಾಡಿಕೊಂಡು ಶ್ವೇತಾಕ್ಷತೆಯನ್ನು ಎರಚುವ ಕ್ರಿಯೆಯೇ ಅಕ್ಷತಾರೋಪಣ.

**ಪಾಣಿಗ್ರಹಣ** : ವರ ತಾನು ಮುಂದೆ ಪಾಣಿಗ್ರಹಣ ಮಾಡುವ ವಧುವಿನಲ್ಲಿ ಭಾರ್ಯಾತ್ವ ಸಿದ್ಧಿಗಾಗಿ ಮತ್ತು ಗೃಹ್ಯಾಗ್ನಿ ಸಿದ್ಧಿಗಾಗಿ ಮಾಡುವ ಹೋಮ ವಿವಾಹ ಹೋಮ, ಇದರಲ್ಲಿ ಆಜ್ಯಾಹುತಿ, ಪಾಣಿಗ್ರಹಣ, ಲಾಜಾಹೋಮ, ಅಶ್ಮಾರೋಹಣ, ಸಪ್ತಪದಿ, ಮಾಂಗಲ್ಯಧಾರಣೆ ಇವು ಉಪ ಅಂಗಗಳು.

ಬಲವನ್ನೂ ಅನ್ನವನ್ನೂ ನೀಡಿ ಕಾಪಾಡುವ, ದುರ್ಭಿಕ್ಷಾದಿಗಳನ್ನು ಹೋಗಲಾಡಿಸುವ, ಹೇರಳ ಧನವನ್ನೂ ಉತ್ತಮವಾದ ಮನೆಯನ್ನೂ ನೀಡುವ, ವಧೂವರರಿಗೆ ಒಂದೇ ಮನಸ್ಸನ್ನು ನೀಡಿ ಅವರಲ್ಲಿ ಸಾಮರಸ್ಯವನ್ನುಂಟುಮಾಡುವ ಅಗ್ನಿಯನ್ನು ಕುರಿತು 4 ಮಂತ್ರ ಗಳಿಂದಲೂ (ಅಗ್ನ ಆಯೂಂಷಿ.) ಇಷ್ಟಾರ್ಥ ಸಿದ್ಧಿಯನ್ನುಂಟು ಮಾಡುವ ಪ್ರಜಾಪತಿಯನ್ನು ಕುರಿತು ಒಂದು ಮಂತ್ರ (ಪ್ರಜಾಪತೇ)ದಿಂದಲೂ ಅಜ್ಯಾಹುತಿಯನ್ನು ನೀಡಬೇಕು.

ನಾನು ಮನೆಯ ಯಜಮಾನನಾಗಿರುವುದಕ್ಕಾಗಿ ಭಗ, ಆರ್ಯಮಾ ಮೊದಲಾದ ದೇವತೆಗಳು ನಿನ್ನನ್ನು ನನಗೆ ಕೊಟ್ಟಿದ್ದಾರೆ. ಗೃಹ್ಯಕರ್ಮಾನುಷ್ಠಾನಕ್ಕಾಗಿ ಮತ್ತು ಸೌಭಾಗ್ಯ ಕ್ಕಾಗಿ ನಾನು ನಿನ್ನ ಪಾಣಿಗ್ರಣ ಮಾಡುತ್ತೇನೆ. ನೀನು ನನ್ನೊಡನೆ ಮುಪ್ಪಿನ ತನಕ ಇರಬೇಕು. (**ಗೃಭ್ಣಾಮಿ ತೇ ಸೌಭಗತ್ವಾಯ.**) ಎಂದು ವರ ವಧುವಿನ ಕೈಹಿಡಿದು ಎತ್ತುತ್ತಾನೆ. ಎಂಬ ವರನು......ವಧುವಿನ ಪಾಣಿಗ್ರಹಣ ಮಾಡುವುದಾಗಿ ಗುರು ಹಿರಿಯರು ನೀಶ್ಚಯಿಸಿ ರುತ್ತಾರೆ. ಎಂದು ಒಕ್ಕಣೆಯಿರುವ ಲಗ್ನಪತ್ರಿಕೆಗಳು ವಿರಳವಾಗಿ ಯಾದರೂ ಅಚ್ಚಾಗುತ್ತಿರು



ವುದು ಪಾಣಿಗ್ರಹಣದ ಪ್ರಾಶಸ್ತ್ಯಕ್ಕೆ ಉದಾಹರಣೆ. ಕೇವಲ ಗಂಡು ಸಂತಾನಾಪೇಕ್ಷಿಯಾದವನು ವಧುವಿನ ಹೆಬ್ಬೆರಳನ್ನು ಮಾತ್ರವೇ ಹಿಡಿದು ಎಳಿಸಬೇಕು. ಹೆಣ್ಣು ಸಂತತಿಯನ್ನೇ ಅಪೇಕ್ಷಿಸುವುದಾದರೆ ಇತರೆ ಬೆರಳುಗಳನ್ನಷ್ಟೆ ಹಿಡಿಯ ಬೇಕು. ಹಾಗಲ್ಲದೆ ಗಂಡು ಹೆಣ್ಣು ಎರಡೂ ಸಂತಾನದ ಅಪೇಕ್ಷೆಯುಳ್ಳವನು ಹೆಬ್ಬೆಟ್ಟಿ ನೊಂದಿಗೆ ಎಲ್ಲ ಬೆರಳುಗಳನ್ನೂ ಹಿಡಿದು ವಧುವನ್ನು ಏಳಿಸಬೇಕೆಂದು ಸೂತ್ರಕಾರರು ಹೇಳುತ್ತಾರೆ.

ಲಾಜಾ ಹೋಮದ ನಂತರ "**ಇಮಮಶ್ಮಾನಮಾರೋಹ, ಅಶ್ಮೇವತ್ವಂ ಸ್ಥಿರಾಭವ**" – "ನೀನು ಈ ಕಲ್ಲನ್ನೇರಿ ನಿಲ್ಲು, ಕಲ್ಲನಂತೆ ಗಟ್ಟಿಯಾಗಿರು, ಶತ್ರುಗಳನ್ನು ತಡೆಯುವ ಸಮರ್ಥಳಾಗು" ಎಂದು ಸಾಂಕೇತುಕವಾಗಿ ಕಲ್ಲಿನ ಮೇಲೆ ನಿಲ್ಲುವಂತೆ ವಧುವಿಗೆ ವರ ಹೇಳುತ್ತಾನೆ. ಮತ್ತು ಶಿಷ್ಟಾಚಾರದಂತೆ ವಧುವಿನ ಕಾಲಿನ ತೋರ್ಬೆರಳುಗಳಿಗೆ ಬೆಳ್ಳಿಯ ಉಂಗುರವನ್ನು ತೊಡಿಸುತ್ತಾನೆ. ಕಾಮೋತ್ತೇಜನೆ ಮತ್ತು ಇಂದ್ರಿಯ ನಿಗ್ರಹಕ್ಕೂ ಅದೇ ನಿರ್ದಿಷ್ಟ ಬೆರಳುಗಳಿಗೆ ಬೆಳ್ಳಿಯದೇ ಕಾಲುಂಗುರ (ಬಂಗಾರ ಅಥವಾ ಬೇರೆ ಲೋಹದ್ದಲ್ಲ) ತೊಡಿಸುವುದಕ್ಕೂ ವೈಜ್ಞಾನಿಕ ಹಿನ್ನಲೆಯ ಔಚಿತ್ಯವನ್ನು ಹೇಳಲಾಗಿದೆ.

**ಸಪ್ತಪದಿ**– 1. ಶಕ್ತಿಸಾಮರ್ಥ್ಯಕ್ಕೋಸ್ಕರ, 2. ಅನ್ನಕ್ಕೋಸ್ಕರ, 3. ನನ್ನ ಸಂಪಾದನೆಯ ಸಂಪತ್ತಿನ ರಕ್ಷಣೆಗಾಗಿ, 4. ಮನಸ್ಸಿನ ಆಸೆ ಈಡೇರಿಸಿಕೊಂಡು ಸುಖ ಪಡುವುದಕ್ಕಾಗಿ, 5 ಸಂತಾನ ಪಡೆಯುವುದಕ್ಕಾಗಿ, 6 ಆಯಾ ಋತುಮಾನಗಳಲ್ಲಿ ಅನುಭವಿಸಬೇಕಾದ ಬೋಗಭಾಗ್ಯ ಸಾಧನೆಗಾಗಿ ಮತ್ತು 7. ಅನ್ಯೋನ್ಯ ಪ್ರೀತಿ ವಿಶ್ವಾಸ ಗೆಳೆತನದಿಂದ ಇರುವುದಕ್ಕಾಗಿ, ನೀನು ನನ್ನನ್ನು ಅನುಸರಿಸು, ಮುಪ್ಪಿನ ತನಕ ಸಂತಾನವನ್ನು ಪಡೆಯೋಣ ಎಂದು ಒಂದೊಂದೇ ಅಕ್ಕಿಯ ರಾಶಿಯಮೇಲೆ ಹೆಜ್ಜೆಯಿರಿಸುವಂತೆ ಹೇಳಿ ವರ ವಿವಾಹಗ್ನಿಯ ಸಾನ್ನಿಧ್ಯದಲ್ಲಿ ವಧುವನ್ನು ತನ್ನ ಸಮೀಪಕ್ಕೆ ಕರೆದುಕೊಳ್ಳುವುದು ಸಪ್ತಪದಿ. ಸಪ್ತಪದಿಯ ನಂತರವೇ (ಅಂದರೆ ಅದಕ್ಕಿಂತ ಮೊದಲಿನ ಯಾವ ಕಾರ್ಯಕ್ರಮದಿಂದಲೂ ಗಂಡಹೆಂಡಿರಾದ ಬಗ್ಗೆ ಕಾನೂನಿನ ಬದ್ಧತೆಯಿಲ್ಲ) ದಂಪತಿ ಗಳಾಗುತ್ತಾರೆಂದು ಧರ್ಮಶಾಸ್ತ್ರ ನ್ಯಾಯಶಾಸ್ತ್ರಗಳು ಹೇಳುತ್ತವೆ. ಸರಕಾರಿ ಕಚೇರಿಯಲ್ಲಿ ನೋಂದಾಯಸಿದಾಗಲೂ ಕಾನೂನು ರೀತಿಯಲ್ಲಿ ಮದುವೆ ಪ್ರಮಾಣಿತವಾಗುತ್ತದೆ.

ಹೀಂದೂ ವಿವಾಹ ಕಾಯ್ದೆಯಲ್ಲಿ Taking of seven steps by the bridcgroom, and bride jointly before the sacred fire is Saptapadi. The marrige becomes completed only when the seventh step is taken. Till then, it is imperfect and revocable ಎಂದು ಹೇಳಿರುವುದರಿಂದ ಸಪ್ತಪದಿಯೇ ವಿವಾಹದ ಅತ್ಯಂತ ಪ್ರಧಾನವಾದ ಮತ್ತು ಅತಿ ಮಹತ್ವದ ಹಂತವೆಂದು ಸ್ಪಷ್ಟವಾಗುತ್ತದೆ.

**ಮಾಂಗಲ್ಯಧಾರಣೆ –**
**ಬ್ರಹ್ಮವಿಷ್ಣ್ವೀಶ ರೂಪಂ ತಂ ರಂಧ್ರವಚ್ಚ ತ್ರಿತಂಕುಕಂ ।**
**ತ್ರಿರತ್ನಂ ರುಕ್ಮಜಂ ಸ್ತ್ರೀಣಾಂ ಮಾಂಗಲ್ಯಾಭರಣಂ ವಿದುಃ ॥**

ಎಂಬುದಾಗಿ ಮಾಂಗಲ್ಯದ ಲಕ್ಷಣ ಹೇಳಲಾಗಿದೆ. ತ್ರಿಮೂರ್ತಿಸ್ವರೂಪವಾದ ಮೂರು ತಂತುಗಳಿರುವ ಹೊಳೆಯುವ ಬಂಗಾರದ ಈ ಮಾಂಗಲ್ಯವನ್ನು ಪತಿ ತನ್ನ ಬದುಕಿರುವ ಸಂಕೇತವೆಂದು ವಧುವಿನ ಕತ್ತಿನಲ್ಲಿ ಧಾರಣೆ ಮಾಡಿಸುತ್ತಾನೆ. ತ್ರಿಮೂರ್ತಿ ಸ್ವರೂಪ ವಾದುದನ್ನು ತಾನು ಕತ್ತಿನಲ್ಲಿ ಧರಿಸಿರುವುದರಿಂದ ಅತ್ಯಂತ ಪವಿತ್ರಳಾಗಿ ದ್ದೇನೆಂದು ಆಕೆಯ ಮನಸ್ಸಿನಲ್ಲಿ ಭಾವಪರವಶತೆಯುಂಟಾಗುತ್ತದೆ. ಬಂಗಾರದ ಆಭರಣವನ್ನು ದೇಹದಲ್ಲಿ ಧರಿಸುವ ಔಚಿತ್ಯದ ಬಗೆಗೆ ಆಯುರ್ವೇದ ಶಾಸ್ತ್ರ ವಿಸ್ತಾರವಾಗಿ ಹೇಳುತ್ತದೆ. ಪತಿವ್ರತೆಯ ಕತ್ತಿನಲ್ಲಿನ ಮಾಂಗಲ್ಯ ಆಕೆಯ ಗಂಡನಿಗೆ ಮಾತ್ರವೇ ಕಾಣಿಸುತ್ತದೆಯೆಂದು ರಾಘವಾಂಕ ಹರಿಶ್ಚಂದ್ರ ಕಾವ್ಯದಲ್ಲಿ ವರ್ಣಿಸುತ್ತಾನೆ.

**ಗೃಹ ಪ್ರವೇಶನೀಯ ಹೋಮ–** ಶಾಬ್ದಿಕ ಅರ್ಥವೇ ಸ್ಪಷ್ಟವಾಗಿದೆ. ವರ ವಧುವಿನೊಂದಿಗೆ ಸ್ವಗೃಹವನ್ನು ಪ್ರವೇಶಿಸಿ ಮಾಡುವ ಹೋಮ. ಗೃಹಪ್ರವೇಶನೀಯ ಹೋಮದ ನಂತರವೇ ಗೃಹ್ಯಾಗ್ನಿ ಸಿದ್ದಿಯೆಂದು ಕೆಲವರ ಮತ. ವಿವಾಹದ ಹದಿನಾರು ದಿನಗಳೊಳಗೆ ನೂತನ ವಧೂ ಗೃಹಪ್ರವೇಶ ಮಾಡಬಹುದೆಂದು ಧರ್ಮಶಾಸ್ತ್ರ ಹೇಳುತ್ತದೆ. ವಿವಾಹಾಗ್ನಿಯೊಂದಿಗೇ "**ಗೃಹ್ಯಾಗ್ನಿ ಸಿದ್ದಯೇ ಚ**" ಎಂದು ಸಂಕಲ್ಪಸಿ ಸಮಾನ ತಂತ್ರದಿಂದ ಹೋಮಿಸುವುದೂ ರೂಢಿಯಲ್ಲಿದೆ. ವರಗೃಹ್ಯಾಗ್ನಿಯೊಂದಿಗೆ ಮದುವೆ ಮನೆಯಿಂದ ವಧುವಿನೊಡಗೂಡಿ ಸ್ವಗೃಹಕ್ಕೆ ಹೋಗುವ ದಾರಿಯಲ್ಲಿ ಎದುರಾಗುವ ಹಿರಿಯರಿಗೂ, ಪೂಜ್ಯತಮರಿಗೂ ವಧುವನ್ನು ಪರಿಚಯಿಸಿ ಆಶೀರ್ವದಿಸುವಂತೆ ಈ ಮಂತ್ರ ಹೇಳಲಾಗುತ್ತದೆ.

**ಸುಮಂಗಲೀರಿಯಂ ವಧೂರಿಮಾಂ ಸಮೇತ ಪಶ್ಯತ ।**
**ಸೌಭಾಗ್ಯಮಸ್ಯೈ ದತ್ವಾಯಾಥಾಸ್ತಂ ವಿಪರೇತನ॥**

**ಇಯಂ ವಧೂಃ ಸುಮಂಗಲೀ :** ಈವಧು ಸಮುಂಗಲಿಯಾಗಿದ್ದಾಳೆ. ಇಮಾಂ ಸಮೇತ–ಈಕೆಯನ್ನು ಸಮೀಪಿಸಿರಿ. ಪಶ್ಯತ–ನೋಡಿರಿ ಅಸ್ಯೈ ಸೌಭಾಗ್ಯಂ ದತ್ವಾ– ಈಕೆಗೆ ಸೌಭಾಗ್ಯವನ್ನು ಕರುಣಿಸಿ ಅಸ್ತಂ ಯಥಾಃ–ಪ್ರಯಾಣ ಮುಂದುವರಿಸಿರಿ.

**ಅರುಂಧತೀ ದರ್ಶನ :–** ಅಂತಃಪಟ ಸರಿಸಿದ ಮೇಲೆ, ಮಂತ್ರಪಠನಾ ನಂತರವೇ ವಧೂವರರು ಪರಸ್ಪರ ಮುಖಾವಲೋಕನ ಮಾಡಬೇಕು. **ರಾತ್ರೌ ಅರುಂಧತೀ ದರ್ಶನಾ ನಂತರಮೇವ ವಾಗ್ವಿಸರ್ಗಃ** ಅಂದರೆ ರಾತ್ರಿ ಅರುಂಧತೀ ದರ್ಶನದ ನಂತರವೇ ಪರಸ್ಪರ ಮಾತನಾಡಬಹುದು. ಅದುವರೆಗೆ ವಾಙ್ನಿಯಮದಲ್ಲಿರಬೇಕು–ಎಂದು ಶಾಸ್ತ್ರಕಾರರು ಹೇಳುತ್ತಾರೆ. ಈ ಅರುಂಧತೀ ಯಾರು? ಮಹರ್ಷಿ ವಸಿಷ್ಠರ ಶೀಲವನ್ನು ಶಂಕಿಸಿದುದರಿಂದ ಈಕೆ ಕಾಂತಿಹೀನಳಾದಳಂತೆ. ಸ್ವಾಹಾದೇವಿ ಮುನಿಪತ್ನಿಗಳ ರೂಪ ಧರಿಸಿ ಅಗ್ನಿಯ ಸಮಾಗಮ ಮಾಡಲು ಬಯಸಿದಾಗ ಅರುಂಧತಿಯ ತಪಸ್ಸು ಮತ್ತು ಪಾತಿವ್ರತ್ಯದ ಪ್ರಭಾವದಿಂದಾಗಿ ಆಕೆಯ (ಅರುಂಧತಿಯ) ರೂಪ ಧರಿಸಲಾಗಲಿಲ್ಲ. ಸಪ್ತರ್ಷಿಗಳು ಕೇವಲ ಅರುಂಧತಿಯೊಬ್ಬಳನ್ನು ಬಿಟ್ಟು ಉಳಿದ ಆರು ಜನ ಋಷಿಪತ್ನಿ



ಯರನ್ನು ಬಿಟ್ಟೋಡಿದ್ದರು. ಇಂತಹ ಮಹಾಸತಿಯನ್ನು ನಕ್ಷತ್ರರೂಪದಲ್ಲಿ ಕಂಡು, ಆಕೆಯ ಮಹಿಮೆಯನ್ನು ನೆನಪಿಸಿಕೊಂಡು "**ಜೀವಪತ್ನೀ ಪ್ರಜಾಂ ವಿಂದೇಯ**" ನಾನು ಪತಿಯುಕ್ತಳಾಗಿ ಸಂತಾನವನ್ನು ಪಡೆಯುವಂತೆ ಅನುಗ್ರಹಿಸು" ಎಂದು ವಧುವಿನಿಂದ ಹೇಳಿಸಿ ಪ್ರಾರ್ಥಿಸಬೇಕು.

ಮದುವೆಯಾದ ಮೊದಲ ವರ್ಷ ಪೂರ್ತಿ ವಧು ಪತಿಗೃಹದಲ್ಲೇ ಆಗಲೀ, ಪಿತೃಗೃಹದಲ್ಲೇ ಆಗಲಿ ವಾಸ ಮಾಡಬಾರದು.

**ವಿವಾಹಾತ್ ಪ್ರಥಮೇ ಪೌಷೇ ಆಷಾಢೇ ಚಾಧಿಮಾಸಕೇ ।**
**ನಸಾ ಭರ್ತುರ್ಗೃಹೇ ತಿಷ್ಠೇತ್ ಚೈತ್ರೇ ಪಿತೃಗೃಹೇ ತಥಾ ॥**
**ಉದ್ವಾಹಾತ್ ಪ್ರಥಮೇ ಶುಚೌಯದಿ ವಸೇತ್ ಭರ್ತುರ್ಗೃಹೇ ಕನ್ಯಕಾ।**
**ಹನ್ಯಾತ್ತಜ್ಜನನೀಂ ಕ್ಷಯೇ ನಿಜತನುಂ ಜ್ಯೇಷ್ಠಕಂ ॥**
**ಪೌಷೇ ಚ ಶ್ವಶುರಂ ಪತಿಂ ಚ ಮಲಿನೇ ಚೈತ್ರೇ ಸ್ವಪಿತ್ರಾಲಯೇ ।**
**ತಿಷ್ಠಂತೀ ಪಿತರಂ ನಿಹಂತಿ ನ ಭಯಂ ತೇಷಾಮಭಾವೇ ಸತಿ॥**

ಮದುವೆಯಾದ ಮೊದಲ ವರ್ಷ ಆಷಾಢ, ಜ್ಯೇಷ್ಠ, ಪುಷ್ಯ, ಅಧಿಕ ಮತ್ತು ಕ್ಷಯ ಮಾಸಗಳಲ್ಲಿ ವಧುವು ಗಂಡನ ಮನೆಯಲ್ಲುಳಿಯುವುದರಿಂದ ಕ್ರಮವಾಗಿ ಅತ್ತೆಗೂ, ಗಂಡನ ಅಣ್ಣಂದಿರಿಗೂ, ಮಾವನಿಗೂ, ಗಂಡನಿಗೂ ಮತ್ತು ಸ್ವತಃ ಆಕೆಗೂ ಹಾನಿಯುಂಟಾಗುತ್ತದೆ. ಚೈತ್ರದಲ್ಲಿ ತವರಿನಲ್ಲುಳಿದರೆ ಆಕೆಯ ತಂದೆಗೆ ಕೇಡಾಗುತ್ತದೆ. ಪತಿಪತ್ನಿ ಸಮಾಗಮಕ್ಕೆ ವಸಂತಮಾಸ ಉತ್ತೇಜಕ ಮತ್ತು ಪ್ರಶಸ್ತವಾದುದರಿಂದ ಆಕೆ ಪಿತೃಗೃಹ್ಯದಲ್ಲಿ ಉಳಿಯ ಬಾರದು. ಅಲ್ಲದೆ ವಸಂತದಲ್ಲಿ ಸಮಾಗಮದ ಫಲವಾಗಿ ಮುಂದೆ ಪುಷ್ಯ ಮಾಘಗಳಲ್ಲಿ ಪ್ರಸವವಾದರೆ ಮುಂದಿನ ಫಾಲ್ಗುಣ, ವೈತ್ರ, ವೈಶಾಖಗಳಲ್ಲಿ ನಡೆಯ ಬಹುದಾದ ಉಪನಯನ, ಮದುವೆ ಮೊದಲಾದ ಮಂಗಲ ಕಾರ್ಯಗಳಿಗೆ ಉಭಯ ಕುಲದವರಿಗೂ ತೊಂದರೆಯಾಗುವುದಿಲ್ಲ.

ಸ್ಮೃತಿಚೋದಿತವಾದ ಆಚಾರಗಳು ಕಾಲದ ಘರ್ಷಣೆಗೆ ಸಿಕ್ಕಿ ಕ್ರಮೇಣ ವಿರೂಪಗೊಳ್ಳುವ ಸಾಧ್ಯತೆಯುಂಟು. ಆದ್ದರಿಂದ ಆಚಾರಗಳನ್ನು ನೂರಕ್ಕೆ ನೂರು ಪ್ರಮಾಣವೆಂದು ಅಂಗೀಕರಿಸುವಂತಿಲ್ಲ. ಹಾಗೆಂದು ಪೂರ್ತಿ ತಿರಸ್ಕರಿಸುವಂತೆಯೂ ಇಲ್ಲ. "**ಸಂತಃ ಪರೀಕ್ಷ್ಯ ಅನ್ಯತರದ್ಭಜಂತೇ**" ಎಂಬ ವಚನದಂತೆ ಆಚಾರದ ಮೂಲವನ್ನು ವಿಮರ್ಶಿಸಿ ನಿರ್ಣಯಕ್ಕೆ ಬರಬೇಕಾಗುತ್ತದೆ.

ಧಾರ್ಮಿಕ ಕಾರ್ಯಗಳಲ್ಲಿ, ಮಂಗಲ ಸಮಾರಂಭಗಳಲ್ಲಿ ಸಂಪ್ರದಾಯಗಳಿಗೆ ಆಚಾರಣೆಗೆ ತುಂಬಾ ಪ್ರಾಶಸ್ತ್ಯವಿದೆ. ಈ ಆಚರಣೆಗಳು ಮೂಲದಲ್ಲಿ ಸ್ಮೃತಿಚೋದಿತವಾಗಿಯೂ ಇದ್ದವು. ಆದುದರಿಂದಲೇ ದೇಶ ವಿದೇಶಗಳಲ್ಲೂ, ವಿವಿಧ ಜನಾಂಗದಲ್ಲೂ ಇಂದಿಗೂ ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಆಚರಣೆಯಲ್ಲಿವೆ. ಅನೇಕ ಸ್ಮೃತಿಕಾರರ, ವಿವಿಧ ವ್ಯಾಖ್ಯಾನಕಾರರ ಮತದಂತೆ ಪ್ರತ್ಯೇಕ ಶಿಷ್ಟಾಚಾರಗಳು ಬೆಳೆಯುತ್ತಾ ಬಂದವು.

ಬರುಬರುತ್ತಾ ಇತ್ತೀಚಿನ ದಿನಗಳಲ್ಲಿ ಕಾಲದ ಘರ್ಷಣೆಗೆ ಸಿಕ್ಕಿ ಸ್ಥಳೀಯ ಪರಿಸ್ಥಿತಿಗೆ ನಲುಗಿ ತಮ್ಮ ಔಚಿತ್ಯವನ್ನೂ ಮೂಲ ಸ್ವರೂಪವನ್ನೂ ಕಳೆದುಕೊಳ್ಳುತ್ತಿವೆ. ಹಾಗೆಂದು ಪ್ರಾಚೀನ ಸಂಪ್ರದಾಯಗಳನ್ನು ಪೂರ್ತಿ ಬಿಟ್ಟರೆ ಧರ್ಮಾಚರಣೆಗೆ ಅರ್ಥವೇ ಇಲ್ಲದಂತಾಗುತ್ತದೆ. "**ಹಳೆ ಬೇರು ಹೊಸ ಚಿಗುರು ಕೂಡಿರಲು ಮರ ಸೊಗಸು**" ಎಂದು **ಕವಿ ಡಿ.ವಿ.ಜಿ.** ಯವರು ಹೇಳುವಂತೆ ನಮ್ಮ ಸಂಪ್ರದಾಯಗಳ, ಆಚರಣೆಗಳ ಮೂಲವನ್ನು ಶೋಧಿಸಿ, ವಿಜ್ಞಾನದ ಒರೆಗಲ್ಲಿನಲ್ಲಿ ಉಜ್ಜಿ, ವಿರೂಪಗೊಂಡವುಗಳನ್ನು ಬಿಟ್ಟು ಅರ್ಥ ಪೂರ್ಣವೆನಿಸಿದವುಗಳನ್ನು ಗ್ರಹಿಸಬೇಕು. ಹಳೆಯದೆಂದು ಎಲ್ಲವನ್ನೂ ಬಿಡುವುದಾಗಲೀ ಹೊಸತನದ ಹಿಂದೆ ಓಡುವುದಾಗಲೀ ಸರಿಯಾದ ಮಾರ್ಗವಲ್ಲ, ಹಳತು ಹೊಸತುಗಳನ್ನು ಸಮನ್ವಯಗೊಳಿಸಿ ಸ್ವೀಕರಿಸುವುದು ಶ್ರೇಯಸ್ಕರ.

"**ಅನಯೋರ್ದಂಪತ್ಯೋ ರವಿಚ್ಚಿನ್ನಾ ಪ್ರೀತಿರಸ್ತು**" ಎಂದು ನವದಂಪತಿಗಳನ್ನು ಆಶೀರ್ವದಿಸಲಾಗುತ್ತದೆ. ದಾಂಪತ್ಯ ಸಫಲವಾಗಬೇಕಾದರೆ, ಸುಖ ಸಂತೋಷ ಸಮೃದ್ಧಿಯಿಂದ ಕೂಡಿರಬೇಕಾದರೆ ಇಬ್ಬರಲ್ಲೂ ಪರಸ್ಪರ ಪ್ರೀತಿ ಹೊಂದಾಣಿಕೆ ಅನಿವಾರ್ಯ. ಆದುದರಿಂದ ಪ್ರೇಮದಿಂದ ಮಾತ್ರವೇ ವಿವಾಹ ಸಾರ್ಥಕ ಮತ್ತು ಸಫಲ.

ಗೃಹಸ್ಥಾಶ್ರಮ ಪ್ರವೇಶಿಸಿದ ಸತಿಪತಿಗಳನ್ನು ಸಂಸಾರವೆಂಬ ರಥದ ಎರಡು ಗಾಲಿಗಳಿಗೆ ಹೋಲಿಸಲಾಗಿದೆ. ಈ ರಥ ಸುಸೂತ್ರವಾಗಿ ಚಲಿಸುತ್ತಿರಲು ಇಬ್ಬರ ಅನ್ಯೋನ್ಯ ಪ್ರೀತಿಯೇ ಅದರ ಗಾಲಿಗಳಿಗೆ ಕೀಲೆಣ್ಣೆ. ಯಾವುದಾದರೊಂದು ಚಕ್ರವಾಲಿದರೆ, ಹಿಂದು ಮುಂದಾದರೆ ರಥ ಮುರಿದು ಬೀಳುವಂತೆ ಸತಿಪತಿಗಳಲ್ಲಿ ವಿರಸವುಂಟಾದರೆ, ಸಂಸಾರ ಛಿದ್ರವಾಗುತ್ತದೆ. ಗೃಹಸ್ಥ ಧರ್ಮೋಚಿತವಾದ ನಿತ್ಯ ನೈಮಿತ್ತಿಕ ಅನುಷ್ಠಾನಗಳು, ದೇವ–ಋಷಿ–ಪಿತೃ ಋಣ ವಿಮೋಚಕವಾದ ಆಚರಣೆಗಳು, ಗುರು ಹಿರಿಯರನ್ನು ಗೌರವಿಸುವುದು, ಅತಿಥಿ ಅಭ್ಯಾಗತರನ್ನು ಸತ್ಕರಿಸುವುದು, ಬಂಧು ಬಳಗದವರನ್ನು ಆದರಿಸುವುದು, ಕಿರಿಯರನ್ನು ಉಪಚರಿಸುವುದು, ವೃತ್ತಿ ಧರ್ಮದ ಪಾಲನೆ–ಹೀಗೆ ಎಲ್ಲ ಹೊಣೆಗಾರಿಕೆಯನ್ನು ಸಮನಾಗಿ ನಿರ್ವಹಿಸುವುದು ಇವರ ಮುಖ್ಯ ಕರ್ತವ್ಯ. ಆದ್ದರಿಂದಲೇ ಮಹಾಕವಿ ಹೇಳುತ್ತಾನೆ. "ಧನ್ಯೋ ಗೃಹಸ್ಥಾಶ್ರಮಃ"

ನಾಲ್ಕು ಆಶ್ರಮಗಳಲ್ಲಿ ಗೃಹಸ್ಥಾಶ್ರಮ ಶ್ರೇಷ್ಠ. ಗೃಹಸ್ಥ ಧರ್ಮದಲ್ಲಿ ಮನೆ, ಮತ್ತು ಮನೆಗಿಂತಲೂ ಆ ಮನೆಯ ಧರ್ಮಪತ್ನಿ ಮತ್ತು ತಾಯಿ ಶ್ರೇಷ್ಠತಮರು. ಅಂದರೆ ಪುರುಷನು ಕನಿಷ್ಠನೆಂದು ಅರ್ಥೈಸಬೇಕಿಲ್ಲ. ಕುಟುಂಬ ನಿರ್ವಹಣೆಯಲ್ಲಿ ಎರಡು ಪ್ರತ್ಯೇಕ ಕಾರ್ಯಕ್ಷೇತ್ರಗಳಿವೆ. ಮೊದಲನೆಯದು ಮನೆಯ ಹೊರಗಡೆಯದು. ಕುಟುಂಬದ ವೃತ್ತಿ ಸಹಜವಾದ, ವಿಶಾಲವಾದ ಕಾರ್ಯಕ್ಷೇತ್ರ, ದ್ರವ್ಯಾರ್ಜನೆ ಮತ್ತು ಅದಕ್ಕೆ ಸಂಬಂಧಿಸಿದ ನೂರಾರು ವ್ಯವಹಾರಗಳ ನಿರ್ವಹಣೆ, ಸಂಪೂರ್ಣ ಪುರುಷಾಧೀನ. ಎರಡನೆಯದು ಕೌಟುಂಬಿಕ–ಗೃಹಸ್ಥಾಶ್ರಮದ ಹೊಣೆಗಾರಿಕೆ ಇಲ್ಲಿ ಪುರುಷ ತನ್ನ ಗಳಿಕೆಯನ್ನು ತನ್ನ ಅರ್ಧಾಂಗಿಯ ಸಮ್ಮತಿಯಿಂದಲೇ ಅವಳ ವಿವೇಚನೆಯ ಮೇರೆಗೆ ಧರ್ಮ ಸಮ್ಮತವಾದ



ಕಾರ್ಯಗಳಲ್ಲಿ ವಿನಿಯೋಗಿಸಬೇಕು. ಆದ್ದರಿಂದ ಷೋಡಶ ಕರ್ಮಗಳಲ್ಲಿ ಮತ್ತಿತರ ಧಾರ್ಮಿಕ ಆಚರಣೆಗಳಲ್ಲಿ ಸಂಕಲ್ಪಿಸವಾಗ ಪತ್ನಿ ಪತಿಯ ಕೈಯಲ್ಲಿ ಉದಕಸೇಚನೆಯ ಮೂಲಕ ತನ್ನ ಸಮ್ಮತಿಯನ್ನು ಸೂಚಿಸುವ ಶಿಷ್ಟಾಚಾರ ಬೆಳೆದು ಬಂದಿದೆ. ಧರ್ಮ, ಅರ್ಥ, ಕಾಮಗಳೆಂಬ ಮೂರು ಪುರುಷಾರ್ಥಗಳ ಸಾಧನೆಯಲ್ಲಿ ಪತ್ನಿಯನ್ನು ಅತಿಕ್ರಮಿಸುವುದಿಲ್ಲವೆಂದು ವಿವಾಹದಲ್ಲಿ ಅವನು ವಚನಬದ್ಧವಾಗಿರುತ್ತಾನೆ. ಗೃಹಸ್ಥಾಶ್ರಮಿಯ ಧರ್ಮಪತ್ನಿಗೆ "**ಜಾಯಾ**" ಎಂಬ ಹಸರೂ ಇದೆ. ಪತಿಯು ತನ್ನ ರೇತೋ ರೂಪದಿಂದ ಪತ್ನಿಯ ಗರ್ಭವನ್ನು ಪ್ರವೇಶಿಸಿ ಪುತ್ರ ರೂಪದಲ್ಲಿ ಪುನಃ ಜನಿಸುವುದರಿಂದ ಪತ್ನಿಗೆ "**ಜಾಯಾ**" ಎಂದು ಹೆಸರು.

ಆದ್ದರಿಂದ ಪತ್ನಿಯನ್ನು ತಾಯಿಯಂತೆ ಗೌರವಿಸಬೇಕು. ಎಂಬ ಅರ್ಥವೂ ಇಲ್ಲಿ ಧ್ವನಿಸುತ್ತದೆ. ತನ್ನ ಸಂತಾನಕ್ಕೆ ಜನ್ಮವಿತ್ತ ಪತ್ನಿ ಮಾತೃ ಸ್ವರೂಪಳೆಂಬ ಭಾವನೆಯಿಂದ ಮಗುವಿಗೆ ಜಾತಕರ್ಮಾದಿ ಸಂಸ್ಕಾರಗಳ ಸಂದರ್ಭದಲ್ಲಿ ಪತ್ನಿಗೆ "**ಪುನರ್ಭಾರ್ಯಾತ್ವ ಸಿದ್ಧಯೇ**" ಎಂದು ಸಂಕಲ್ಪಸಿ ಕಲಶಗ್ರಹಣ ಮಾಡದೆ ಪತ್ನಿ ಸಮಾಗಮದಿಂದ ಮಾತೃ ಸಮಾಗಮ ದೋಷ ಪ್ರಾಪ್ತಿಯಾಗುತ್ತದೆಂಬ ಹೇಳಿಕೆಯಿದೆ.

ಗೃಹಸ್ಥನಿಗೆ ಮನೆಯೆಂದರೆ ಗೃಹಣಿ, ಗೃಹಿಣಿಯೇ ಮನೆ. ... ಎಂಬ ಉಕ್ತಿಯೊಂದಿದೆ. ಮನೆಯಲ್ಲಿ ಗೃಹಿಣಿ ಸರಿಯಿಲ್ಲವೆಂದಾದರೆ ಆ ಗೃಹ "ಮುಚ್ಚುತ್ತೆ" ಗೃಹಿಣಿ ಅನುಕೂಲೆಯಾಗಿದ್ದರೆ ಗೃಹಸ್ಥಾಶ್ರಮ ಸ್ವರ್ಗದಂತಾಗುತ್ತದೆ.

"ಸೀತಾರಮ'ರದು ಆದರ್ಶ ದಾಂಪತ್ಯ, ಶ್ರೀರಾಮ ಚಂದ್ರನ ಬದುಕಿನಲ್ಲಿ ಸೀತೆ ವಹಿಸಿದ ಪಾತ್ರವನ್ನು ಭೋಜ ಕವಿ ಸ್ವಾರಸ್ಯವಾಗಿ ವರ್ಣಿಸಿದ್ದಾನೆ. ಸೀತಾ ವಿರಹದಿಂದ ಶ್ರೀರಾಮ ಹೀಗೆ ಶೋಕಿಸುತ್ತಾನೆ. "ನನ್ನ ಸಹಧರ್ಮಿಣಿಯಾದ ಸೀತೆ ನನ್ನ ಮಾನಸಿಕ ವ್ಯಥೆಗೆ ಹಿತವಾದ ಸಿದ್ಧೌಷಧಿ, ಸುರತಕೇಳಿಯಲ್ಲಿ ಸಖಿ. ಆಹವನೀಯಾದಿ ಅಗ್ನಿ ಪರಿಚರ್ಯೆಯಲ್ಲಿ ಸಹಧರ್ಮಚಾರಿಣಿ, ಯುದ್ಧಕಾಲದಲ್ಲಿ ಕ್ಷಾತ್ರತೇಜಸ್ಸನ್ನು ಉದ್ಬೋಧಗೊಳಿಸುವ ಕ್ಷತ್ರಿಯಾಣಿ, ದೇವ ಬ್ರಾಹ್ಮಣ ಗುರು ಹಿರಿಯರ ಆರಾಧನೆಯಲ್ಲಿ ಭಯ ಭಕ್ತಿಗಳಿಂದ ಕೂಡಿದ ಶಿಷ್ಯೆ, ಕಷ್ಟ ಕಾಲದಲ್ಲಿ ಬಂಧು, ಗೆಳೆಯನಂತೆ ಅಂದರೆ ಗೃಹಿಣಿಯೇ ಮಂತ್ರಿ, ಗೆಳೆಯ ಪ್ರಿಯ ಶಿಷ್ಯೆ ಹೀಗೆ ಏನೆಲ್ಲಾ ಆಗಿರುತ್ತಾಳೆಂದು ಭೋಜಕವಿ ಹೇಳುತ್ತಾನೆ.

ಪತಿ ಗೃಹಕ್ಕೆ ತೆರಳುತ್ತಿರುವ ಶಕುಂತಲೆಯನ್ನು ಕುರಿತು ಅಭಿಜ್ಞಾನ ಶಾಕುಂತಲ"ದಲ್ಲಿ ಕಣ್ವರು ಮಾಡಿದ ಉಪದೇಶವು ಸಾರ್ವಕಾಲಿಕವಾಗಿ ಎಲ್ಲ ಗೃಹಣಿಯರಿಗೂ ಅನ್ವಯವಾಗುವಂತಿದೆ. "ಶುಶ್ರೂಷಸ್ವಗುರೂನ್" ಗಂಡನ ಮನೆಯಲ್ಲಿ ಇಹಪರ ಲೋಕಗಳಲ್ಲಿನ ಶ್ರೇಯಸ್ಸಿಗಾಗಿ ಅತ್ತೆ ಮಾವಂದಿರೇ ಮೊದಲಾದ ಗುರುಹಿರಿಯರನ್ನು ಗೌರವದಿಂದ ಕಾಣಬೇಕು. ಕಾರ್ಯಬಾಹುಳ್ಯದಿಂದ ಬೇಸತ್ತು ಕೋಪದಿಂದ ಗಂಡ ಬೈದರೆ, ಅಸಡ್ಡೆ ಮಾಡಿದರೆ, ಎದುರಾಡುವುದಾಗಲೀ, ವಿರೋಧಿಸುವುದಾಗಲೀ, ಮಾಡಬಾರದು. "**ಭೂಯಿಷ್ಟಂಭವ ದಕ್ಷಿಣಭಾ ಪರಿಜನೇ**" ಸೇವಕ ಜನರ ವಿಷಯದಲ್ಲಿ ಉದಾರಿಯೂ

ದಾಕ್ಷಿಣ್ಯ ಸ್ವಭಾವದವಳೂ ಆಗಿರಬೇಕು. ಭಾಗ್ಯೇಷ್ವನುತ್ಸೇಕಿನೀ-ಸಮಸ್ತ ಭೋಗ ಭಾಗ್ಯಗಳಿದ್ದರೂ ಅತ್ಯುತ್ಸಾಹ-ಅಹಂಕಾರಗಳಿಲ್ಲದೆ ಸಮಾಧಾನಿಯಾಗಿರಬೇಕು. ಇವು ಸದ್ಗೃಹಿಣಿಯ ಲಕ್ಷಣಗಳು. ಈಕೆಯಿರುವ ಮನೆಯೇ ಸ್ವರ್ಗ.

ನವ ವಧುವನ್ನು ಬೀಳ್ಕೊಡುವಾಗ ಗುರುಹಿರಿಯರ ಸಮ್ಮುಖದಲ್ಲಿ ಗೃಹಸ್ಥ ಧರ್ಮದ ನಿರ್ವಹಣೆಯಲ್ಲಿ ಗಂಡನ ಹೊಣೆಗಾರಿಕೆಯೇನು, ಸತಿಯ ಧರ್ಮವೇನು ಎಂಬುದನ್ನು ವಿವರವಾಗಿ ಬೋಧಿಸುವ, ಹಾಗೂ ಅತ್ರಿ-ಅನಸೂಯ, ಅರುಂಧತಿ ವಸಿಷ್ಠ ಮೊದಲಾದ ಪೌರಾಣಿಕ ಪಾತ್ರಗಳಂತೆ, ಅನ್ಯೋನ್ಯ ಪ್ರೀತಿಯಿಂದಲೂ ಮತ್ತು ಅರ್ಧನಾರೀಶ್ವರನಂತೆ ಎಂದೂ ಅಗಲದೆ ಆದರ್ಶವಾಗಿ ಸುಖಸಂತೋಷ ಸಮೃದ್ಧಿಯಿಂದಲೂ ಬದುಕುವಂತೆ ಹಾರೈಸುವ ಒಂದು ಅತಿ ಮುಖ್ಯವಾದ ಶಿಷ್ಟಾಚಾರ ಇಂದು ಮರೆಯಾಗಿದೆ. ಆ ಜಾಗವನ್ನು ಕಾಲಾನುಗುಣವಾದ ಹೊಸಹೊಸ ಸಂಪ್ರದಾಯಗಳು ಆಕ್ರಮಿಸುತ್ತಿವೆ. ಇದು ಖೇದದ ಸಂಗತಿ.

ಶಿವ ಪಾರ್ವತಿಯರನ್ನು ಆದರ್ಶ ದಂಪತಿಗಳೆಂದು ಪುರಾಣದಲ್ಲಿ ವರ್ಣಿಸಲಾಗಿದೆ. ಇವರು "ಪರಸ್ಪರ ತಪಸಪತ್ ಫಲಾಯಿತ ಪರಸ್ಪರೌ" ಪಾರ್ವತಿಯ ತಪಸ್ಸಿಗೆ ಶಿವನನ್ನು ಪತಿಯನ್ನಾಗಿ ಪಡೆಯುವುದೇ ಉದ್ದೇಶ. ಶಿವನ ತಪಸ್ಸಿನ ಗುರಿ ಪಾರ್ವತಿಯನ್ನು ಸತಿಯನ್ನಾಗಿ ಪಡೆಯುವುದು. ಪರಸ್ಪರರನ್ನು ಪಡೆಯುವುದೇ ಇಬ್ಬರ ತಪಸ್ಸಿಗೆ ಫಲ. ಆದ್ದರಿಂದಲೇ ಇವರು ಆದರ್ಶ ದಂಪತಿಗಳು ಪಾರ್ವತಿ ಪರ್ವತ ರಾಜನ ಮಗಳು. ಒಬ್ಬ ರಾಜಕುಮಾರಿ ತನ್ನ ಪತಿಯಲ್ಲಿ. ಅಪೇಕ್ಷಿಸಬಹುದಾದ ಯಾವ ಅರ್ಹತೆ-ಗುಣಗಳೂ ಶಿವನಲ್ಲಿ ಮೇಲ್ನೋಟಕ್ಕೆ ಕಾಣುವುದಿಲ್ಲ. ಇವನು ದಿಗಂಬರ. ಸ್ಮಶಾನ ನಿಲಯ, ಭಸ್ಮೋದ್ಧೂಳಿತ ವಿಗ್ರಹ, ವ್ಯಾಘ್ರ ಚರ್ಮಧರಿಸಿದವ ಆದರೂ ಪಾರ್ವತಿ ಅವನ ಅರ್ಧ ಶರೀರವೇ ಆದಳು. ಹಿಮಾಲಯದಲ್ಲಿ ಮನೆ ಮಾಡಿದ ಅವನ ವಾಹನ ವೃಷಭ, ಗಂಗೆ ಪಾರ್ವತಿಯ ಸವತಿಯಂತೆ, ಶಿವ ಸರ್ಪ ಭೂಷಣ. ಇವನ ಒಬ್ಬ ಮಗ ಮಯೂರ ವಾಹನ. ಇನ್ನೊಬ್ಬ ಮೂಷಕವಾಹನ ಇಷ್ಟೊಂದು ವೈರುಧ್ಯಗಳ ನಡುವೆಯೂ ಪಾರ್ವತೀ ಪರಮೇಶ್ವರರು ಒಂದಾಗಿ ಸೇರಿರುವ ಅರ್ಧನಾರೀಶ್ವರರು. ಎಷ್ಟೇ ಕಷ್ಟನಷ್ಟಗಳು, ಅಡೆತಡೆಗಳು, ವಿರೋಧ ಆಭಾಸಗಳು ಎದುರಾದರೂ ಸುಖ-ಶಾಂತಿ, ಸಮೃದ್ಧಿ, ಪ್ರೀತಿ, ವಿಶ್ವಾಸಗಳಿಂದ ಆದರ್ಶ ಸಂಸಾರವನ್ನು ನಿರ್ವಹಿಸಲು ಸಾಧ್ಯವಾಗುವಂತೆ ವರವನ್ನು ಕರುಣಿಸಿರೆಂದು ಪಾರ್ವತೀ ರಮೇಶ್ವರರನ್ನು ಪ್ರಾರ್ಥಿಸೋಣ.

ಪುರುಷ ಪ್ರಧಾನವಾದ ಕೌಟುಂಬಿಕ ವ್ಯವಸ್ಥೆಗೆ ಮಾತ್ರವೇ ಅನ್ವಯವಾಗಬಹುದಾದ ಈ ಲೇಖನದ ಕೆಲವು ಸಂಗತಿಗಳು ಗಂಡ ಹೆಂಡಿರಿಬ್ಬರೂ ದುಡಿಯುವ ಪ್ರಸ್ತುತ ಜೀವನ ಶೈಲಿಗೆ ಹೊಂದಿಕೆಯಾಗಲಾರವು. ಅಂತಹ ವಿಚಾರಗಳನ್ನು ಮರೆತುಬಿಡಬೇಕು.





# ಮಹಾ ಪ್ರತಿವ್ರತೆ ಅರುಂಧತಿ

ಹಿಂದೂ ವಿವಾಹ ಪದ್ಧತಿಯಲ್ಲಿ ವಿವಾಹ ಹೋಮ-ಸಪ್ತಪದಿಯ ನಂತರ ವಧೂವರರು ರಾತ್ರಿ ಅರುಂಧತೀ ದರ್ಶನ ಮಾಡಿ "**ಜೀವಪತ್ನೀ ಪ್ರಜಾಂ ವಿಂದೇಯಂ**" -"ನಾನು ಸುಮಂಗಲಿಯಾಗಿ ಪತಿಯುಕ್ತಳಾಗಿ ಸಂತಾನವನ್ನು ಪಡೆಯುವಂತೆ ಅನುಗ್ರಹಿಸು" ಎಂದು ವಧುವಿನಿಂದ ಪ್ರಾರ್ಥನೆ ಮಾಡಿಸುವುದು ಸಂಪ್ರದಾಯ. "**ರಾತ್ರೌ ಅರುಂಧತಿ ದರ್ಶನಾನಂತರಮೇವ ವಾಗ್ವಿಸರ್ಗಃ** ॥ ಅಂದರೆ ರಾತ್ರಿಯಲ್ಲಿ ಅರುಂಧತೀ ದರ್ಶನದ ನಂತರವೇ ವಧೂವರರು ಮೌನಮುರಿದು ಪರಸ್ಪರ ಮಾತನಾಡಿಸ ಬಹುದೆಂದು ಅರ್ಥ. ಆಕಾಶದಲ್ಲಿ ಉತ್ತರ ದಿಕ್ಕಿನ ಧ್ರುವನಕ್ಷತ್ರವನ್ನು ಕೇಂದ್ರವಾನ್ನಾಗಿರಿಸಿ ಕೊಂಡು ಸುತ್ತುತ್ತಿರುವ ಗಾಳಿಪಟದ ಆಕಾರದ ನಂಕ್ಷತ್ರಪುಂಜಕ್ಕೆ ಸಪ್ತರ್ಷಿ ಮಂಡಲವೆಂದು ಹೆಸರು. ಸಪ್ತರ್ಷಿ ಮಂಡಲದ ಬಾಲದ ತುದಿಯಿಂದ 4ನೇ ನಕ್ಷತ್ರದ ಸಮೀಪ ಉಳಿದ ನಕ್ಷತ್ರಗಳಿಗಿಂತ ಸ್ವಲ್ಪ ಮಲಿನವಾದ ನಕ್ಷತ್ರವನ್ನು ಅರುಂಧತೀ ನಕ್ಷತ್ರವೆಂದು ಗುರುತಿಸ ಲಾಗುತ್ತದೆ. ವಸಿಷ್ಠರ ಚಾರಿತ್ರ್ಯದ ಬಗೆಗೆ ಸಂದೇಹಪಟ್ಟುದರಿಂದ ಈ ಮಲಿನತೆ ಪ್ರಾಪ್ತವಾಯಿತೆಂದು ಹೇಳಿದೆ.

**ಧರಾಂ ಧರಿತ್ರೀಂ ವಸುಧಾಂ ಭರ್ತುಃ ತಿಷ್ಠಾಮ್ಯನಂತರಮ್ ।**
**ಮನೋಽನುರುಂಧತೀ ಭರ್ತುಃ ಇತಿ ಮಾಂವಿದ್ಧ್ಯರುಂಧತೀಮ್ ॥**

ನಾನು ಧರೆ (ಭೂ ಸ್ವರೂಪಳು) ನಾನು ಧರೆಯನ್ನು ಧರಿಸಿದವಳು. ಸಂಪತ್ತುಗಳನ್ನು ಧರಿಸಿದವಳೂ ನಾನೆ. ನಿರಂತರವಾಗಿ, ಆತನ ಮನಸ್ಸನ್ನನುಸರಿಸಿ ಪತಿಯೊಡನೆ ನಡೆಯುವವಳು ಎಂದು ಯಾತುಧಾನಿಗೆ ಅರುಂಧತಿ ತನ್ನನ್ನು ಸ್ವತಃ ಪರಿಚಯಿಸಿಕೊಳ್ಳುತ್ತಾಳೆ. ಅರುಷಃ -ಅತಿ ಕಠಿನಾದೀನ್ ಧರಾಧೀನ್-ದಧಾತಿ ಇತಿ ಅರುಂಧತೀ. ಅನುರುಂಧತೀ ಶಬ್ದದಲ್ಲಿನ 'ನು'ಕಾರ ಲೋಪದಿಂದಲೂ ಅರುಂಧತೀ ಶಬ್ದದ ನಿಷ್ಪತ್ತಿಯಾಗುತ್ತದೆ

-(**ಅನುಶಾಸನ ಪರ್ವ**)

ಈ ಅರುಂಧತಿಯ ಪೌರಾಣಿಕ-ಧಾರ್ಮಿಕ ಹಿನ್ನಲೆ ಅತ್ಯಂತ ಸ್ವಾರಸ್ಯವಾಗಿದೆ. ಈಕೆ ಸಪ್ತರ್ಷಿಗಳಲ್ಲೊಬ್ಬರಾದ ವಸಿಷ್ಠರ ಪತ್ನಿ. ಅಕ್ಷಮಾಲಾ ಎಂಬುದು ಈಕೆಯ ಇನ್ನೊಂದು ಹೆಸರು. ದೇವಹೂತಿ-ಕರ್ದಮ ಪ್ರಜಾಪತಿಯ ಒಂಬತ್ತು ಹೆಣ್ಣು ಮಕ್ಕಳಲ್ಲಿ ಈಕೆ ಒಬ್ಬಳು. ಅತ್ರಿ ಮಹರ್ಷಿಗಳ ಪತ್ನಿ ಅನಸೂಯಾ ಈಕೆಯ ಸಹೋದರಿ. ಕಪಿಲ ಮಹರ್ಷಿ ಈಕೆಯ ಸಹೋದರ. ಇನ್ನೊಂದು ಕಥೆಯಂತೆ ಇವಳು ಸಂಧ್ಯಾ ಹೆಸರಿನ, ಬ್ರಹ್ಮನ ಮಾನಸ ಪುತ್ರಿ. ಶಂಕರನ ಆದೇಶದಂತೆ ಮೇಧಾತಿಥಿಯ ಯಜ್ಞದ ಅಗ್ನಿಕುಂಡದಿಂದ ಆತನ ಕನ್ಯೆಯ ರೂಪದಲ್ಲಿ ಅವಿರ್ಭವಿಸಿದಳು. ದೇವತೆಗಳು ವಸಿಷ್ಠರಿಗೆ ಮದುವೆ ಮಾಡಿಸಿದರು.

ಅರುಂಧತಿ ಭಗವಾನ್ ಶಂಕರನಿಗಾಗಿ 12 ವರ್ಷ ತಪೋನಿರತಳಾಗಿ (ಯಲಚಿ) ಬದರಿ ಹಣ್ಣನ್ನು ಬೇಯಿಸಿದ್ದರಿಂದ 'ಬದರ ಪಾಚನ ಕ್ಷೇತ್ರ'ವೆಂದು ಪ್ರಸಿದ್ಧವಾದ ಒಂದು

ಪುಣ್ಯ ಕ್ಷೇತ್ರವಿದೆ. ಈ ಕ್ಷೇತ್ರದಲ್ಲಿ 3 ದಿನ ಉಪವಾಸ ವ್ರತಮಾಡಿದವರಿಗೆ 12 ವರ್ಷದ ತಪೋ–ನುಷ್ಠಾನದ ಫಲ ಸಿದ್ಧಿಸುವಂತೆ ಶಂಕರ ಅರುಂಧತಿಗೆ ವರವನ್ನು ಅನುಗ್ರಹಿಸಿದನೆಂಬ ಕಥೆಯಿದೆ. ವನಪರ್ವದಲ್ಲಿ 'ಅರುಂಧತೀ ವಟ'ವೆಂಬ ಒಂದು ಕ್ಷೇತ್ರದ ಉಲ್ಲೇಖವಿದೆ. ಈ ಕ್ಷೇತ್ರದ ಸಾಮುದ್ರಿಕ ತೀರ್ಥದಲ್ಲಿ ಸ್ನಾನ ಮಾಡಿ ಮೂರು ರಾತ್ರಿ ನಿರಾಹಾರವಾಗಿ ಕಳೆಯುವವರಿಗೆ ಅಶ್ವಮೇಧ ಯಾಗಫಲ, ಸಹಸ್ರಧೇನು ದಾನ ಫಲ ದೊರಕುತ್ತದೆ.

ಅರುಂಧತಿಯನ್ನು ಮಹಾಪತಿವ್ರತಾಶಿರೋಮಣಿ, ಆದರ್ಶ ಪತ್ನಿ, ದೀರ್ಘ ಸುಮಂಗಲಿ, ಪರಮ ಸಾಧ್ವಿ ಎಂದು ಮುಂತಾಗಿ ವರ್ಣಿಸಲಾಗಿದೆ. ಕೈಗಳಲ್ಲಿ ಬಳೆ, ಕತ್ತಿನಲ್ಲಿ ಕರಿಮಣಿ, ಮೂಗಿನಲ್ಲಿ ನತ್ತು, ಕಿವಿಗಳಲ್ಲಿ ಬೆಂಡೋಲೆ, ಹಣೆಯಲ್ಲಿ ಕೆಂಪು ಕುಂಕುಮದ ತಿಲಕ, ಕೆನ್ನೆಗಳಲ್ಲಿ ಅರಿಸಿನ ಲೇಪದ ಕುರುಹು, ಕಣ್ಣುಗಳಿಗೆ ಕಾಡಿಗೆ, ನೇರ ಬೈತಲೆ, ತುರುಬು ಅಥವಾ ಜಡೆ, ಮುಡಿಯಲ್ಲಿ ಹೂವು, ಮಧುರ ಭಾಷಿತ – ಸುಮಂಗಲಿಯರ ಲಕ್ಷಣಗಳು ಇಂತಹ ಲಕ್ಷಣಗಳಿಂದ ಶೋಭಿಸುವ ಸ್ತ್ರೀಯರು ದೀರ್ಘಸುಮಂಗಲಿಯರಾಗುತ್ತಾರೆ. ಅಂದರೆ ಇವರ ಪತಿಯ ಆಯಸ್ಸು ವೃದ್ಧಿಯಾಗುತ್ತದೆ.

**ಅರುಂಧತಿಯ ಪಾತಿವ್ರತ್ಯದ ಪರೀಕ್ಷೆ:** ತಾರಾಕಾಸುರನಿಂದ ಪೀಡಿತರಾದ ದೇವತೆಗಳಿಂದ ಪ್ರೇರಿತರಾಗಿ ವಸಿಷ್ಠಾದಿ ಮಹರ್ಷಿಗಳು ಆರಂಭಿಸಿದ ಯಾಗಕ್ಕೆ ಆಹ್ವಾನಿತನಾಗಿ ಅದ್ಭುತಾಗ್ನಿ ಸೂರ್ಯಮಂಡಲದಿಂದ ಯಾಗಶಾಲೆಗೆ ಅಗಮಿಸುತ್ತಾನೆ. ಆಹವನೀಯಾಗ್ನಿಯೊಡನೆ ಸೇರಿಕೊಂಡು ಆಯಾ ದೇವತೆಗಳಿಗೆ ಹವ್ಯಗಳನ್ನು ತಲುಪಿಸಿ ಹಿಂದಿರುಗುವಾಗ ವಿವಿಧ ಭಂಗಿಗಳಲ್ಲಿರುವ ಋಷಿಪತ್ನಿಯರನ್ನು ಕಂಡು ಮೋಹ ಪರವಶನಾಗುತ್ತಾನೆ. ತನ್ನ ಮನೋವಿಕಾರವನ್ನು ಅದುಮಿಟ್ಟುಕೊಳ್ಳಲಾರದೆ. ಹೇಗಾದರೂ ಋಷಿಪತ್ನಿಯರ ಸಂಗಸುಖ ಪಡೆಯಬೇಕೆಂದು ಯೋಚಿಸಿ ಕಾರ್ಯ ಸಾಧನೆಗಾಗಿ ಗಾರ್ಹಪತ್ಯಾಗ್ನಿಯೊಡನೆ ಸೇರಿ ಋಷಿಪತ್ನಿಯರ ಸೌಂದರ್ಯವನ್ನೂ ಸ್ಪರ್ಶಸುಖವನ್ನೂ ಅನುಭವಿಸತೊಡಗುತ್ತಾನೆ. ಕಾಮತೃಷೆಯನ್ನು ಸಹಿಸಲಾರದೆ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಯೋಚಿಸಿ ಗಾರ್ಹಪತ್ಯನಿಂದ ಹೊರಬಂದು ಕಾಡಿಗೆ ಹೊರಟುಹೋದ.

ದಕ್ಷನ ಮಗಳಾದ ಸ್ವಾಹಾದೇವಿ ಅದ್ಭುತಾಗ್ನಿಯನ್ನು ಮೋಹಿಸಿ ಪ್ರಣಯ ಸುಖವನ್ನನುಭವಿಸಕೆಂದು ಆಶಿಸುತ್ತಿದ್ದಳು. ಅದ್ಭುತನು ಋಷಿಪತ್ನಿಯರನ್ನು ಮೋಹಿಸಿದ ಸಂಗತಿಯನ್ನರಿತು ತಾನು ಋಷಿಪತ್ನಿಯರ ವೇಷದಲ್ಲಿ ಆತನ ಸಂಗ ಮಾಡುವುದಾಗಿ ನಿರ್ಧರಿಸಿ ಕಾಡಿನಲ್ಲಿ ಅವನನ್ನು ಹಿಂಬಾಲಿಸಿದಳು. ಪ್ರತಿಬಾರಿಯೂ ಒಬ್ಬೊಬ್ಬ ಋಷಿಪತ್ನಿಯ ವೇಷದಲ್ಲಿ ಒಟ್ಟು ಆರುಬಾರಿ ಆರು ಜನ ಋಷಿಪತ್ನಿಯರ ವೇಷದಲ್ಲಿ ಅದ್ಭುತನೊಡನೆ ರಮಿಸಿ, ಅತನ ರೇತಸ್ಸನ್ನು (ಗರ್ಭದಲ್ಲಿ ಧರಿಸದೆ) ಪ್ರತ್ಯೇಕವಾಗಿ ಧರಿಸಿ, ಪ್ರತಿಸಾರಿಯೂ ಪಕ್ಷಿರೂಪದಿಂದ ಹಾರಿ ಶ್ವೇತ ಪರ್ವತದ ಶಿಖರದ ಸುವರ್ಣಮಯ ಕುಂಭದಲ್ಲಿ ನಿಕ್ಷೇಪಿಸಿದಳು. ಆದರೆ **ಮಹಾ ಪತಿವ್ರತೆಯೂ ತಪಸ್ವಿನಿಯೂ ಆದ ಅರುಂಧತಿಯ ರೂಪವನ್ನು ಮಾತ್ರ ಧರಿಸಲು ಸ್ವಾಹಾದೇವಿಗೆ ಸಾಧ್ಯವಾಗಲಿಲ್ಲ.**



ಮುಂದೆ ಆರು ಜನ ಋಷಿಪತ್ನಿಯರ ಮೇಲೆ ಪರಸಂಗದ ಅಪವಾದ ಬಂದು ನಿಜಸಂಗತಿ ತಿಳಿದ ಮೇಲೂ, ಲೋಕಾಪವಾದ ಭೀತಿಯಿಂದ ಆರೂ ಮಂದಿ ಋಷಿಗಳು ತಮ್ಮ ತಮ್ಮ ಪತ್ನಿಯರನ್ನು ತೊರೆದುಬಿಟ್ಟರು. ಆದರೆ ಅರುಂಧತಿ ಮಾತ್ರ ವಸಿಷ್ಠರೊಡನೆ ಉಳಿದುಕೊಂಡಳು. ಅದುದರಿಂದ ವಸಿಷ್ಠರೊಡನೆ ಅರುಂಧತಿಗೂ ಪೂಜೆ ಸಲ್ಲಿಸುವ ಸಂಪ್ರದಾಯ ಬಂದಿದೆ.

**ಧನ್ಯಾ ಜನನೀ ಲೋಕೇ ಧನ್ಯೋಽಸೌಜನಕಃ ಪುನಃ।**
**ಧನ್ಯಃ ಸ ಚ ಪತಿಃ ಶ್ರೀಮಾನ್ ಯೇಷಾಂ ಗೇಹೇ ಪತಿವ್ರತಾ ॥**

ಯಾರ ಮನೆಯಲ್ಲಿ ಪತಿವ್ರತೆಯಿರುತ್ತಾಳೊ ಅಂತಹ ತಾಯಿ ತಂದೆ ಪತಿ ಎಲ್ಲರೂ ಧನ್ಯರು.

–ಸ್ಕಂದ ಪುರಾಣ



# ಸ್ಮಾರ್ತ ಎಂದರೆ ಏನು? ಯಾರು ?

'ಸ್ಮಾರ್ತ' ಎಂಬ ಶಬ್ದದ ಮೂಲ 'ಸ್ಮೃತಿ'. ಸ್ಮೃತಿಯ ಅರ್ಥವ್ಯಾಪ್ತಿ ದೊಡ್ಡದು. ಸಂಕ್ಷೇಪವಾಗಿ ಹೇಳುವುದಾದರೆ ಮನುಸ್ಮೃತಿ, ಗೌತಮ ಧರ್ಮಸೂತ್ರ, ಅಪಸ್ತಂಬ ಧರ್ಮಸೂತ್ರ ಯಾಜ್ಞವಲ್ಯ ಸ್ಮೃತಿ ಮುಂತಾದ ವೇದಗಳಲ್ಲಿ ಅರ್ಥವಾಗದ ಧಾರ್ಮಿಕ, ಆಧ್ಯಾತ್ಮಿಕ ಸತ್ವವನ್ನೂ, ಆಚರಣೆಗಳ ವಿಧಿ–ವಿಧಾನವನ್ನೂ ವಿವರಿಸುವ ಗ್ರಂಥಗಳೇ ಸ್ಮೃತಿಗಳು. ನಮ್ಮ ಸಮಸ್ತ ಧಾರ್ಮಿಕ ಆಚಾರ–ವಿಚಾರಗಳಿಗೆ ವೇದಗಳೇ ಮೂಲ ಎಂದು ಸ್ಮೃತಿಗಳೇ ಹೇಳಿವೆ **(ವೇದೋಽಖಿಲೋ ಧರ್ಮಮೂಲಂ–ಗೌತಮ ಧರ್ಮಸೂತ್ರ)** ಇವು ಚತುರ್ವಿಧ ಪುರುಷಾರ್ಥ ಸಿದ್ಧಾಂತಗಳನ್ನು ಅಚರಣೆಗೆ ಅನುಕೂಲವಾಗುವಂತೆ, ಸರಳೀಕರಿಸಿ ತಿಳಿಯಪಡಿಸುತ್ತವೆ. ಎಲ್ಲಾ ವರ್ಣಾಶ್ರಮದವರಿಗೂ ಅನ್ವಯಿಸುವಂತೆ, ನೈತಿಕ ಜೀವನ ನಡೆಸಲು ಅವಶ್ಯಕವಾದ ಮೂಲಭೂತವಾದ ಸಾಮಾನ್ಯ ನಿಯಮಗಳನ್ನು ನಿರೂಪಿಸುತ್ತವೆ. ನೈತಿಕ ಜೀವನ ಯಾತ್ರೆಯಲ್ಲಿ ಮಾನವ ಜನಾಂಗವನ್ನು ಸಮರ್ಥವಾಗಿ ರೂಪಿಸುವ ವಿವಿಧ ಸಂಸ್ಕಾರಗಳ ಕುರಿತೂ ವಿವರಿಸುತ್ತವೆ. ಹೀಗೆ ವಿಶಾಲವಾದ ಅರ್ಥವ್ಯಾಪ್ತಿಯುಳ್ಳ ಸ್ಮೃತಿಗಳಲ್ಲಿ ಉಕ್ತವಾದ ವಿಚಾರಗಳಲ್ಲಿ ಅಸಕ್ತಿ, ನಂಬಿಕೆ, ಶ್ರದ್ಧೆ ಹಾಗೂ ಈ ಸ್ಮೃತಿಗಳ ತತ್ವಗಳನ್ನು ಅನುಷ್ಠಾನ ಮಾಡುವ ಎಲ್ಲರೂ ಸ್ಮಾರ್ತರು.

# ದರ್ಭೆಯ ಮಹತ್ವ

ಹಿಂಸಾರ್ಥಕವಾದ 'ದೃ' ಎಂಬುದು ದರ್ಭ ಶಬ್ದದ ಮೂಲ ಕ್ರಿಯಾರೂಪವೆಂದು ಹೇಳುತ್ತಾರೆ. 'ವಿಶ್ವಾಮಿತ್ರ ದರ್ಭ' ಅತ್ಯಂತ ಹರಿತವಾಗಿದ್ದು ಅಜಾಗಾರೂಕತೆಯಿಂದಾಗಿ ಗಾಯವಾಗುವುದುಂಟು. "ಯಥಾ ವಜ್ರಂ ಹರೇಃ ಪಾಣೌ" ಎಂಬ ಉಕ್ತಿಯಲ್ಲಿ ಈ ಅರ್ಥ ಸಮನ್ವಯವಾಗುತ್ತದೆ 'ದರ್ಭೆ' ಮತ್ತು 'ಕುಶ' ಪ್ರತ್ಯೇಕವಾಗಿ ವ್ಯವಹರಿಸಲ್ಪಡುತ್ತಿದ್ದಿರ ಬೇಕೆಂದೂ ಹೇಳುತ್ತಾರೆ. ಅದರೆ ಈಗ ಸಮಾನಾರ್ಥಕವಾಗಿಯೇ ಬಳಕೆಯಲ್ಲಿವೆ. 'ಕುಶ' ಎಂದರೆ ದರ್ಭೆ. ನಿತ್ಯ ನೈಮಿತ್ತಿಕ ಕರ್ಮಗಳಲ್ಲಿ ಮಂತ್ರದಿಂದ ಅಭಿಮಂತ್ರಿತವಾದ ದರ್ಭೆಯ ಉಪಯೋಗದಿಂದ ಪಾಪ ನಾಶವಾಗುತ್ತದೆ ಎಂಬುದು ಭರದ್ವಾಜಸ್ಮೃತಿಯ ಉಕ್ತಿ.

**ಪಾಪಾಹ್ವಯಃ 'ಕು' ಶಬ್ದಃ ಸ್ಯಾತ್ 'ಶ' ಶಬ್ದಃ ಶಮನಾಹ್ವಯಃ ।**
**ತೂರ್ಣೇನ ಪಾಪಶಮನಂ ಯೇನೈತತ್ 'ಕುಶ' ಉಚ್ಯತೇ ॥**

'ಕು' ಅಕ್ಷರ ಪಾಪನಾಶಕ, 'ಶ' ಅಕ್ಷರ ಎಲ್ಲಾ ವಿಧವಾದ ದೋಷ ಪರಿಹಾರ ಸೂಚಕ, ಅಂದರೆ ಅತಿ ಶೀಘ್ರವಾಗಿ ಪಾಪನಾಶಮಾಡುವುದರಿಂದ ಇದನ್ನು 'ಕುಶ' ಎನ್ನುತ್ತಾರೆ.

**ಧರಣ್ಯಾಂ ದುಃಖ ಸಂಭೂತಿಃ ಪಾಷಾಣೇ ವ್ಯಾಧಿ ಪೀಡನಮ್ ।**
**ಜಪಧ್ಯಾನ ತಪೋ ಹಾನಿಂ ವಸ್ತ್ರಾ ಸನಂ ಕರೋತಿ ಹ ॥**
**ಭೂಮೌ ದರ್ಭಾಸನೇ ರಮ್ಯೇ ಸರ್ವದೋಷ ವಿವರ್ಜಿತೇ ।**
**ಕುಶಾಸನೇ ಮಂತ್ರ ಸಿದ್ಧಿಃ ನಾತ್ರಕಾರ್ಯಾ ವಿಚಾರಣಾ ॥**

ಸತ್ಕರ್ಮಾನುಷ್ಠಾನದಲ್ಲಿ ಭೂಮಿಯ ಮೇಲೆ ಕುಳಿತುಕೊಳ್ಳುವುದರಿಂದ ದುಃಖವುಂಟಾಗುತ್ತದೆ. ಕಲ್ಲಿನ ಮೇಲೆ ಕುಳಿತರೆ ವ್ಯಾಧಿ ಉಂಟಾಗುತ್ತದೆ. ವಸ್ತ್ರದ ಮೇಲೆ ಕುಳಿತುಕೊಂಡು ಮಾಡಿದ ಯಾವುದೇ ಅನುಷ್ಠಾನ ನಿಷ್ಫಲವಾಗುತ್ತದೆ. ಆದುದರಿಂದ ಮಂತ್ರಾನುಷ್ಠಾನ ಸಿದ್ಧಿಗಾಗಿ ದರ್ಭಾಸನದ ಮೇಲೆ ಕುಳಿತುಕೊಳ್ಳಬೇಕು.

ಅನುಷ್ಠಾನದಲ್ಲಿ ಮನಸ್ಸಿನ ಏಕಾಗ್ರತೆಗೆ ಕುಶಾಸನದ ಮೇಲೆ ಕುಳಿತುಕೊಳ್ಳಬೇಕು **"ಚೈಲಾಜಿನ ಕುಶೋತ್ತರಂ"** – ಭಗವದ್ಗೀತೆ (6–11)

ಅಥರ್ವವೇದ ಕಾಂಡ6, ಪ್ರಪಾಠಕ್13, ಅನುವಾಕ್5 ಸೂಕ್ತ43ರ ಮೂರು ಮಂತ್ರಗಳು ಹೀಗಿವೆ

**ಆಯಂ ದರ್ಭೋ ವಿಮನ್ಯುಕಃ ಸ್ವಾಯಂ ಚಾರಣಾಯ ಚ ।**
**ಮನ್ಯೋರ್ವಿಮನ್ಯು ಕಸ್ಯಾಯ ಮನ್ಯು ಶಮನ ಉಚ್ಯತೇ ॥**
**ಆಯಂ ದರ್ಭಃ ವಿಮನ್ಯುಕಃ ಸ್ವಾಯ ಚಾರಣಾಯ ಚ –**
**ಆಯಂ ಮನ್ಯೋಃ ವಿಮನ್ಯುಕಸ್ಯ ಮನ್ಯುಶಮನಃ ಉಚ್ಯತೇ ॥**



ಈ ದರ್ಭೆಯು ಅನ್ಯರ ದರ್ಪವನ್ನೂ ಕ್ರೋಧವನ್ನೂ ನಿವಾರಿಸಬಲ್ಲುದಾಗಿದೆ ಇದು ದರ್ಪಿಷ್ಠನ ಸೊಕ್ಕನ್ನಡಗಿಸಬಲ್ಲುದಾಗಿದೆ. ಅದ್ದರಿಂದಲೆ ಇದು ಕ್ರೋಧಶಮನ ಮಾಡುತ್ತದೆ ಎಂದು ಹೇಳಲ್ಪಟ್ಟಿದೆ.

**ಅಯಂ ಯೋ ಭೂರಿಮೂಲಃ ಸಮುದ್ರಮವತಿಷ್ಠತಿ ।**
**ದರ್ಭಃ ಪ್ರಥಿವ್ಯಾ ಉತ್ಥಿತೋ ಮನ್ಯು ಶಮನ ಉಚ್ಯತೇ ॥**
**ಯಃ ಅಯಂ ಭೂರಿ ಮೂಲಃ –ಸಮುದ್ರಂ ಅವತಿಷ್ಠತಿ –**
**ಪೃಥಿವ್ಯಾಃ ಉತ್ಥಿತಃ ದರ್ಭಃ –ಮನುಶಮನಃ ಉಚ್ಯತೇ ॥**

ಬಹಳ ಬೇರುಗಳುಳ್ಳ –ಸಮುದ್ರದ ಸಮೀಪ ಹಬ್ಬಿ ನಿಲ್ಲುವ, ಭೂಮಿಯಿಂದ ಎದ್ದ ಈ ದರ್ಭೆ, ಮನ್ಯುಶಮನ (ಕ್ರೋಧನಾಶಕ)ವೆಂದು ಹೆಳಲ್ಪಡುತ್ತದೆ.

**ವಿತೇ ಹನವ್ಯಾಂ ಶರಣಿಂ ವಿ ತೇ ಮುಖ್ಯಾಂ ನಯಾಮಸಿ ।**
**ಯಥಾ ವಶೋ ನ ವಾದಿಷೋ ಮಮ ಚಿತ್ತಮುಪಾಯಸಿ ॥**
**ತೇ ಹನವ್ಯಾಂ ಶರಣಿಂ ವಿ – ಮುಖ್ಯಾಂ ವಿ ನಯಾಮಸಿ –**
**ಯಥಾಮಮ ಚಿತ್ತಂ ಉಪಾಯಸಿ – ಅವಶಃ ನ ಅವಾದಿಷಃ ।**

ನಿನ್ನ ದವಡೆಯಲ್ಲಿರುವ ಕ್ರೋಧವನ್ನು ನಾಶಮಾಡುತ್ತೇವೆ. ಮುಖದಲ್ಲಿರುವ ಸಿಟ್ಟನ್ನು ಅಡಗಿಸುತ್ತೇವೆ. ಆಗ ನೀನು ನನ್ನ ಚಿತ್ತದ ಅನುಕೂಲವಾಗಿ ವರ್ತಿಸುವೆ. ಮನಸ್ಸಿಗೆ ಬಂದಂತೆ ಮಾತನಾಡದಿರು.

ದರ್ಭೇ ಕ್ರೋಧವನ್ನು ಅಹಂಕಾರವನ್ನೂ ನಾಶಮಾಡುತ್ತದೆ. ಮನಸ್ಸಿಗೆ ಬಂದಂತೆ ಮಾತನಾಡದೆ ವಿನಯ ಪೂರ್ವಕವಾಗಿ ವ್ಯವಹರಿಸುವಂತೆ ಸೂಚಿಸುತ್ತದೆ. ಸಮುದ್ರ ತೀರದಲ್ಲಿ ಹುಟ್ಟುವ ದರ್ಭೆಗೆ ಮಾನಸಿಕ ಒತ್ತಡವನ್ನು ನಿಯಂತ್ರಿಸುವ ಔಷಧೀಯ ಗುಣವೂ ಇಲ್ಲಿ ಪ್ರಸ್ತಾಪಿಸಲ್ಪಟ್ಟಿದೆ.

ದರ್ಭೆಯು ಹಸಿವನ್ನು ಪ್ರಚೋದಿಸುವಿಕೆಯಲ್ಲಿ ರಕ್ತ ಮತ್ತು ವೀರ್ಯ ಶುದ್ಧಿಯಲ್ಲಿ, ಅಲ್ಲದೇ ಕಾಮಾಲೆ (Jaundice) ಹಾಗೂ ಗುಳ್ಳೆಯೇಳುವ ಚರ್ಮರೋಗ (Herpes) ನಿವಾರಣೆಯಲ್ಲಿ ಹೀಗೆ ಬಹೂಪಯೋಗಿಯೆಂದು ಅಯುರ್ವೇದದ ಸಂಶೋಧನೆ ದೃಢೀಕರಿಸುತ್ತದೆ

# ಸ್ತ್ರೀ ಮತ್ತು ವೇದಾಧ್ಯಯನ

ಇಂದಿನ ದಿನಗಳಲ್ಲಿ ಸ್ತ್ರೀಯರು–ಕೆಳವರ್ಣದವರು ಸಮಾಜದಲ್ಲಿ 2ನೇ ದರ್ಜೆಯವರಾಗಿ ಪರಿಗಣಿಸಲ್ಪಡುತ್ತಾ ಅವಗಣನೆಗೆ ಗುರಿಯಾಗಿರುವುದರ ಕುರಿತು ವ್ಯಾಪಕವಾದ ವಾದ–ವಿವಾದಗಳು ನಡೆಯುತ್ತಿವೆ. ಇದಕ್ಕೆಲ್ಲ ವೈದಿಕ ಸಂಸ್ಕೃತಿಯೇ ಮೂಲ ಕಾರಣವೆಂಬ ನಿರ್ಧಾರಗಳು ಪ್ರಕಟವಾಗುತ್ತಿವೆ. ಅವರನ್ನೆಲ್ಲಾ ವೇದಾಧಿಕಾರ–ಅಧ್ಯಯನಗಳಿಂದ ವಂಚಿತರನ್ನಾಗಿ ಮಾಡಿ ತಮ್ಮ ಸ್ವಾರ್ಥಕ್ಕಾಗಿ ಉಚ್ಚವರ್ಣದವರು ಅವರನ್ನು ಸೇವಕರಂತೆ ಬಳಸಿಕೊಳ್ಳುತ್ತಿರುವ ಗಂಭೀರ ಆರೋಪ. ಇವಕ್ಕೆಲ್ಲಾ ಪೂರ್ಣವಾದ ಅಪವಾದಗಳು ವೈದಿಕ ಸಾಹಿತ್ಯದಲ್ಲಿಯೇ ಲಭ್ಯವಿದೆ. ವೇದಕಾಲೀನ ಸ್ತ್ರೀಯರಿಗೆ ಉಪನಯನ ಸಂಸ್ಕಾರ ವೇದ ಮಂತ್ರಗಳ ಅಧ್ಯಯನಗಳು ವ್ಯಾಪಕವಾಗಿಯೇ ಚಾಲತಿಯಲ್ಲಿದ್ದುವೆಂಬುದನ್ನು ವೇದಾಧ್ಯಯನ–ಸಾಂಸ್ಕೃತಿಕ ಪೌರೋಹಿತ್ಯದಲ್ಲಿ ಪರಿಣಿತರಾದ, ಹರಿಹರಪುರ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾಗಿ ನಿವೃತ್ತಿ ಹೊಂದಿ. ಈಗ ಬೆಂಗಳೂರಿನಲ್ಲಿ ನೆಲಸಿ ಪೌರೋಹಿತ್ಯ ಮುಂದುವರಿಸುತ್ತಿರುವ ವೇ.ಬ್ರಂ. ಶ್ರೀ ಎಸ್.ವಿ. ಅಡಿಗರು ಈ ಲೇಖನದಲ್ಲಿ ಸ್ಪಷ್ಟವಾಗಿ ಪ್ರತಿಪಾದಿಸಿದ್ದಾರೆ. ಕಳೆದ ಜೂನ್ ಸಂಚಿಕೆಯಲ್ಲಿ ಶ್ರೀ ಹೊರಂಟೂರು ನಾಗಣ್ಣ (ನಾಗರಾಜು)ರವರ ನೀವು ಕೇಳಿದಿರಿ? ವಿಭಾಗದಲ್ಲಿ ಪ್ರಕಟವಾದ ಸಂದೇಹಗಳಿಗೆ (ಸೀತಾದೇವಿಯ ಸಂಧ್ಯಾವಂದನೆ ವಿಚಾರ) ಈ ಲೇಖನದಲ್ಲಿ ಸಮರ್ಪಕವಾದ ಸಮಾಧಾನವೂ ಇದೆ.

**–ಸಂಪಾದಕ ಸ್ವಯಂ ಪ್ರಕಾಶ**

★★★★★★

ಸಾಮಾನ್ಯ ಗೋಷ್ಠಿಯೊಂದರಲ್ಲಿ ಅಪ್ರಾಸಂಗಿಕವಾಗಿ ಪ್ರಸ್ತಾವಿತವಾದ "ಸ್ತ್ರೀಯರು ವೇದಾಧ್ಯಯನ್ನಕ್ಕೆ ಅನಧಿಕಾರಿಗಳೇ?" ಎಂಬ ಜಿಜ್ಞಾಸೆಯನ್ನು ಕುರಿತು ಒಂದು ಚಿಂತನೆ.

ಸ್ರೀ ಮತ್ತು ಪುರುಷ ಮಾನವನ ಬದುಕಿನ ಬಂಡಿಯ ಎರಡು ಗಾಲಿಗಳು. ಇವುಗಳಲ್ಲಿ ಒಂದು ಗಾಲಿ ಏರುಪೇರಾದರೂ ಬದುಕು ಬರಡಾಗುತ್ತದೆ. ಆದರೆ ಭಾರತದ ಮಹಾನ್ ಚಿಂತಕರು. ಸಾಹಿತಿಗಳು ಮತ್ತು ಪ್ರಾಚೀನ ದಾರ್ಶನಿಕರು ವೈದಿಕ ಕಾಲದಿಂದಲೂ ಮಹಿಳೆಗೆ ಪ್ರಥಮ ಪ್ರಾಶಸ್ತ್ಯ ನೀಡುತ್ತಾ ಬಂದಿದ್ದಾರೆ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣವಾದುದು "ಆದಿಶಕ್ತಿ", ತೈತ್ತರೀಯ ಉಪನಿಷತ್ತಿನ "ಮಾತೃ ದೇವೋಭವ" ಎಂಬ ಮಂತ್ರ ತಾಯಿಯನ್ನು ಎಲ್ಲರಿಗಿಂತ ಮೊದಲು ಗೌರವಿಸುವಂತೆ ಹೇಳುತ್ತದೆ. ನಮ್ಮನ್ನು ಪೋಷಿಸುವ ನೆಲ ನಮಗೆ "**ಮಾತೃಭೂಮಿ**" "**ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ**" ಎಂಬುದೂ, ನಾರಿಯರಿಗೆ ಗೌರವ ಸಲ್ಲದ ಎಲ್ಲ ಕಾರ್ಯಗಳೂ ವಿಫಲ ಎಂಬುದೂ ಮನುಸ್ಮೃತಿಯ ವಚನ. ಆದರೆ ವ್ಯಾವಹಾರಿಕವಾಗಿ ಈ ಉಕ್ತಿಗಳು ತಮ್ಮ



ಮಹತ್ವವನ್ನು ಕಳೆದುಕೊಳ್ಳುತ್ತಿವೆ. ಅಲ್ಲದೇ ಕೆಲವು ವಿಚಾರಗಳಲ್ಲಿ ಪ್ರಾಚೀನ ಕಾಲದಿಂದಲೂ ಸ್ತ್ರೀ–ಪುರುಷ ತಾರತಮ್ಯ ಉಳಿದುಕೊಂಡೇ ಬಂದಿದೆ.

ಸ್ತ್ರೀಯರಲ್ಲಿ ಬ್ರಹ್ಮವಾದಿನಿಯರು ಮತ್ತು ಸದ್ಯೋವಧುಗಳೆಂದು ಎರಡು ವರ್ಗ. "**ದ್ವಿವಿಧಾಃ ಸ್ತ್ರೀಯಃ ಬ್ರಹ್ಮವಾದಿನ್ಯಃ ಸದ್ಯೋವಧ್ವಶ್ಚ**" ತತ್ರ ಬ್ರಹ್ಮವಾದಿನೀನಾಂ ಉಪನಯನಂ ಅಗ್ನೀಂಧನಂ, ಸ್ವಗೃಹೇ ಭೈಕ್ಷ್ಯಚರ್ಯ ಇತಿ"

**–ಹಾರೀತವಚನ**

ಲೋಪಾಮುದ್ರಾ ಸುಲಭಾ, ಮೈತ್ರೇಯೀ, ಗಾರ್ಗಿ, ಅರುಂಧತಿ, ಆತ್ರೇಯೀ, ಅನಸೂಯಾ, ಅಪಾಲಾ, ಮೊದಲಾದವರು ಬ್ರಹ್ಮವಾದಿನಿಯರು. ಇವರು ಪುರುಷರಿಗೆ ಸರಿಸಾಟಿಯಾಗಿ ವಿದ್ವದ್ಗೋಷ್ಠಿಯಲ್ಲಿ ವಾದಿಸುತ್ತಿದ್ದರೆಂಬ ಬಗೆಗೆ ಉಲ್ಲೇಖವಿದೆ. ಇಂತಹ ಬ್ರಹ್ಮವಾದಿನಿಯರಿಗೆ ಉಪನಯನ ವೇದಾಧ್ಯಯನ ಮತ್ತು ಮನೆಯಲ್ಲಿ ಭೈಕ್ಷ್ಯಚರ್ಯೆ ವಿಹಿತವಾಗಿದೆ. ಪುರುಷ ವಟುಗಳು ಮಾತ್ರ ದಂಡಧಿಕಾರಿಗಳಾಗಿ ಸಾಯಂಪ್ರಾತಃ ಭಿಕ್ಷಾಟನ ಮಾಡಿ ಗುರುವಿಗೆ ನಿವೇದಿಸಬೇಕು. ಗುರು ಎಲ್ಲರಿಗೂ ಹಂಚಬೇಕು. ಈ ಭಿಕ್ಷಾನ್ನಕ್ಕೆ ಅಪಾವಿತ್ರ್ಯ ಮೊದಲಾದ ದೋಷಗಳ ಸೋಂಕಿಲ್ಲ.

ಉಪನಯನ ಸಂಸ್ಕಾರ ವೇದಾಧ್ಯಯನಕ್ಕೆ ರಹದಾರಿಯಿಂದ್ದಂತೆ.

**ಪುರಾಕಲ್ಪೇಷು ನಾರೀಣಾಂ ಮೌಂಜೀಬಂಧನಮಿಷ್ಯತೇ ॥**
**ಅಧ್ಯಾಪನಂ ಚ ವೇದನಾಂ ಸಾವಿತ್ರೀ ವಾಚನಂ ತಥಾ ॥**
**ಪಿತಾ ಪಿತೃವ್ಯೋ ಭ್ರಾತಾ ವಾ ನೈನಾಮಧ್ಯಾಪಯೇತ್ ಪರಃ ॥**

ಯಮಸ್ಮೃತಿಯ ಮೇಲಿನ ಉಕ್ತಿಯಂತೆ ಮಹಿಳೆಗೆ ಉಪನಯನ, ವೇದಾಧ್ಯಯನ, ಅಧ್ಯಾಪನ, ಹಾಗೂ ಗಾಯತ್ರೀ ಮಂತ್ರೋಪದೇಶಕ್ಕೆ ಅರ್ಹತೆಯಿತ್ತೆಂಬುದು ಸ್ಪಷ್ಟವಾಗುತ್ತದೆ. ಅದರೆ ಈ ಅಧ್ಯಯನವನ್ನು ಮನೆಯಲ್ಲಿ ತಂದೆ, ಚಿಕ್ಕಪ್ಪ ಅಥವಾ ಸಹೋದರ (ಅಣ್ಣ) ಮಾತ್ರವೇ ಮಾಡಿಸಬೇಕೆ ಹೊರತು ಗುರುಕುಲದ ಸಹ ಶಿಕ್ಷಣದಲ್ಲಿ ಇವರಿಗೆ ಅಧ್ಯಯನಕ್ಕೆ ಅವಕಾಶವಿರಲಿಲ್ಲ. ಹೀಗೆ ಬ್ರಹ್ಮೋಪದೇಶ ಪಡೆದ ಯುವತಿ ಪುರುಷ ವಟುವಿನಂತೆ ಗಾಯತ್ರಿ ಪುರಶ್ಚರಣೆ, ತ್ರಿಕಾಲ ಸಂಧ್ಯಾವಂದನಾದಿ ನಿತ್ಯಾನುಷ್ಠಾನ ಮಾಡಲು ಸ್ತ್ರೀ, ಸಹಜ ಪ್ರಕೃತಿಯ ಅಡಚಣೆಗಳ ಹೊರತಾಗಿಯೂ ನಿತ್ಯ ಶುದ್ಧತೆಯನ್ನು ಹೇಗೆ ಸಾಧಿಸುತ್ತಿದ್ದಳೆಂಬುದನ್ನು ಗಮನಿಸಬೇಕಾಗುತ್ತದೆ. (ರಜಸ್ವಲೆಯಾದಾಗ ಪ್ರಾಯಶಃ ಅಶೌಚದ ನಿಯಮಗಳನ್ನು (ಅಂದರೆ "ಗಾಯತ್ರೀಂ ಸಮ್ಯಗುಚ್ಚಾರ್ಯ ಸೂರ್ಯಾಯಾರ್ಘ್ಯಂ ನಿವೇದಯೇತ್"......ಉಪಸ್ಥಾನಂ ನಚೈವಹಿ"–ಇತ್ಯಾದಿ)

ಪಾಲಿಸುತ್ತಿದ್ದಿರಬಹುದೇ? ಶಾಸ್ತ್ರಾಧಾರಬಲ್ಲವರು ವಿವರಿಸಬೇಕು. ಋತುಚಕ್ರದ ನಂತರ ಆಕೆ ಶುದ್ಧಳಾಗುತ್ತಾಳೆಂಬುದಕ್ಕೆ ಆಧಾರವಿದೆ.

**ಸ್ತ್ರೀಯಃ ಪವಿತ್ರ ಮತುಲಂ ನೈತಾ ದುಷ್ಯಂತಿ ಕರ್ಹಿಚಿತ್ ।**
**ಮಾಸಿ ಮಾಸಿ ರಜೋಯಾಸಾಂ ದುಷ್ಕೃತಾನ್ಯಪಕರ್ಷತಿ ॥**

ಅಂದರೆ ಸ್ತ್ರೀಯರು ಎಂದಿಗೂ ದೋಷಿಗಳಾಗಿರುವುದಿಲ್ಲ ಅವರು ಪವಿತ್ರರಾಗಿರುತ್ತಾರೆ. ಮಾಸಿಕ ಋತು ಚಕ್ರವು ಅವರ ದೋಷ (ಮೈಲಿಗೆ) ಯನ್ನು ಪರಿಹರಿಸುತ್ತದೆ.

ವೇದಗಳು ಯಾರೊಬ್ಬರ ವೈಯಕ್ತಿಕ ಆಸ್ತಿಯಲ್ಲ. ಬ್ರಹ್ಮನು ಎಲ್ಲರ ಒಳಿತಿಗಾಗಿ ವೇದಗಳನ್ನು ಪ್ರಕಟಿಸಿದ. ಆದರೆ ಕಾಲ ಕ್ರಮೇಣ ತಮ್ಮ ಅಶುಚಿತ್ವದಿಂದ ವೇದಾಧ್ಯಯನಕ್ಕೆ ಕೆಲವರು ಅನರ್ಹರಾದರೆಂದು ಒಂದು ಪ್ರಾಚೀನ ಸೂಕ್ತಿ ಹೇಳುತ್ತದೆ.

**ಇತ್ಯೇತೈಃ ಕರ್ಮಭಿರ್ವ್ಯಸ್ತಾಃ ದ್ವಿಜಾಃ ವರ್ಣಾಂತರಂ ಗತಾಃ ।**
**ಧರ್ಮೋಯಜ್ಞಕ್ರಿಯಾ ತೇಷಾಂ ನಿತ್ಯಂ ನ ಪ್ರತಿಷಿಧ್ಯತೇ ॥**
**ಇತ್ಯೇತೇ ಚತುರೋವರ್ಣಾಃ ಯೇಷಾಂ ಬ್ರಾಹ್ಮೀ ಸರಸ್ವತೀ ।**
**ವಿಹಿತಾ ಬ್ರಹ್ಮಣಾ ಪೂರ್ವಂ ಲೋಭಾತ್ವ ಜ್ಞಾನತಾಂ ಗತಾಃ ॥**

ಅವರವರ ಕರ್ಮಾನುಗುಣವಾಗಿ ಬ್ರಾಹ್ಮಣ್ಯದಿಂದ ಪ್ರತ್ಯೇಕಿಸಲ್ಪಟ್ಟ ಬ್ರಾಹ್ಮಣರೇ ಕ್ಷತ್ರೀಯ ವೈಶ್ಯ ಮೊದಲಾದ ವರ್ಣಾಂತರಗಳನ್ನು ಹೊಂದಿದರು. "ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣ ಕರ್ಮ ವಿಭಾಗಶಃ" ಎಂಬ ಗೀತಾಚಾರ್ಯರ ಉಪದೇಶವೂ ಇದನ್ನು ಸಮರ್ಥಿಸುತ್ತದೆ. ಅದರೆ ಇವರೆಲ್ಲರಿಗೂ ಧರ್ಮಾನುಷ್ಠಾನವಾಗಲೀ, ಯಜ್ಞ ಕ್ರಿಯೆಗಳಾಗಲೀ ನಿಷೇಧಿಸಲಟ್ಟಿಲ್ಲ. ಕರ್ಮಾನುಗುಣವಾಗಿ ವಿಭಾಗಿಸಲ್ಪಟ್ಟ ನಾಲ್ಕೂ ವರ್ಣದವರಿಗಾಗಿಯೂ ಬ್ರಹ್ಮನು ವೇದವಾಣಿಯನ್ನು ಪ್ರಕಟಿಸಿದನು. ಅದರೆ ಬ್ರಾಹ್ಮಣ ರಲ್ಲದವರ ಲೋಭ ಮತ್ತು ಅಜ್ಞಾನವಶದಿಂದಾಗಿ ಅವರು ವೇದಾಧ್ಯಯನಕ್ಕೆ ಅನರ್ಹರಾದರು.

ಉಪನಯನ, ವಿವಾಹ ಮೊದಲಾದ ಮಂಗಲ ಕಾರ್ಯಗಳಲ್ಲಿ ಸುವಾಸಿನಿಯರು ಉಪವೀತದಂತೆ ಉತ್ತರೀಯವನ್ನು ಧರಿಸುವ ಸಂಪ್ರದಾಯ ಅನೇಕರಲ್ಲಿದೆ ಅಂತೆಯೇ ಕನ್ಯಾದಾನ ಮಾಡುವ ಮೊದಲು ವಧುವಿಗೆ ಯಜ್ಞೋಪವಿತದಂತೆ ಅಭಿಮಂತ್ರಿತವಾದ ಉತ್ತರೀಯವನ್ನು ಧಾರಣೆ ಮಾಡಿಸುವ ಪದ್ಧತಿಯೂ ಇದೆ. ಮಹಿಳೆಗೆ ಉಪನಯನ ಸಂಸ್ಕಾರ ವಿಚ್ಛಿತ್ತಿಯಾಗಬಾರದೆಂಬುದನ್ನು ಇದು ಸಂಕೇತಿಸುತ್ತದೆ. ವೇದಾಧ್ಯಯನಕ್ಕೆ ಅರ್ಹರನ್ನಾಗಿಸುವುದೇ ಉಪನಯನದ ಮೂಲ ಉದ್ದೇಶವಷ್ಟೇ. ಪ್ರಾಚೀನ ಕಾಲದಲ್ಲಿ ಹುಡುಗನಿಗೆ ಉಪನಯನ ಮತ್ತು ಹುಡುಗಿಗೆ ಮದುವೆ–ಎರಡಕ್ಕೂ ಎಂಟನೇ ವಯಸ್ಸನ್ನು ಹೇಳಲಾಗಿದೆ. (**ಅಷ್ಟವರ್ಷೇ ಬ್ರಾಹ್ಮಣ ಮುಪನಯೇತ ॥ ಅಷ್ಟಾವರ್ಷಾ ಭವೇತ್ಕನ್ಯಾ ॥ ವಧುವಿನ ವಯಸ್ಸು ಉಪನಯನದ ವಟುವಿನ ವಯಸ್ಸು – ಎಂಟು ವರ್ಷಗಳು**)

ಮಹಿಳೆ ಮಂತ್ರಗಳನ್ನು ಉಚ್ಚರಿಸುವ ಬಗ್ಗೆ ಪುರಾಣ ಧರ್ಮಶಾಸ್ತ್ರಗಳಲ್ಲಿ ಉಲ್ಲೇಖವಿದೆ.

**ಯಜ್ಞೇಷು ಮಂತ್ರವತ್ ಕರ್ಮ ಪತ್ನೀ ಕುರ್ಯಾತ್ ಯಥಾ ನೃಪ ।**
**ತಥೌರ್ಧ್ವದೈಹಿಕಂ ಕರ್ಮ ಕುರ್ಯಾತ್ ಸಾಧರ್ಮ ಸಂಸ್ಕೃತಾ ॥**
**(ಸ್ಕಂದ ಪುರಾಣ)**



**ಪತ್ನ್ಯಾ ಏವ ಶಕ್ತೌ ಸರ್ವಂ ಸಮಂತ್ರಂರ್ಣಚೌರ್ಧ್ವದೇಹಿಕಂ ॥**
**(ನಿರ್ಣಾಯ ಸಿಂಧು ವ್ಯಾಖ್ಯಾನ)**

ಯಜ್ಞಗಳಲ್ಲಿ ಹೇಗೋ ಹಾಗೆ ಪತ್ನಿ ಸಮಂತ್ರಕವಾಗಿ ಔರ್ಧ್ವದೇಹಿಕ ಕ್ರಿಯೆಯನ್ನು (ಪುತ್ರನಿಲ್ಲದಾಗ) ಮಾಡಬೇಕೆಂದು ಇದರ ಅರ್ಥ. ಯಾಗಾದಿಗಳ ಅನುಷ್ಠಾನಗಳಲ್ಲಿ ಪತಿಯಂತೆ ಪತ್ನಿಯೂ ವೇದ ಮಂತ್ರಗಳನ್ನು ಉಚ್ಚರಿಸಬೇಕು. ಅಂದರೆ ಅಧ್ಯಯನ ಮಾಡಿರಬೇಕು. ಅಧ್ಯಯನ ಮಾಡಿದ ಮೇಲೆ ಆಧ್ಯಾಪನ, ಯಜನ–ಯಾಜನ, ದಾನ ಪ್ರತಿಗ್ರಹವೆಂಬ ಷಟ್ಕರ್ಮದಲ್ಲಿ ಸ್ವತಂತ್ರವಾಗಿ ಭಾಗವಹಿಸುವುದರಲ್ಲಿ ತಪ್ಪೇನು? ಎಂಬ ಪ್ರಶ್ನೆ ಉದ್ಭವಿಸುವುದು ಸಹಜ (ಅಪ್ರಾಸಂಗಿಕವೆನಿಸಬಹುದಾದರೂ ಉಪಯುಕ್ತ ಮಾಹಿತಿಯೆನಿಸುವ ಎರಡು ಉಕ್ತಿಗಳನ್ನು ಉದಾಹರಿಸುತ್ತೇನೆ). ವೇದ ವೇದಾಂಗ ಪಾರಂಗತನಾದ ವಿದ್ವಾಂಸನೇ ಯಜ್ಞದಲ್ಲಿ ಹೋತೃವಾಗಿರಬೇಕು. ಕ್ಷತ್ರಿಯನು ಬಾಹುವೀರ್ಯದಿಂದ, ವೈಶ್ಯ, ಶೂದ್ರರು ಧನ ಸಂಪತ್ತಿನಿಂದ ವಿಪತ್ತುಗಳನ್ನು ಪರಿಹರಿಸಿಕೊಳ್ಳುತ್ತಾರೆ ಆದರೆ ಬ್ರಾಹ್ಮಣರು ಮಾತ್ರ ಮಂತ್ರಹೋಮಗಳಿಂದಲೇ ವಿಪತ್ತನ್ನು ಪರಿಹರಿಸಿಕೊಳ್ಳುತ್ತಾರೆ ಎಂಬ ಸಂದರ್ಭದಲ್ಲಿ ಹೀಗೆ ಹೇಳಲಾಗಿದೆ–

**"ನೈವಕನ್ಯಾ ನ ಯುವತಿಃ ನ ಮಂತ್ರಜ್ಞೋ ನ ಬಾಲಿಶಃ ।**
**ಪರಿವೇಷ್ಟಾಗ್ನಿ ಹೋತ್ರಸ್ಯ ಭವೇನ್ನಾ ಸಂಸ್ಕೃತಸ್ತಥಾ ॥**

ಕನ್ಯಾ (ಮದುವೆಯಾಗದವಳು), ಯುವತಿ (ತರುಣಿ, ಹರೆಯದವಳು ಎಳೆಪ್ರಾಯದ ಹುಡುಗಿ) ಅಮಂತ್ರಜ್ಞಃ, ಪರಿವೇಷ್ಟಾ, ಅಸಂಸ್ಕೃತ ಇವರು ಯಜ್ಞ ಸಂಬಂಧಿ ಹೋಮ ಗಳಲ್ಲಿ ಸಲ್ಲುವುದಿಲ್ಲ– ಎಂಬ ಶಾಸ್ತ್ರ ನಿಷೇಧವನ್ನು ಸ್ಮಾರ್ತಾಗ್ನಿ ಹೋತ್ರದಲ್ಲಿ ಅನ್ವಯಿಸುವುದಿಲ್ಲವೆಂದು ಆಶ್ವಲಾಯನರು ಸ್ಪಷ್ಟೀಕರಿಸುತ್ತಾರೆ" ಸ್ವಯಂ ಪತ್ನ್ಯಪಿ ವಾ ಪುತ್ರಃ ಆ ಕುಮಾರ್ಯಂತೇವಾಸಿ ವಾ" ಅಹಿತಾಗ್ನಿಯು ಪ್ರವಾಸದಲ್ಲಿರುವಾಗ ದ್ವಿಜಪತ್ನಿ ಪುತ್ರ, ಪುತ್ರಿ (ಕುಮಾರಿ), ಶಿಷ್ಯ–ಅಗ್ನಿಹೋತ್ರವನ್ನು ಮಾಡಬಹುದು. ಅಧ್ಯಯನ–ಅಧ್ಯಾಪನ, ಯಜನ– ಈ ಮೂರು ಸನ್ನಿವೇಶಗಳಲ್ಲಿ ಮಹಿಳೆಯ ವೇದಾಧ್ಯಯನದ ಸಾರ್ಥಕತೆಯ ಬಗ್ಗೆ ಯಾವುದೇ ನಿರ್ಬಂಧಗಳಿಲ್ಲ. ಅದರೆ ಯಾಜನ, ದಾನ–ಪ್ರತಿಗ್ರಹಗಳಲ್ಲಿ ಮಹಿಳೆ ಪುರುಷನಿಗೆ ಸರಿಸಮನಾಗಿ ತನ್ನನ್ನು ತೊಡಗಿಸಿಕೊಳ್ಳಲು ಸಾಧ್ಯವಾದೀತೆ? ಸಂಮಂಜಸವೆನಿಸೀತೆ? ಪ್ರತಿಗ್ರಹ ದೋಷಕ್ಕಾಗಿ ನಿಯತವಾದ ಪ್ರಾಯಶ್ಚಿತ್ತಾದಿ ಅನುಷ್ಠಾನ ಮಾಡಬೇಕು. ನಮ್ಮ ಪಾರಂಪರಿಕ ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆಯಲ್ಲಿ ಗೃಹಸ್ಥನ ಅರ್ಧಾಂಗಿಯಾಗಿ ತನ್ನ ಕರ್ತವ್ಯ ನಿರ್ವಹಣೆ ಯೊಂದಿಗೆ ಸ್ತ್ರೀ ಸ್ವತಂತ್ರವಾಗಿ ಯಾಜನ ಮತ್ತಿತ್ತರ ಮುಹೂರ್ತ ಸಾಧನೆ ಯಂತಹ ಷೋಡಶ ಕರ್ಮಗಳಲ್ಲಿ ಭಾಗವಹಿಸಲು ಸಮರ್ಥಳಾಗುವಳೇ? ಕರ್ಮಾಂಗಕ್ಕೆ ಬೇಕಾಗುವ ಎಲ್ಲಾ ಮಂತ್ರಗಳನ್ನೂ ಎಲ್ಲಾ ಸ್ತ್ರೀಯರೂ ವ್ಯಾವಹಾರಿಕವಾಗಿ ಪ್ರಯೋಗಿಸಲು ಸಮರ್ಥರಾಗುತ್ತಾರೆಂದು ನಿರೀಕ್ಷಸಲಾಗದು. ಏಕೆಂದರೆ ಸ್ತ್ರೀಯರ ಅಂಗ ರಚನೆ ಮತ್ತು (ರಜೋದರ್ಶನ, ಗರ್ಭ ಧಾರಣೆ) ಅವರ ಬದುಕಿನ ಶೈಲಿ ಪುರುಷರಿಗಿಂತ

ಸಂಪೂರ್ಣ ಭಿನ್ನ. ಸ್ತ್ರೀಯರು ತಮ್ಮ ಕೋಮಲ ಕಂಠದಿಂದ ಕೆಲವು ಕರ್ಕಶ ವರ್ಣಗಳನ್ನು ಸಸ್ವರವಾಗಿಯೂ, ಸ್ಪಷ್ಟವಾಗಿಯೂ ಉಚ್ಚರಿಸಲು ಕಷ್ಟಪಡ ಬೇಕಾಗುತ್ತದೆಂದು ಹೇಳುವು ದುಂಟು.

ಜಗತ್ತಿನ ಅತ್ಯುತ್ತಮ ಸಾಹಿತ್ಯವೆಂಬ ದೃಷ್ಟಿಯಿಂದ ವೇದಗಳನ್ನು ಯಾರೂ ಅಭ್ಯಾಸ ಮಾಡಬಹುದು. ಆದರೆ ವೇದಗಳ ಅಧ್ಯಯನಕ್ಕೆ ತನ್ನದೇ ಆದ ಪರಿಭಾಷೆಯಿದೆ. ಉದಾತ್ತ ಅನುದಾತ್ತ ಸ್ವರಿತಗಳ ಉಚ್ಚಾರಣೆಯಲ್ಲಿ ಅತ್ಯಲ್ಪ ಸ್ಖಾಲಿತ್ಯವುಂಟಾದರೂ ಅಥವಾ ಅನಧಿಕಾರಿಯು ಜಪಿಸಿದರೂ ಮಹಾನ್ ಅನರ್ಥವೇ ಸಂಭವಿಸುತ್ತದೆ (ಯೆಂಬುದಕ್ಕೆ) ವೃತ್ರಾಸುರನ ಕಥೆಯನ್ನು ಉದಾಹರಿಸುತ್ತಾರೆ ಮತ್ತು ಅಂತಹ ಸ್ಖಾಲಿತ್ಯ ಪೂರ್ಣ ಉಚ್ಚಾರಣೆಯಿಂದ ವಿವಕ್ಷಿತವಾದ ಪ್ರಯೋಜನವೂ ದೊರಕುವುದಿಲ್ಲ. ಪರಿಶುದ್ಧವಾದ ಹಾಲನ್ನು ಕೊಳಕು ಪಾತ್ರೆಯಲ್ಲಿ ಹಾಕಿದಂತೆ ಅತಿ ಪವಿತ್ರವಾದ ವೇದ ಮಂತ್ರಗಳನ್ನು ಅನಧಿಕಾರಿಗಳು ಉಚ್ಚರಿಸಿದರೆ ಅದು ತನ್ನ ಪಾವಿತ್ರ್ಯವನ್ನು ಕಳೆದುಕೊಳ್ಳುತ್ತದೆ. ಮಂತ್ರೋಚ್ಚಾರಣೆಯ ಉದ್ದೇಶ ಫಲಿಸುವುದಿಲ್ಲ ಮತ್ತು ಕೊಳಕು ಪಾತ್ರೆಯ ಹಾಲನ್ನು ಸೇವಿಸಿದಂತೆ ಕೆಡುಕೂ ಉಂಟಾಗುತ್ತದೆ.

ಅನಂತವಾದ ವೇದಗಳನ್ನು ಅರ್ಥೈಸುವುದು ಕಷ್ಟ ಸಾಧ್ಯವೆಂದರಿತ ವೇದವ್ಯಾಸರು ಅವುಗಳ ತತ್ವಗಳನ್ನು ಪುರಾಣಗಳ ದೃಷ್ಟಾಂತಗಳ ಮೂಲಕ ವಿಶದೀಕರಿಸಿದರೆಂದು ಹೇಳಲಾಗುತ್ತದೆ. ವೇದ ವಿಹಿತವಾದ ಕರ್ಮಾನುಷ್ಠಾನ– ಆಚಾರಗಳಿಗೆ ಮನು ಪರಾಶರ ಮೊದಲದ ಸ್ಮೃತಿಕಾರರು ಸ್ಮೃತಿ ಗ್ರಂಥಗಳ ಮೂಲಕ ಚೌಕಟ್ಟನ್ನು ನಿರ್ಮಿಸಿದರು. ಜಾಗತಿಕ ಮಟ್ಟದಲ್ಲಿ ಅನನ್ಯವೆಂದು ಭಾವಿಸಲ್ಪಡುವ ರಾಮಾಯಣ ಮಹಾಭಾರತ ಮೊದಲಾದ ಇತಿಹಾಸ ಗ್ರಂಥಗಳೂ ಸ್ಮೃತ್ಯುಕ್ತವಾದ ಆಚಾರ ವಿಚಾರಗಳನ್ನು ನಂಬಿ, ನಡೆಯುವವರಿಗೆ ಸನ್ನಡತೆ, ಸದಾಚಾರ ಸದಸದ್ವಿವೇಚನೆಗಳಿಗೆ ಮಾರ್ಗದರ್ಶಕಗಳಾದುವು. ಅದುದರಿಂದ ನಮ್ಮ ಪರಂಪರೆಯಲ್ಲಿ ನಂಬಿಕೆ, ಗೌರವಗಳನ್ನು ಗುರುತಿಸುವ ಸಜ್ಜನರು ಈ ಗ್ರಂಥಗಳ ಪ್ರಾಮಾಣಿಕತೆಯ ಬಗ್ಗೆ ಸಂದೇಹಿಸುವುದಿಲ್ಲ.

ಮಹಿಳೆಯರು ವೇದಾಧ್ಯಯನ ಮಾಡುತ್ತಿದ್ದರೆಂಬುದಕ್ಕೆ ವಾಲ್ಮೀಕಿ ರಾಮಾಯಣದ ಎರಡು ಶ್ಲೋಕಗಳನ್ನು ನಾನು ಗುರುತಿಸಿದ್ದೇನೆ. (ನನ್ನ ಸೀಮಿತ ಜ್ಞಾನದ ಪರಧಿಯಲ್ಲಿ ಅದರಲ್ಲಿನ ವಿಷಯಗಳ ಪ್ರಮಾಣಿಕತೆಯನ್ನು ತಾತ್ತ್ವಿಕವಾಗಿಯೂ ಒಪ್ಪಿಕೊಂಡಿದ್ದೇನೆ).

**1. ತತಃ ಸ್ವಸ್ತ್ಯಯನಂ ಕೃತ್ವಾ ಮಂತ್ರವತ್ ವಿಜಯೈಷಿಣೇ ।**
**ಅಂತಃಪುರಂ ಸಹಸ್ತ್ರೀಭಿಃ ಪ್ರವಿಷ್ಟಾ ಶೋಕ ಮೋಹಿತಾ ॥**

**–ಕಿಷ್ಕಂದಾ ಕಾಂಡ 16–12**

**2. ಸಂಧ್ಯಾಕಾಲಮನಾಃ ಶ್ಯಾಮಾ ಧ್ರುವಮೇಷ್ಯತಿ ಜಾನಕೀ ।**
**ನದೀಂ ಚೇಮಾಂ ಶುಭಜಲಾಂ ಸಂಧ್ಯಾರ್ಥೇ ವರವರ್ಣಿನೀ ॥**

**–ಸುಂದರ ಕಾಂಡ 14–18**



1) ವಾಲಿ ಸುಗ್ರೀವನೊಡನೆ ಯುದ್ಧಕ್ಕೆ ಹೊರಡುವ ಸಂಧರ್ಭ. "ಮಂತ್ರವಿದಳಾದ ತಾರೆಯು ಪತಿಗೆ ವಿಜಯವನ್ನು ಆಶಿಸಿ ಸ್ವಸ್ತಿ ವಾಚನವನ್ನು ಮಾಡಿ ಕಳುಹಿಸಿಕೊಟ್ಟು ಶೋಕದಿಂದ ಭ್ರಾಂತಳಾಗಿ ಸಖಿಯರೊಡನೆ ಅಂತಃಪುರವನ್ನು ಸೇರಿದಳು" ಎಂದು ಈ ಶ್ಲೋಕವನ್ನು ಭಾರತದರ್ಶನ ಪ್ರಕಾಶನದವರು ಅರ್ಥೈಸಿದ್ದಾರೆ.

'ಮಂತ್ರ' ಶಬ್ದದ ಮೂಲ ಧಾತು ಪಾಣಿನಿಯ "ಮನುಅವಭೊಧನೇ" (ಸೂತ್ರ 1495) ಅಂದರೆ ಅರಿವು. ಜ್ಞಾನ ವೇದಗಳೇ ಜ್ಞಾನ ರಾಶಿ. ಮನನಶೀಲರಾದ ಮಹರ್ಷಿಗಳ ನಿರಂತರ ಧ್ಯಾನಕ್ಕೆ ಸ್ಫುರಿಸಿ–ಗೋಚರಿಸಿದವೇ ವೇದ ಮಂತ್ರಗಳು. (ಋಷಯೋ ಮಂತ್ರದ್ರಷ್ಟಾರಃ) ಸ್ವರ–ಅನುದಾತ್ತಾದಿಗಳಿಂದ ಕೂಡಿದ ಉಪನಿಷದ್ವಾಕ್ಯಗಳು, ವೇದ ಗಳಲ್ಲಿನ ಛಂದೋಬದ್ಧವಾದ ರಚನಾ ಭಾಗಗಳಿಗೆ ಮಾತ್ರವೇ ಮಂತ್ರವೆಂದು ರೂಢಿಯಲ್ಲಿ ಅರ್ಥೈಸಲಾಗುತ್ತದೆ.

ತಾರೆ ವಾನರ ಸ್ತ್ರೀ ಆಗಿದ್ದರೂ "ಮಂಗನಿಂದ ಮಾನವ" ಎಂಬ ಡಾರ್ವಿನ್‌ನ ವಿಕಾಸವಾದದ ತತ್ತ್ವದಂತೆ ಆಕೆಯಲ್ಲಿ ಮಾನವ ಸಹಜವಾದ ಗುಣ ಧರ್ಮವನ್ನು ಆರೋಪಿಸಿ ವೇದ ಮಂತ್ರಗಳನ್ನು ಅಧ್ಯಯನ ಮಾಡಿದ್ದಳೆಂದು ಅರ್ಥೈಸಿದರೆ ಆಭಾಸ ವಾಗಲಾರದು. ಮಹರ್ಷಿ ವಾಲ್ಮೀಕಿಗಳ ಪದ ಪ್ರಯೋಗದ ಔಚಿತ್ಯವನ್ನು ಸಂದೇಹಿಸುವುದು. ಅನುಚಿತವಾದೀತು. ಅದ್ದರಿಂದ ಭಾರತ ದರ್ಶನ ಪ್ರಕಾಶನದವರ ಅರ್ಥವಿವರಣೆ ಪ್ರಾಮಾಣಿಕ.

"ಸಂಧ್ಯಾಕಾಲದಲ್ಲಿ ಮಾಡಬೇಕಾದ ಕರ್ಮಗಳಲ್ಲಿ ಸೀತಾದೇವಿಯು ನಿಯತವಾದ ಮನಸ್ಸುಳ್ಳವಳು. ಯೌವನದ ಮಧ್ಯ ಕಾಲದಲ್ಲಿರುವ ವರವರ್ಣಿನಿಯಾದ ಜಾನಕಿಯು ಶುಭಕರವಾದ ನೀರಿನಿಂದ ಕೂಡಿರುವ ಈ ಸರೋವರದ ಬಳಿಗೆ ಸಂಧ್ಯಾವಂದನಾರ್ಥ ವಾಗಿ ಬಂದೇ ಬರುವಳು"

**–ಸುಂದರ ಕಾಂಡ ವ್ಯಾಖ್ಯಾನ –ಪುಟ 2158.**

ಇದು ಸೀತೆಯನ್ನು ಹುಡುಕುವ ಆಂಜನೇಯನ ಉದ್ಗಾರ. ಸೀತೆ ಅಯೋನಿಜೆ. ಜನಕನ ಸಾಕು ಮಗಳು. ಜನಕ ಮಹಾ ವಿದ್ವಾಂಸನಾದ ರಾಜರ್ಷಿ, ಕ್ಷತ್ರಿಯರಿಗೆ ವೇದೋಕ್ತವಾದ ಸಂಸ್ಕಾರಗಳಿಗೆ ಅರ್ಹತೆಯಿದೆ. ಇಂತಹ ಪರಿಸರದಲ್ಲಿ ಬೆಳೆದ ಸೀತೆ ವೇದಾಧ್ಯಯನ ಮಾಡಿದ್ದಳೆಂದೂ, ವೈದಿಕ ಸಂಧ್ಯಾವಂದನೆ ಮಾಡುತ್ತಿದ್ದಳೆಂದೂ ಅರ್ಥೈಸಿದರೆ ತಪ್ಪಾಗಲಾರದೆಂದು ನನ್ನ ಅನಿಸಿಕೆ. ಮಾರ್ಜನೆ (ಮಂತ್ರಸ್ನಾನ), ಅಘಮರ್ಷಣ, ಅರ್ಘ್ಯಪ್ರಧಾನ. ಗಾಯತ್ರಿ ಜಪ, ಉಪಸ್ಥಾನ–ಇವು ವೈದಿಕ ಸಂಧ್ಯಾ ವಂದನೆಯ ಅಂಗಗಳೆಂದು ರೂಡಿಯಲ್ಲಿ ಪ್ರಸಿದ್ಧ. ಅದ್ದರಿಂದ ಸೀತೆ ವೇದಾಧ್ಯಯನ ಮಾಡಿದ್ದಳೆಂಬುದನ್ನು ಅನುಮಾನಿಸಲಾಗದು.

ಪ್ರಾಚೀನ ಗ್ರಂಥಗಳ ಆಧಾರದ ಮೇರೆಗೆ (ನಂಬುವುದಾದರೆ!) ಹಿಂದೆ ಸ್ತ್ರೀಯರಿಗೆ ವೇದಾಧ್ಯಯನಕ್ಕೆ ಅರ್ಹತೆಯಿತ್ತು. ಆದರೆ ಪುರುಷರಿಗೆ ಸರಿಸಮನಾಗಿ ವೇದ ಮಂತ್ರಗಳ

ಅನುಷ್ಠಾನ, ವಿನಿಯೋಗದ ಬಗ್ಗೆ ಸ್ಪಷ್ಟತೆಯಿಲ್ಲ. ಯುಗ ಧರ್ಮಕ್ಕನುಸಾರವಾಗಿ ಹೊಂದಾಣಿಕೆ, ಸುಧಾರಣೆ ಅಗತ್ಯವೆನಿಸಬಹುದು. ಧಾರ್ಮಿಕ ಮತ್ತು ಸಾಂಸ್ಕೃತಿಕ ಚೌಕಟ್ಟಿನೊಳಗೆ ಹಳೆಯ-ಹೊಸ ಆಚರಣೆಗಳ ಸಮನ್ವಯ ಹೇಗೆಂಬುದನ್ನು ವಿದ್ವಾಂಸರು ಚಿಂತಿಸಬೇಕು.

ವೈದಿಕಯುಗ ಮತ್ತು ಆಧುನಿಕ ಯುಗದ ಮಧ್ಯಕಾಲದಲ್ಲಿ ಪುರುಷ ಪ್ರಧಾನ ಕೌಟುಂಬಿಕ ವ್ಯವಸ್ಥೆ ಕಟ್ಟುನಿಟ್ಟಾಗಿ ಜಾರಿಯಲ್ಲಿತ್ತು. "ನಸ್ತ್ರೀಽಸ್ವಾತಂತ್ರ್ಯಮರ್ಹತಿ" ಎಂಬ ಮನುಸ್ಮೃತಿಯ ವಚನವು ಯಥಾರ್ಥವಾಗಿ ವ್ಯಾಖಾನಿಸಲ್ಪಟ್ಟು ಬಾಲ್ಯ, ಕೌಮಾರ ವಾರ್ಧಕ್ಯದಲ್ಲಿ ಅನುಕ್ರಮವಾಗಿ ತಂದೆ, ಗಂಡ, ಮಕ್ಕಳ ಅಧೀನದಲ್ಲಿದ್ದ ಸ್ತ್ರೀ ಕೇವಲ ಗೃಹಕೃತ್ಯವನ್ನಷ್ಟೇ ನಿರ್ವಹಿಸುವ ಅನಿವಾರ್ಯತೆ ಸೃಷ್ಟಿಯಾಯಿತು. ಗೃಹಕೃತ್ಯದ ಜಂಜಡದ ನಡುವೆ ಧಾರ್ಮಿಕ ಅನುಷ್ಠಾನದಲ್ಲಿ ಸಾರ್ವಜನಿಕಗಳಲ್ಲಿ ಚಟುವಟಿಕೆಗಳಲ್ಲಿ ಸ್ವತಂತ್ರವಾಗಿ ಭಾಗವಿಸಲಾಗದ ಪರಿಸ್ಥಿತಿ ನಿರ್ಮಾಣವಾಯಿತು. ಹಾಗಾಗಿ ವೇದಾಧ್ಯಯನ, ಅಧ್ಯಾಪನಾದಿ ಷಟ್ಕರ್ಮಗಳಲ್ಲಿ ಸ್ವಾಭಾವಿಕವಾಗಿ ಸ್ತ್ರೀ ಅನರ್ಹಳು ಎಂಬ ಭಾವನೆ ಬೆಳೆಯುತ್ತಾ ಬಂತು. ಇಂದು ಪ್ರಾಚೀನ ಆಚಾರ ವಿಚಾರಗಳ ಬಗ್ಗೆ ಸ್ತ್ರೀಯರ ಔದಾಸೀನ್ಯ, ಜತೆಗೆ ಆಧುನಿಕ ತಾಂತ್ರಿಕ ಶಿಕ್ಷಣ ಮತ್ತು ನೌಕರಿಯಲ್ಲಿ ಪುರುಷರೊಂದಿಗೆ ಪೈಪೋಟಿಯಿಂದಾಗಿ ವೇದಾಧ್ಯಯನ ಮತ್ತು ಅದರ ಅನುಷ್ಠಾನದಿಂದ ಅವರು ದೂರವೇ ಉಳಿಯುವಂತಾದುದು ಕಾಲ ಧರ್ಮ.



# ದೇವರು ಮತ್ತು ದೇವಾಲಯ

ದೇವಾಲಯ-ಅದು ಶ್ರದ್ಧಾಕೇಂದ್ರ ಅಲ್ಲಿ ಭಗವಂತನಿದ್ದಾನೆ. ಕಣ್ಣಿಗೆ ಕಾಣದ ಆ ಭಗವಂತ ಯಾರು?

ಅವನಿಗೆ ಅನಂತನಾಮಗಳು ಅವನು ಸಮಸ್ತ ಆಕಾರ ಸ್ವರೂಪ, ಎಲ್ಲಾ ಮಂತ್ರಗಳೂ ಅವನನ್ನೆ ಸ್ತುತಿಸುತ್ತವೆ. ಅವನು ಜಗತ್ತಿನ ಅಧಿಪತಿ. ಅವನನನ್ನು ಯಾರು ಬೇಕಾದರೂ ಎಲ್ಲೂ ಯಾವೂದೇ ರೂಪದಲ್ಲೂ ಪೂಜಿಸಬಹುದು. ಜಗತ್ತಿನ ಸೃಷ್ಟಿ ಸ್ಥಿತಿಲಯ ಗಳನ್ನುಂಟುಮಾಡುವುದು ಅವನ ಲೀಲಾ ವಿನೋದ. ಅವನೇ ನಿರ್ವಹಿಸುವ ಸೃಷ್ಟಿ ಸ್ಥಿತಿಲಯಕಾರ್ಯಗಳಿಗನುಗುಣ ವಾಗಿ ಬ್ರಹ್ಮ-ವಿಷ್ಣು-ಮಹೇಶ್ವರನಾಗಿದ್ದಾನೆ. ಜಗತ್ತನ್ನೂ, ಅದರಲ್ಲಿ ಸಕಲ ಚರಾಚರಗಳನ್ನೂ, ನಮ್ಮನ್ನೂ ಸೃಷ್ಟಿಸಿದ ಆ ಭಗವಂತನನ್ನು ನಾವು ಕೌಟುಂಬಿಕ ಸ್ಥಿತಿಗೆ ಅವಾಹಿಸಿದ್ದೇವೆ. ಅವನಿಗೆ ಹೆಂಡತಿ. ಮಕ್ಕಳು ಸ್ನೇಹಿತರು, ಶತ್ರುಗಳು ಇದ್ದಾರೆ. ಗಣಪತಿ, ಶಾರದೆ, ವಿಷ್ಣು, ಪಾರ್ವತಿ, ಈಶ್ವರ – ಎಲ್ಲವೂ ಅವನೊಬ್ಬನೆ.



ಶಿವರಾಮ ಕಾರಂತರು ಹೇಳುವಂತೆ ದೇವರು ನಮ್ಮನ್ನು ಸೃಷ್ಟಿಸಿದ, ನಾವು ಅನೇಕ ದೇವರನ್ನು ಸೃಷ್ಟಿಸಿದೆವು. ಆದರೆ ಅವನು ಇಂದ್ರೀಯಗೋಚರನಲ್ಲ ವಾಙ್ಮನಸಾತೀತ "God alone knows what he is" (ಜಯದಯಾಳ್ ಗೋಯೆಂಕಾ) ವೇದಗಳಾಗಲೀ, ಭಗವಂತನನ್ನು ಸಾಕ್ಷಾತ್ಕರಿಸಿಕೊಂಡವರೆನಿಸಿದ ಮಹರ್ಷಿಗಳಾಗಲೀ ಅವನನ್ನು ಪೂರ್ತಿ ವರ್ಣಿಸಲು ಸಮರ್ಥರಾಗಲಿಲ್ಲ. ಆದರೂ ದೇವರೊಬ್ಬನಿದ್ದಾನೆ, ಇರಲೇ ಬೇಕು, ಅನುಮಾನವಿಲ್ಲ.

ರೈಲುಗಾಡಿ ಓಡುತ್ತಿರುವುದು ನಮ್ಮ ಸಾಮಾನ್ಯ ಕಣ್ಣಿಗೆ ಕಾಣಿಸುತ್ತದೆ. ಅದು ತಯಾರಾದ ಮತ್ತು ಅಂತಹುದೇ ತಯಾರಾಗುತ್ತಿರುವ ಒಂದು ಕಾರ್ಖಾನೆ-ಇದ್ದೇ ಇದೆ. ಹಾಗೆಯೇ ಅದರ ಕಾರಣ ಕರ್ತರು, ನಿದೇಶಕರು, ಕರ್ಮಚಾರಿಗಳು ಇದ್ದೇ ಇರಬೇಕೆಂದು ನಾವು ನಂಬುತ್ತೇವೆ, ಒಪ್ಪುತ್ತೇವೆ ಆದರೆ ಅಂತಹ ಕಾರ್ಖಾನೆಯಿರುವ ಜಾಗ ಅದರ ಕರ್ಮಚಾರಿಗಳು, ಅದಕ್ಕೆ ಬೇಕಾಗುವ ಮೂಲ ವಸ್ತುಗಳು ಯಾವುವು? ಯಾರು? ಏನು? ಎಷ್ಟು? ಎಲ್ಲಿ? ಎಂಬ ಎಲ್ಲ ಸಂಗತಿಗಳು ವಿವರವಾಗಿ ತಿಳಿದಿರುವ ಸಾಧ್ಯತೆ ಕಡಿಮೆ. ಊಹೆ ಅಥವಾ ಇತರರ ವಿವರಣೆಯಿಂದ ಒಂದು ಅಸ್ಪಷ್ಟ ಚಿತ್ರಣವನ್ನು ಕಲ್ಪಿಸಿಕೊಳ್ಳಬಹುದು. ಅದರೆ ಅದೇ ವಸ್ತು ಸ್ಥಿತಿಯಾಗಿರಬೇಕೆಂದಿಲ್ಲ. ಅಂತಯೇ ಅನಂತ ವಿಶ್ವದ, ಸಕಲಚರಾ ಚರಸೃಷ್ಟಿಯ- ಕಾರಣೀ ಭೂತವಾದ, ಸಾಮಾನ್ಯ ಕಣ್ಣಿಗೆ ಕಾಣದ ಯಾವುದೋ "ಒಂದು" "ಇದೆ" ಯೆಂಬುದನ್ನು ನಾವು ನಂಬಬೇಕು. ಅದೇ ದೇವರು ಒಂದು ಅಗೋಚರ ಶಕ್ತಿ. Eternal Power, Energy. ಜಯದಯಾಳ್ ಗೋಯಂಕಾರವರು ದೇವರನ್ನು ಹೀಗೆ ನಿರೂಪಿಸುತ್ತಾರೆ.

God alone is such in whom all things are everywhere present, and every thing can proceed from Him who can hear all at once, words uttered at all places by every one and who can see everyone all at once

ಈ ಶಕ್ತಿಯ ಕೇಂದ್ರವೇ ದೇವಾಲಯ. ನಿರ್ದಿಷ್ಟವಾದ ಮಂತ್ರಗಳ ಕ್ರಮವರಿತ ಪಠಣದಿಂದ, ದೇವಾಲಯದಲ್ಲಿ ಪ್ರತಿಷ್ಠಾಪಿತವಾದ ವಿಗ್ರಹದಲ್ಲಿ ಇಂತಹ ಶಕ್ತಿಯನ್ನು ಅವಾಹಿಸಲಾಗುತ್ತದೆ. ಮಂತ್ರೋಚ್ಚಾರಣೆಯಿಂದ ಮಾಡುವ ಶಕ್ತಿಯ ಅವಾಹನೆಯನ್ನು ಅವೈಜ್ಞಾನಿಕವೆಂದು ಅಲ್ಲಗಳೆಯುವಂತಿಲ್ಲ. ಪುರುಷಸೂಕ್ತದ ಮೂಲಕ, ಸೌರಶಕ್ತಿಯನ್ನು ಬಳಸಿಕೊಂಡು ಬೃಹತ್ ಪ್ರಮಾಣದಲ್ಲೂ ವಿದ್ಯುತ್ ಉತ್ಪಾದಿಸಬಹುದೆಂದು ಪ್ರಸ್ತುತ ಅಮೇರಿಕಾದಲ್ಲಿ ನೆಲಸಿರುವ ಸತೀಶ್‌ಚಂದ್ರ ಎಂಬ ಭಾರತೀಯ ವಿಜ್ಞಾನಿಯೊಬ್ಬರು ಪ್ರತಿಪಾದಿಸಿದ್ದಾರೆ. ವೇದಾಧ್ಯಯನದ ಅನೇಕ ವಿಸ್ಮಯಗಳ ಬಗ್ಗೆ ಪ್ಯಾರಿಸ್‌ನಲ್ಲಿ 2003 ರಲ್ಲಿ United Nations Educational Scientific and Cultural Organization ಏರ್ಪಡಿಸಿದ ಶೃಂಗ ಸಭೆಯಲ್ಲಿ ಚರ್ಚಿತವಾದ ವರದಿ ದೈನಿಕವೊಂದರಲ್ಲಿ ಪ್ರಕಟವಾಗಿತ್ತು. ಅಂದ ಮೇಲೆ ಸರ್ವವ್ಯಾಪಿಯಾದ ಭಗವಂತನ ಅಗೋಚರ ಶಕ್ತಿಯನ್ನು ಸಸ್ವರ ಮಂತ್ರೋಚ್ಚಾರಣೆ ಮೊದಲಾದ ಶುದ್ಧ ಧಾರ್ಮಿಕ ವಿಧಿಗಳಿಂದ ಒಂದು ವಿಗ್ರಹದಲ್ಲಿ ಕೇಂದ್ರೀಕರಿಸುವ

ಸಾಧ್ಯತೆಯ ಬಗ್ಗೆ ವಿಜ್ಞಾನದ ವಿರೋಧವಿಲ್ಲವೆಂದಾಯಿತು. ಹೀಗೆ ಅವ್ಯಕ್ತ ಶಕ್ತಿಯ ಕೇಂದ್ರವಾದ ದೇವಾಲಯವೊಂದು ನನಗೆ **ಶ್ರದ್ಧಾಕೇಂದ್ರ.**

ಶುಚಿಯಾದ ಪರಿಸರದಲ್ಲಿ ನಿರಂತರ ವೇದಾಧ್ಯಯನ, ಸಾಮೂಹಿಕ ಭಜನೆ, ಗಾಯನ, ಘಂಟಾವಾದನ, ಶಂಖನಾದ, ಇನ್ನಿತರ ವಾದ್ಯಗಳ ಲಯಬುದ್ಧವಾದ ವಾದ ದಿಂದ ಒಂದು ಶಕ್ತಿಯ ತರಂಗ ಆ ವಾತಾವರಣವನ್ನು ಪುಳಕಗೊಳಿಸುತ್ತದೆ. ವೇದಗಳಲ್ಲಿನ ಪ್ರತಿಯೊಂದು ಮಂತ್ರಕ್ಕೆ ಪ್ರತ್ಯೇಕ ಸ್ವರವನ್ನು ಗುರುತಿಸಲಾಗಿದೆ. ಉದಾಹರಣೆ

**"ತದ್ವಿಷ್ಣೋಃ ಪರಮಂ ಪದಂ........ ಚಕ್ಷುರಾತತಮ್"**

**(ಋಗ್ವೇದ 1–2–7–5) – ಈ ಮಂತ್ರದ ಸ್ವರ ಷಡ್ಜ.**

**"ಹಿರಣ್ಯಗರ್ಭಃ ಸಮವರ್ತಾಗ್ರೇ .......... ಹವಿಷಾವಿಧೇಮ"**

**(ಋಗ್ವೇದ 8–7–3–1) – ಈ ಮಂತ್ರದ ಸ್ವರ ಧೈವತ**

ಹೀಗೆ ಎಲ್ಲಾ ಮಂತ್ರಗಳಿಗೂ ಪ್ರತ್ಯೇಕ ಸ್ವರಗಳನ್ನು ಗುರುತಿಸಲಾಗಿದೆ.

ವೈಯುಕ್ತಿಕವಾದ ಅಥವಾ ಸಾಮೂಹಿಕವಾದ ಮಂತ್ರ ಪಠಣದಿಂದುಂಟಾಗುವ ಕಂಪನ (vibration) ದಿಂದ ಆವಿಗ್ರಹದ, ದೇವಾಲಯದ ಶಕ್ತಿಯ ವೃದ್ಧಿಯಾಗುತ್ತದೆ, ಭಗವಂತನ ಸಾನ್ನಿಧ್ಯ ಸ್ಥಿರವಾಗುತ್ತದೆ. ಆದರೆ ಮಂತ್ರ ಪಠನೆಯಿಂದ ಅಪೇಕ್ಷಿತ ಫಲ ಪ್ರಾಪ್ತಿಗೆ ಕೆಲವು ಕಟ್ಟುನಿಟ್ಟಾದ ನಿಯಮಗಳಿವೆ.

**ಮಂತ್ರೋ ಹೀನಃ ಸ್ವರತೋ ವರ್ಣತೋ ವಾ ಮಿಥ್ಯಾ ಪ್ರಯುಕ್ತೋನ ತಮರ್ಥಮಾಹುಃ।**
**ಸ ವಾಗ್ವಜ್ರೋ ಯಜಮಾನಂ ಹಿನಸ್ತಿ ಯಥೇಂದ್ರ ಶತ್ರುಃ ಸ್ವರತೋ ಪರಾಧಾತ್ ॥**

ಸ್ವರ – ಅನುದಾತ್ತ ಧ್ವನಿಗಳ ಏರಿಳಿತಗಳನ್ನು ಸರಿಯಾಗಿ ತಿಳಿದು ಮಂತ್ರಗಳನ್ನು ಉಚ್ಚರಿಸಬೇಕು. ಸ್ಖಾಲಿತ್ಯದಿಂದ ಅಪೇಕ್ಷಿತ ಫಲ ಪ್ರಾಪ್ತಿಯ ಬದಲು ಅನರ್ಥ ಸಂಭವಿಸು ತ್ತದೆ. ವೃತ್ರಾಸುರನ ಶತ್ರುವಾದ ಇಂದ್ರನ ಸಂಹಾರಕ್ಕಾಗಿ ಪಠಿಸಿದ ಮಂತ್ರದ ಸ್ಖಾಲಿತ್ಯ ದಿಂದಾಗಿ ವೃತ್ರಾಸುರನೇ ನಾಶವಾದನೆಂದು ವೈದಿಕ ಕಥೆಯೊಂದಿದೆ. ಯಾವುದಾದ ರೊಬ್ಬ ಸಾಮಾನ್ಯ ವ್ಯಕ್ತಿ ಸಾಧಾರಣ ಉಡುಪಿನಲ್ಲಿದ್ದು. ಪೇಲವ ಧ್ವನಿಯಲ್ಲಿ "you are under arrest" ಎಂದು ಹೇಳುವುದಕ್ಕೂ ಗರಿಗರಿಯಾದ ಖಾಕಿ ಬಟ್ಟೆ ಧರಿಸಿದ ಕೈಯಲ್ಲಿ ಪಿಸ್ತೂಲು ಹಿಡಿದ ಪೋಲೀಸ್ ಅಧಿಕಾರಿಯೊಬ್ಬ ಬೂಟನ್ನು ಶಬ್ದ ಮಾಡುತ್ತಾ ಗದರಿಕೆಯ ಉಚ್ಚಧ್ವನಿಯಲ್ಲಿ "you are under arrest" ಎಂಬ ಅವೇ ಶಬ್ದಗಳನ್ನು ಹೇಳುವುದಕ್ಕೂ ವ್ಯತ್ಯಾಸವಿದೆಯಲ್ಲವೇ? ಮೇಲಿನ ಉದಾಹರಣೆಯನ್ನೇ ತೆಗೆದುಕೊಳ್ಳೋಣ ಎರಡನೆ ಸನ್ನಿವೇಶದಲ್ಲಿನ ಶಬ್ದಗಳ ಉಚ್ಚಾರಣೆಯಿಂದ ಪೂರ್ಣ ಪರಿಣಾಮಕಾರಿಯಾದ ಫಲವುಂಟಾಗು ತ್ತದೆ. ಆದರೆ ಮೊದಲಿನ ಸನ್ನಿವೇಶದಲ್ಲಿ ಅವೇ ಶಬ್ದಗಳ ವಿವಕ್ಷಿತ ಪರಿಣಾಮಕ್ಕೆ ಬದಲಾಗಿ ಅಪಹಾಸ್ಯದ ವಾತಾವರಣವುಂಟಾಗುತ್ತದೆ. ಆದುದರಿಂದ ಮಂತ್ರಗಳನ್ನು ಪಠಿಸಲು ಸರಿಯಾದ ಅರ್ಹತೆಯನ್ನು, ಅಧಿಕಾರವನ್ನೂ ಪಡೆದಿರಬೇಕು.



ಮಂತ್ರೋಚ್ಚಾರಣೆಯ ಪರಿಸರ ಶುದ್ಧವಾಗಿರಬೇಕು. ಪರಿಶುದ್ಧತೆಯೇ ದೇವರು (cleanliness is god) ಎಂಬ ಆಂಗ್ಲಹೇಳಿಕೆಯೊಂದಿದೆ. ಇದೇ ದೇವಸ್ಥಾನ, ಮಡಿ. ಮಂತ್ರಪಾಠಕನು ದೇವಾಲಯದ ಪರಿಸರದಲ್ಲಿ ಸುಳಿದಾಡುವವನು, ಶುಭ್ರವಾದ ಪೋಷಾಕನ್ನು ಧರಿಸಿರಬೇಕು. ಇದೇ ವೈಯಕ್ತಿಕವಾದ ಮಡಿವಂತಿಕೆ. ಮಂತ್ರಪಾಠಕನು ಮಡಿಯಲ್ಲಿಲ್ಲದಿದ್ದರೆ, ಆಚಾರವಂತ ನಲ್ಲದಿದ್ದರೆ (**ಆಚಾರಹೀನಂ ನ ಪುನಂತಿ ವೇದಾಃ** ಆಚಾರವಂತನಲ್ಲದವನ ಮಂತ್ರ ಶಕ್ತಿ ಹೀನ), ಅನಧಿಕಾರಿಯಾಗಿದ್ದರೆ ಮಂದಿರದ ಪರಿಸರ ಸ್ವಚ್ಛವಿಲ್ಲದಿದ್ದರೆ, ಮಂತ್ರೋ ಚ್ಚಾರಣೆಯ ಪೂರ್ಣ ಫಲ ಲಭಿಸುವುದಿಲ್ಲ. ಪರಿಶುದ್ಧವಾದ ಹಾಲನ್ನು ಕೊಳಚೆಯಲ್ಲಿ ಚೆಲ್ಲಿದಂತೆ ಪಾವಿತ್ರ್ಯವಿಲ್ಲದ ಜಾಗದಲ್ಲಿ ಅನಧಿಕಾರಿಯ ಮಂತ್ರ ಪಠಣ ವ್ಯರ್ಥ.

**ಘಂಟಾನಾದ – ಯಾಕೆ?**

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।**
**ಕುರ್ವೇ ಘಂಟಾರವಂ ರಮ್ಯಂ ದೇವತಾಹ್ವಾನ ಲಾಂಛನಂ ॥**

ರಾಕ್ಷಸರು ದೂರ ಸರಿಯಲಿಕ್ಕಾಗಿ ದೇವತೆಗಳ ಆಗಮನದ ಸಂಕೇತವಾಗಿ ಮಧುರವಾದ ಘಂಟಾನಾದವನ್ನು ಮಾಡಲಾಗುತ್ತದೆ. ಪೂಜಾರಂಭದಲ್ಲಿ 32 ಬಾರಿ ಘಂಟಾನಾದದಿಂದುಟಾಗುವ ಧ್ವನಿತರಂಗಗಳು ಎಷ್ಟು ದೂರಕ್ಕೆ ಹರಡುತ್ತವೆಯೋ ಅಷ್ಟುದೂರ 'ವೈರಸ್'ಗಳು ದೂರವಾಗುತ್ತವೆ. ಈ 'ವೈರಸ್'ಗಳೇ ರಾಕ್ಷಸರು. ಅಂದರೆ ಇಂದ್ರಿಯಗಳನ್ನು ದುರ್ಬಲಗೊಳಿಸಿ ಪೂಜೆಯಲ್ಲಿನ ಏಕಾಗ್ರತೆಗೆ ಭಂಗವುಂಟು ಮಾಡುವವುಗಳು. ಅಂತೆಯೇ ಶಂಖ ಧ್ವನಿತರಂಗಗಳೂ (ವೈರಸ್) ರೋಗಾಣುಗಳ ಮೇಲೆ ಪರಿಣಾಮ ಬೀರುತ್ತವೆ. ಚಿಕ್ಕ ಮಕ್ಕಳಿಗೆ ಸೋಂಕು ತಗುಲದಂತೆ ಮುಸ್ಸಂಜೆಯಲ್ಲಿ ಶಂಖವೂದುತ್ತಿದ್ದ ಹಳೆಯ ಸಂಪ್ರದಾಯವನ್ನು ಹಿರಿಯರು ಈಗಲೂ ನೆನಪಿಸಿ ಕೊಳ್ಳುತ್ತಾರೆ. ಮುಸ್ಸಂಜೆಯಲ್ಲಿ ಹೆಚ್ಚು ಚಟುವಟಿಕೆಯಿಂದಿರುವ 'ಸೋಂಕು' ಎಂಬ ಈ ರೋಗಾಣುಗಳು ಶಂಖಧ್ವನಿ ತರಂಗದಿಂದ ತಯಾರಿಸುವ 'ಶಂಖಭಸ್ಮ' ಮತ್ತಿತರ ಔಷಧ ಗಳಿಂದ (ಭಗಂಧರ ಮೊದಲಾದ?) ಅನೇಕ ರೋಗಗಳನ್ನು ಗುಣಪಡಿಸುವ ವಿಧಾನ ಅಯುರ್ವೇದ ದಲ್ಲಿದೆಯೆಂದು ಕೇಳಿದ್ದೇವೆ. (ಘಂಟಾನಾದ ಶಂಖಧ್ವನಿಗಳ ಮೂಲಕ ಸಂಗೀತದ ವಿವಿಧ ರಾಗಗಳನ್ನು ಹೊಮ್ಮಿಸುವ ಅಧ್ಭುತ ಕಲೆಯನ್ನು ಸಾಧಿಸಿದ ಮಿಗಿನಕಲ್ಲು ಲಕ್ಷ್ಮೀನಾರಾಯಣ ಭಟ್ಟರೆಂಬ ವಿದ್ವಾಂಸರೊಬ್ಬರಿದ್ದರು.) ವಿವಿಧ ವಾದ್ಯಗಳ ನುಡಿಸುವಿಕೆಯಿಂದುಂಟಾದ ಮಧುರನಾದ ತರಂಗಗಳು ಇಂದ್ರಿಯಗಳ ಮೇಲೆ ವಿಶೇಷ ಪ್ರಭಾವ ಬೀರುತ್ತವೆ. ಮನಸ್ಸು ಪ್ರಫುಲ್ಲವಾಗುತ್ತದೆ, ಆನಂದಾನುಭೂತಿಯುಂಟಾಗುತ್ತದೆ. ಆನಂದಾನುಭೂತಿಯೇ ಬ್ರಹ್ಮ ಸಾಕ್ಷಾತ್ಕಾರವೆಂದು ಶಾಸ್ತ್ರ ಹೇಳುತ್ತದೆ.

ನಾವು ದೇವರೆಂದು ಕಲ್ಪಿಸಿಕೊಂಡ ಚಿತ್ರಪಟದಲ್ಲಿ ಮುಖಮಂಡಲದ ಸುತ್ತ ಒಂದು 'ಪ್ರಭಾವಲಯ' ಚಿತ್ರಿತವಾಗಿರುವುದನ್ನು ಕಾಣುತ್ತೇವೆ ಹಿಂದಿನ ಆ ಕಲ್ಪನೆಗೆ ಇಂದು

ವಿಜ್ಞಾನಿಗಳೂ ಮುದ್ರೆಯೊತ್ತಿದ್ದಾರೆ. ಪ್ರತಿಯೊಬ್ಬ ಮನುಷ್ಯರಿಗೂ ಇರಬಹುದಾದ 'ಔರಾ' ಎಂಬ ಇಂತಹ ಪ್ರಭಾವಳಿ (ಅಥವಾ ವಿದ್ಯುತ್ ಕಾಂತೀಯ ಕಿರಣ?) ಆಧ್ಯಾತ್ಮದ ಹಾದಿ ಯಲ್ಲಿ ಉನ್ನತ ಮಟ್ಟಕ್ಕೇರಿದವರ ದೇಹದಿಂದ ಹೊರ ಸೂಸುವುದನ್ನು ಸ್ಪಷ್ಟವಾಗಿ ಕಾಣಲು ಸಾಧ್ಯವೆಂದು ಹೇಳುತ್ತಾರೆ. ಎಲ್ಲಾ ಜೀವಿಗಳಲ್ಲಿರುವ ಜೀವ ಚೈತನ್ಯ ಸ್ವರೂಪದ ಪ್ರಾಣ ಶಕ್ತಿಯೇ ಈ ಪ್ರಭಾವಳಿ. ಈ ಪ್ರಭಾವಳಿಯನ್ನು ಕ್ಲಿಕ್ಕಿಸುವ 'ಕಿರ್ಲಿಯನ್ ಕ್ಯಾಮರಾ' ಎಂಬ ಒಂದು ವಿಶೇಷ ಕ್ಯಾಮರವನ್ನು **'ಸಿಮಿಯೋನ್ ಕಿರ್ಲಿಯನ್'** ಎಂಬ ವಿಜ್ಞಾನಿ ರೂಪಿಸಿದ್ದಾರೆ.

ಸಂತೋಷ ಚಿತ್ತರಾಗಿ, ಅನನ್ಯ ಭಕ್ತಿಯಿಂದ ಭಗವಂತನನ್ನು ಆರಾಧಿಸುವ ಭಕ್ತ ಸಮುದಾಯದ ಸುತ್ತಲೂ ಒಂದು ದಿವ್ಯ ತೇಜಸ್ಸು, ಅದೇ – ಒಂದು ಪ್ರಭಾವಲಯ ನಿರ್ಮಾಣವಾಗುತ್ತದೆ. ಇದೇ ಭಗವಂತನ ಸಾನ್ನಿಧ್ಯ, ಶಕ್ತಿಯ ಕೇಂದ್ರ. ಅತಿಹೆಚ್ಚು ಭಕ್ತಸಮುದಾಯ ಸೇರುವ ಮಂದಿರದಲ್ಲಿ ಭಗವಂತನ ವಿಶೇಷ ಸಾನಿಧ್ಯವುಂಟಾಗುತ್ತದೆ.

**ನಾಹಂ ವಸಾಮಿ ವೈಕುಂಠೇ ಯೋಗಿನಾಂ ಹೃದಯೇ ನ ಚ ।**
**ಮದ್ಭಕ್ತಾ ಯತ್ರ ಗಾಯನ್ತಿ ತತ್ರ ತಿಷ್ಠಾಮಿ ನಾರದ ॥**

**–ಆದಿ ಪುರಾಣ**

ಭಗವಂತ ವೈಕುಂಠದಲ್ಲಾಗಲೀ ಯೋಗಿಗಳ ಹೃದಯದಲ್ಲಾಗಲೀ ವಾಸಿಸದೆ ಭಕ್ತರು ಭಜಿಸುವ ಜಾಗದಲ್ಲಿ ನೆಲಸುತ್ತಾನೆ.

ಶ್ರೀಮದ್ಭಾಗವತದ 9ನೇ ಸ್ಕಂದದಲ್ಲಿ ಶ್ರೀಕೃಷ್ಣ ಪರಮಾತ್ಮ ದೂರ್ವಾಸ ಮಹರ್ಷಿಗಳನ್ನು ಕುರಿತು ಹೀಗೆ ಹೇಳುತ್ತಾನೆ. ನಾನು ಅಸ್ವತಂತ್ರ. ಸಾಧು ಸಂತರ, ಭಕ್ತರ ಅಧೀನನಗಿದ್ದೇನೆ, ಭಕ್ತರಿಗೆ ಅತ್ಯಂತ ಪ್ರಿಯನಾಗಿದ್ದೇನೆ.

**ಅಹಂ ಭಕ್ತ ಪರಾಧೀನೋ ಹ್ಯಸ್ವತಂತ್ರ ಇವ ದ್ವಿಜ ।**
**ಸಾಧುಭಿರ್ಗ್ರಸ್ತ ಹೃದಯಃ ಭಕ್ತೈಃ ಭಕ್ತಜನ ಪ್ರಿಯಃ ॥**

ಪ್ರಾಪಂಚಿಕ ವ್ಯವಹಾರಗಳನ್ನು ಮರೆತು, ಏಕಾಗ್ರತೆಯ ಮೂಲಕ ಭಗವಂತನನ್ನು ಆರಾಧಿಸುವುದಕ್ಕೋಸ್ಕರ ನಾವು ದೇವಾಲಯಕ್ಕೆ ಹೋಗುತ್ತೇವೆ. ಏಕೆಂದರೆ, ನಿರಂತರ ಮಂತ್ರೋಚ್ಚಾರಣೆ, ಭಕ್ತರ ಸಾಮೂಹಿಕ ಆರಾಧನೆ ಮಂಗಲ ವಾದ್ಯ ಘೋಷಗಳ ನಡುವೆ, ಇಲ್ಲಿ ವಿಗ್ರಹ ರೂಪದಲ್ಲಿ ಭಗವಂತನ ವಿಶೇಷ ಸಾನ್ನಿಧ್ಯ ವುಂಟಾಗಿದೆಯೆಂದು ನಂಬಿ, ನಾವು ಅವನನ್ನು ಸಾಕ್ಷಾತ್ಕರಿಸಿಕೊಳ್ಳಲು ದೇವಾಲಯಕ್ಕೆ ಹೋಗುತ್ತೇವೆ. ದೇವಾಲಯ ವಲ್ಲದೆ, ಮನೆಯಲ್ಲೋ ಅಥವಾ ಬೇರೆಲ್ಲಿಯೋ ಅದರೂ ಈ ಸನ್ನಿವೇಶವನ್ನು ಕಲ್ಪಿಸಿಕೊಳ್ಳಲು ಸಾಧ್ಯವಾದರೆ, ಅಲ್ಲೂ ಭಗವಂತನನ್ನು ಕಾಣಲು ಪ್ರಯತ್ನಿಸಬಹುದು ದೇವಾಲಯಕ್ಕೆ ಹೋಗುವ ಅವಶ್ಯಕತೆಯಿರಲಾರದು. ಆದರೆ ನಮ್ಮ ಮನೋವ್ಯಥೆಗೆ, ಜಿಜ್ಞಾಸೆಗೆ, ಅಥಾಭಿಲಾಷೆಗೆ, ಜ್ಞಾನ ಪಿಪಾಸೆಗೆ ಪರಿಹಾರಸಿಗುವಂತಿರಬೇಕು.

**ಭಗವಂತನ ಸಾನ್ನಿಧ್ಯದಿಂದ ಪ್ರಯೋಜನವೇನು?**



ಶಿವಾಲಯದಲ್ಲಿನ ಬಸವನನ್ನು ಪೂಜಿಸುತ್ತೇವೆ. ಅದರೆ ಪ್ರತ್ಯಕ್ಷ ಬಸವನನ್ನು ಗಾಡಿ ಎಳೆಯಲು, ಉಳುಮೆ ಮಾಡಲು ಉಪಯೋಗಿಸುತ್ತೇವೆ. ಚಾವಟಿಯಿಂದ ಹೊಡೆ ಯುತ್ತೇವೆ. ಶನೈಶ್ಚರ ದೇವಾಲಯದಲ್ಲಿ ಕಾಗೆಗೆ ಪೂಜೆ ಸಲ್ಲುತ್ತದೆ. ಆದರೆ ನಿಜವಾದ ಕಾಗೆ ನಮಗೆ ಅಪಶಕುನ. ಅದನ್ನು ನೋಡುವುದು ಅವಲಕ್ಷಣ. ಅದು ಮನೆಯೊಳಗೆ ಬಂದರೆ ಶಾಂತಿ ಮಾಡಿಸಬೇಕು. ಅಂದರೆ ಭಗವಂತನ ಸಾಮಿಪ್ಯದಲ್ಲಿ, ಅವನ ಸಾನ್ನಿಧ್ಯದಲ್ಲಿ ಮಾತ್ರ ಬಸವನಿಗೂ ಕಾಗೆಗೂ ಗೌರವ, ಪೂಜೆ. ಸಾನ್ನಿಧ್ಯವಿಲ್ಲದಾಗ ಅವುಗಳಿಗೆ ಮಹತ್ವವಿಲ್ಲ. ಹಾಗೆಯೇ ಭಗವಂತನ ಸಾನ್ನಿಧ್ಯದಲ್ಲಿ, ಗುರುಹಿರಿಯರ ಸಾಮೀಪ್ಯದಲ್ಲಿ ನಮಗೆ ಸಿಗುವ ಗೌರವ ಬೇರೆಡೆಯಲ್ಲಿ ಸಿಗುವ ನಿರೀಕ್ಷೆಯಿಲ್ಲ.

ರಮಣ ಮಹರ್ಷಿಗಳು ಭಗವಚ್ಚಿಂತನೆಯಲ್ಲಿ ಮೈಮರೆತಿರುವಾಗ, ಅಂದರೆ ಐಹಿಕ ವಿಚಾರಗಳಿಂದ ವಿಮುಖರಾಗಿ ಭಗವಂತನಲ್ಲೇ ಮನಸ್ಸನ್ನು ಕೇಂದ್ರೀಕರಿಸಿಕೊಂಡಿದ್ದಾಗ ಯಾವುದೇ ಅರಿವಳಿಕೆಯಿಲ್ಲದೆ ಅವರ ಕೈಗೆ ಶಸ್ತ್ರಚಿಕಿತ್ಸೆ ನೀಡಿದ ಘಟನೆ ಅನೇಕರು ಅರಿತಿರಬಹುದು. ನಿರಂತರ ಭಗವಂತನ ಚಿಂತನೆಯಲ್ಲೇ ಇರುವವರಿಗೆ ಯಾವುದೇ ಬಾಧೆಯ ಅರಿವಾಗುವುದಿಲ್ಲ.

ಜಗದ್ಗುರು ಚಂದ್ರಶೇಖರ ಭಾರತಿಗಳ ನಿಕಟ ಸಂಪರ್ಕದಲ್ಲಿದ್ದವರೊಬ್ಬರು ಹೇಳಿದ ನೈಜ ಸಂಗತಿಯೊಂದರಿಂದ ಭಗವಂತನ ಸಾಮೀಪ್ಯದ ಮಹತ್ವದ ಅರಿವಾಗುತ್ತದೆ. ನವರಾತ್ರಿಯ ದರ್ಬಾರಿಗೆ ಚಿತ್ತೈಸುವಾಗ ಜರತಾರಿ ಹೊದಿಸುವುದು ಪದ್ಧತಿ. ಪರಿಚಾರಕ ಜರತಾರಿ ಜಾರದಂತೆ ಪಿನ್ ಚುಚ್ಚುವಾಗ ಹೆಗಲಿನ ಚರ್ಮವನ್ನು ಸೇರಿಸಿ ಚುಚ್ಚಿದ. ದರಬಾರಿನಿಂದ ಹಿಂದುರುಗಿದ ಮೇಲೆ ಪಿನ್ ತೆಗೆದಾಗ ರಕ್ತ ಚಿಮ್ಮಿದಾಗಲೇ ಪರಿಚಾರಕನಿಗೆ ಅನಾಹುತದ ಅರಿವಾದುದು. ಆದರೆ ಜಗದ್ಗುರುಗಳ ಮೇಲೆ ಯಾವುದೇ ಪರಿಣಾಮವಾಗಲಿಲ್ಲ. ಅವರು ಯಾವಾಗಲೂ ಅಂತರ್ಮುಖಿಗಳಾಗಿ ಬ್ರಹ್ಮಸಾಕ್ಷಾತ್ಕಾರ ದಲ್ಲೇ ಲೀನವಾಗಿರುತ್ತಿದ್ದರು. ಅವರಿಗೆ ಯಾವುದೇ ಬಾಧೆಯ ಅನುಭವವಾಗುತ್ತಿರಲಿಲ್ಲ.

ಒಂದು ಕಂಬವನ್ನು ಹಿಡಿದುಕೊಂಡು ಸುತ್ತುತ್ತಿರುವಾಗ ಎಡವಿ ಬೀಳುವ ಭಯವಿಲ್ಲ. ಹಾಗೆಯೇ ಭಗವಂತನ ಅವಲಂಬನೆಯಲ್ಲಿ ಸುತ್ತುತ್ತಿರುವಾಗ ಭವದ ಭಯವಿರುವುದಿಲ್ಲ.

ದೇವಾಲಯಗಳಲ್ಲಿ ಗುರುಹಿರಿಯರ ಸಾನ್ನಿಧ್ಯದಲ್ಲಿ ಭಗವದಾರಾಧನೆಯಿಂದ ಸಚ್ಚಿಂತನೆಯಿಂದ, ಐಹಿಕವೆಲ್ಲವನ್ನೂ ಮರೆತು ಸುಖ ಶಾಂತಿಯಿಂದಿರಬಹುದು. ಭಗವಂತನ ಸಾಮೀಪ್ಯ ಗುರುಗಳ ಸಾನ್ನಿಧ್ಯ ತಪ್ಪಿ ಹೊರಗೆ ಬಂದರೆ ಭಯ, ಶೋಕ, ಅಗೌರವ ತಪ್ಪಿದ್ದಲ್ಲ.

(ಇಂಗ್ಲೆಂಡಿನ ಬರ್ಮಿಂಗ್ ಹ್ಯಾಂನಲ್ಲಿರುವ ದೇವಾಲಯವೊಂದರಿಂದ ಪ್ರಕಟ ವಾಗುವ ಪತ್ರಿಕೆಗಾಗಿ ಕಳುಹಿಸಿದ ಆಂಗ್ಲಲೇಖನದ ಕನ್ನಡ ಅನುವಾದ)

# ಅಶ್ವತ್ಥಃ ಸರ್ವವೃಕ್ಷಾಣಂ

ಮಹಾಭಾರತದ ಅನುಶಾಸನ ಪರ್ವದಲ್ಲಿ ಭೀಷ್ಮ ಧರ್ಮರಾಯನಿಗೆ ವೃಕ್ಷಾರೋಪಣದ ಮಹತ್ವವನ್ನು ಕುರಿತು ಹೀಗೆ ಉಪದೇಶಿಸುತ್ತಾನೆ:–

**ಪುಷ್ಪೈಃ ಸುರಗಣಾನ್ ವೃಕ್ಷಾಃ ಫಲೈಶ್ಚಾಪಿ ತಥಾ ಪಿತೄನ್ ।**
**ಛಾಯಯಾ ತಿಥಿಂ ತಾತ ಪೂಜಯಂತಿ ಮಹೀರುಹಃ ॥**
**ತಸ್ಯಪುತ್ರಾಭವಂತ್ಯೇ ತೇ ಪಾದಪಾ ನಾತ್ರ ಸಂಶಯಃ ।**
**ಪರಲೋಕ ಗತಃ ಸ್ವರ್ಗಂ ಲೋಕಾಂಶ್ಚಾಪ್ನೋತಿ ಸೋ–ವ್ಯಯಾನ್ ॥**

ಮರಗಳು ತಮ್ಮ ತಣ್ಣನೆಯ ನೆರಳಿನಿಂದ ವಿಶ್ರಮಿಸುವ ಅತಿಥಿಗಳನ್ನು ಸತ್ಕರಿಸುತ್ತವೆ. ಹೂವುಗಳಿಂದ ದೇವತೆಗಳನ್ನು ಪೂಜಿಸುತ್ತವೆ. ಹಣ್ಣುಗಳಿಂದ ಪಿತೃಗಳಿಗೆ ತೃಪ್ತಿಯನ್ನುಂಟುಮಾಡುತ್ತವೆ. ಅಂದರೆ ಒಬ್ಬ ಸತ್ಪುರುಷನು ಮಾಡುವಂತೆ ಮರಗಳು ತಮ್ಮ ಫಲ–ಪುಷ್ಪ–ಛಾಯೆಯಿಂದ ಪಿತೃಯಜ್ಞ, ದೇವಪೂಜೆ, ಅತಿಥಿ ಸತ್ಕಾರವನ್ನು ನೇರವೇರಿಸುತ್ತವೆ. ವೃಕ್ಷಾರೋಪಿಗಳು ಬೆಳಸಿದ ಮರಗಳು, ಅವರ ಮಕ್ಕಳಂತೆ, ಆದುದರಿಂದ ಮರಗಳನ್ನು ನೆಟ್ಟು ಬೆಳಸಿದವರು ಲೋಕಾಂತರಕ್ಕೆ ಹೋದನಂತರ ಪುತ್ರವಂತರು ಪಡೆಯುವ ಶಾಶ್ವತ ಸ್ವರ್ಗವನ್ನು ಸೇರುತ್ತಾರೆ.

**'ಕಾಲೇ ವರ್ಷತು ಪರ್ಜನ್ಯಃ ಪೃಥವೀ ಸಸ್ಯ ಶಾಲಿನೀ'** – ಸಕಾಲದಲ್ಲಿ ಮಳೆಯಾಗಲಿ, ಭೂಮಿಯು ವೃಕ್ಷಗಳಿಂದ ಸಮೃದ್ಧವಾಗಲಿ, ಎಲ್ಲರೂ ಸಖಿಗಳಾಗಲಿ ಎಂಬ ಹಿರಿಯರ ಹಾರೈಕೆಗೆ ಈ ಮೇಲಿನ ನಂಬಿಕೆಗಳೇನು  ಮೂಲ ಪ್ರೇರಣೆಯಾಗಿರಬಹುದು.

ಜಲಾಶಯದ ಆಸುಪಾಸಿನಲ್ಲಿ ಯಾವುದೇ ವೃಕ್ಷಗಳನ್ನಾಗಲೀ, ವಿಶೇಷವಾಗಿ ಅಶ್ವತ್ಥ ವೃಕ್ಷಗಳನ್ನು ನೆಟ್ಟು ಬೆಳಸುವುದರಿಂದ ನೂರಾರು ಯಜ್ಞಗಳ ಫಲ ಪ್ರಾಪ್ತಿಯಾಗುತ್ತದೆ. ಈ ಮರಗಳನ್ನಾಶ್ರಯಿಸಿದ ಪಕ್ಷಿಗಳು ಸ್ವಚ್ಛಂದವಾಗಿ ಇವುಗಳ ಹಣ್ಣನ್ನು ಸೇವಿಸಿ ಆನಂದಿಸಿದುದರ ಫಲ ಮರವನ್ನು ನೆಟ್ಟವರಿಗೆ ದೊರಕುತ್ತದೆ. ಬೇಸುಗೆಯಲ್ಲಿ ಈ ಮರಗಳ ನೆರಳಿನಲ್ಲಿ ವಿಶ್ರಮಿಸಿ ಸುಖಿಸುವ ಮನುಷ್ಯ–ಮನುಷ್ಯೇತರ ಜೀವಿಗಳ ಸಂತೊಷದ ನಿಟ್ಟುಸಿರಿನ ಪುಣ್ಯ ವೃಕ್ಷಾರೋಪಿಗೆ ಸಿಗುತ್ತದೆ. ಅವರ ಪಿತೃಗಳಿಗೆ ಸ್ವರ್ಗ ಪ್ರಾಪ್ತಿಯಾಗುತ್ತದೆ. ಅಶ್ವತ್ಥ ವೃಕ್ಷ ದರ್ಶನ–ಪ್ರದಕ್ಷಿಣೆಯಿಂದ ಪಾಪಮುಕ್ತರಾಗುತ್ತಾರೆ. ಅಶ್ವತ್ಥವೃಕ್ಷದ ಸಮೀಪದಲ್ಲಿ ಮಾಡಿದ ಜಪ, ಹೋಮಾದ್ಯನುಷ್ಠಾನಗಳು ಶೀಘ್ರವಾಗಿ ಅನಂತ ಫಲವನ್ನು ನೀಡುತ್ತವೆ. ಏಕೆಂದರೆ ಅಶ್ವತ್ಥದ ಮೂಲ–ಮಧ್ಯಾಗ್ರಗಳಲ್ಲಿ ತ್ರಿಮೂರ್ತಿಗಳ ಸಾನ್ನಿಧ್ಯವಿದೆ.

**ಮೂಲತೋ ಬ್ರಹ್ಮರೂಪಾಯ ಮಧ್ಯತೋ ವಿಷ್ಣುರೂಪಿಣೇ ।**
**ಅಗ್ರತಃ ಶಿವರೂಪಾಯ ವೃಕ್ಷರಾಜಾಯ ತೇ ನಮಃ ॥**



ಹಿಂದೂ ಸಂಸ್ಕೃತಿಯಲ್ಲಿ ಅಶ್ವತ್ಥವೃಕ್ಷಕ್ಕೆ ಅತ್ಯಂತ ಮಹತ್ವವಿದೆ. ಇದು ಭೂಮಿಗೆ ದೇವರಾಜ ಇಂದ್ರನ ಕೊಡುಗೆಯೆಂದು ವರ್ಣಿತವಾಗಿದೆ. ಪುರಾಣಾಂತರದಲ್ಲಿ ವರ್ಣಿತವಾದಂತೆ ವಿಷ್ಣುವೇ ಅಶ್ವತ್ಥರೂಪದಲ್ಲಿ ಪ್ರಕಟವಾಗಿದ್ದಾನೆ. "ಊರ್ಧ್ವಮೂಲಮಧಃ ಶಾಖಂ॥" (ಭಗವದ್ಗೀತೆ 15–1) ಎಂದು ಭಗವದ್ಗೀತೆಯಲ್ಲಿ ಮತ್ತು ವೇದಾಂತದ ಪರಿಭಾಷೆಯ ಇತರೆ ಸನಾತನ ಗ್ರಂಥಗಳಲ್ಲಿ ಇದರ ಬೇರು ಸ್ವರ್ಗದಲ್ಲಿದ್ದು ಅಧೋಮುಖವಾಗಿ ಹರಡಿಕೊಂಡಿರುವುದಾಗಿ ಹೇಳಿದೆ.

ದೇವತೆಗಳೂ ಮಹರ್ಷಿಗಳೇ ಮೂದಲಾದ ಪುಣ್ಯ ಪುರುಷರೂ ಅಶ್ವತ್ಥದ ನೆರಳಿನಲ್ಲಿ ಕುಳಿತಿರುತ್ತಾರೆ. ಇದರ ನೆರಳಿನಲ್ಲಿ ಕುಳಿತವರಿಗೆ ಪ್ರಾಣಿಗಳ ಭಾಷೆಯನ್ನು ಅರ್ಥೈಸುವ, ಜನ್ಮಾಂತರದ ಸ್ಮರಣೆಯನ್ನುಂಟು ಮಾಡುವ ಅದ್ಭುತ ಶಕ್ತಿಯುಂಟಾಗುತ್ತದೆಂದು ಹೇಳಲಾಗಿದೆ.

ಭಾರತೀಯರೆಲ್ಲರೂ ವಿಶೇಷವಾಗಿ ಬೌದ್ಧರಿಗೆ ಇದು ಅತ್ಯಂತ ಪವಿತ್ರ ವೃಕ್ಷ. ಈ ವೃಕ್ಷದಡಿಯಲ್ಲಿ ಬುದ್ಧನಿಗೆ ಜ್ಞಾನೋದಯವಾದುದರಿಂದ ಇದು 'ಭೋಧಿವೃಕ್ಷ'ವೆಂದು ಪ್ರಸಿದ್ಧವಾಗಿದೆ. ಬೌದ್ಧ ಮಂದಿರಗಳ ಪರಿಸರದಲ್ಲಿ ಇದನ್ನು ಆವಶ್ಯವಾಗಿ ಬೆಳೆಸುತ್ತಾರೆ.

ಹಿಂದಿನ ಕಾಲದಲ್ಲಿ ಸಂತಾನೋತ್ಪತ್ತಿ ಪ್ರತಿಬಂಧಕ ನಿವೃತ್ತಿಗಾಗಿ, ದೇವಸಾನ್ನಿಧ್ಯವನ್ನು ನೆನಪಿಸಿಕೋಳ್ಳುತ್ತಾ ಉಷಃಕಾಲದಲ್ಲಿ ಪ್ರಾರಂಭಿಸಿ ಸೂರ್ಯೋದಯದ ತನಕ ಅಶ್ವತ್ಥ ಪ್ರದಕ್ಷಿಣೆ ಬರುತ್ತಿದ್ದರು. ಮತ್ತು ಅಶ್ವತ್ಥದ ನೆರಳಿನಲ್ಲಿ ಹೋಮ ಹವನಾದಿಗಳನ್ನು ನೆರವೇರಿಸುತ್ತಿದ್ದರು. ಜಗತ್ತಿನಲ್ಲಿ ಹಗಲು ರಾತ್ರಿ ನಿರಂತರ ಇಂಗಾಲಾಮ್ಲವನ್ನು ಸ್ವೀಕರಿಸಿ ಆಮ್ಲಜನಕವನ್ನು ಬಿಡುಗಡೆ ಮಾಡುವ ಏಕೈಕ ವೃಕ್ಷಸಂತತಿ ಅಶ್ವತ್ಥ ಮರ.  ಇದರ ಪರಿಸರ ಮತ್ತು ಇದು ಬಿಡುಗಡೆ ಮಾಡುವ ಆಮ್ಲಜನಕ ಸಂತಾನೋತ್ಪತ್ತಿಗೆ ಕಾರಣವಾದ ಹಾರ್ಮೋನುಗಳನ್ನು ಪ್ರಚೋದಿಸುತ್ತದೆಂದು ಈಗಿನ ವಿಜ್ಞಾನಿಗಳು ದೃಢೀಕರಿಸುತ್ತಾರೆ. ಸಂತತಿ ಪ್ರಾಪ್ತಿಗಾಗಿ ಜಪಿಸುವ 'ಸಂತಾನ ಗೋಪಾಲಕೃಷ್ಣ ಮಂತ್ರ'ದ ಅಧಿಷ್ಠಾತೃ ದೇವತೆ ಶ್ರೀ ಕೃಷ್ಣ ತಾನು ಅಶ್ವತ್ಥವೃಕ್ಷರೂಪದಲ್ಲಿದ್ದೇನೆಂದು ಗೀತೆಯಲ್ಲಿ ಹೇಳಿಕೊಂಡಿದ್ದಾನೆ. **'ಅಶ್ವತ್ಥಃ ಸರ್ವವೃಕ್ಷಾಣಾಂ'** (ಗೀತೆ 10–26)

ಭಾರತದಲ್ಲಿ ಪ್ರಾಚೀನಕಾಲದಿಂದಲೂ ಅಶ್ವತ್ಥವೃಕ್ಷ ಪೂಜನೀಯ ಸ್ಥಾನದಲ್ಲಿತ್ತು. ದೀರ್ಘಾಯುಸ್ಸನ್ನು ಕೋರಿ ಮಾಡುವ ಹೋಮದಲ್ಲಿ ಇದರ ಸಮಿತ್ತನ್ನು ಬಳಸುತ್ತಾರೆ. ಅಶ್ವತ್ಥದಿಂದ ಯಜ್ಞ ಪಾತ್ರೆಗಳನ್ನೂ ಆಗ್ನಿಮಂಥನದ ಅರಣಿಯ ಮೇಲಿನ ಕಡೆಗೋಲಿನಂತಹ ದಂಡವನ್ನೂ ತಯಾರಿಸಲಾಗು ತ್ತದೆ.

ಶ್ರೀಲಂಕಾದಲ್ಲಿ ಕ್ರಿ.ಪೂ. 3ನೇ ಶತಮಾನದಷ್ಟು ಹಳೆಯದಾದ ಅಶ್ವತ್ಥ ಮರವಿದೆಯಂತೆ. ಮುಂಬಯಿಯಲ್ಲೂ ಸುಮಾರು 3 ಸಾವಿರ ವರ್ಷಗಳಷ್ಟು ಹಳೆಯ ಅಶ್ವತ್ಥ ಮರವಿದೆಯಂತೆ. ಸಂಯುಕ್ತ ಸಂಸ್ಥಾನ, ದಕ್ಷಿಣ ಕೆಲಿಫೋರ್ನಿಯಾ, ಫ್ಲೋರಿಡಾ, ಹಾವಯಿ ದ್ವೀಪ, ಇಸ್ರೇಲ್ ಮತ್ತಿತರ ಉಷ್ಣ ದೇಶಗಳಲ್ಲಿ ಭಾರತದಿಂದ ಒಯ್ದು ಅಶ್ವತ್ಥ

ವೃಕ್ಷಗಳನ್ನು ಬೆಳಸಿದ್ದಾರೆ.

ಅಶ್ವತ್ಥ ಪ್ರದಕ್ಷಿಣೆಯಿಂದ ದೀರ್ಘಾಯುಷಿಗಳಾಗುವ ರಹಸ್ಯ, ಅದು ನಿರಂತರ ಬಿಡುಗಡೆ ಮಾಡುವ ಆಮ್ಲಜನಕವೇ ಆಗಿದೆ. ಸರಕಾರ 25 ವರ್ಷಗಳ ಹಿಂದೆ ಬಿಡುಗಡೆ ಮಾಡಿದ ವಿಶೇಷ ಅಂಚೆಚೀಟಿಯಿಂದ ಈ ವೃಕ್ಷದ ಮಹತ್ವ ಅರಿವಾಗುತ್ತದೆ.

ಸುಶ್ರುತ ಸಂಹಿತೆ ಮೊದಲಾದ ಆಯುವೇದ ಗ್ರಂಥಗಳಲ್ಲಿ ಇದರ ಔಷಧೀಯ ಗುಣಗಳನ್ನು ಹೆಳಲಾಗಿದೆ. ಅಶ್ವತ್ಥದ ಕಷಾಯ ಮತ್ತು ಇದರ ಫಲ ಸೇವನೆಯಿಂದ ರಕ್ತಪಿತ್ತ, ವಿಷ, ಊತ, ಅಗ್ನಿಮಾಂದ್ಯ, ಅರುಚಿ ಮೊದಲಾದ ರೋಗ ಗುಣವಾಗುತ್ತದೆಂದು ಅಯುರ್ವೇದ ವೈದ್ಯ ಪದ್ಧತಿಯಲ್ಲಿ ಹೇಳಿದೆ. ಇದರ ಹಣ್ಣಿನ ಚೂರ್ಣ ಹಸಿವನ್ನು ಹೆಚ್ಚಿಸುತ್ತದೆ. ಇದರ ಎಲೆಯ ಭಸ್ಮವನ್ನು ಜೇನುತುಪ್ಪದೊಂದಿಗೆ ಸೇವಿಸುವುದರಿಂದ ಕಫದೋಷ ಪರಿಹಾರವಾಗುತ್ತದೆ. ಅನೇಕ ವ್ಯಾಧಿಗಳನ್ನು ಅಶ್ವತ್ಥದಿಂದ ಗುಣಪಡಿಸಬಹುದೆಂಬ ವೈಜ್ಞಾನಿಕ ಸತ್ಯವನ್ನರಿತೇ ಹಿಂದಿನ ಪರಿಸರವಾದಿಗಳು ಅಶ್ವತ್ಥವನ್ನು ನೆಟ್ಟು ಬೆಳಸುವ ಹವ್ಯಾಸವನ್ನು ರೂಢಿಸಿಕೊಂಡಿದ್ದರು.

ವೇದಕಾಲೀನ ಸಂಸ್ಕೃತಿಯಲ್ಲೂ ಅಶ್ವತ್ಥಕ್ಕೆ ವಿಶೇಷ ಮಹತ್ವವಿತ್ತೆಂಬುದು ಈ ಕೆಳಗಿನ ಎರಡು ಮಂತ್ರಗಳಿಂದ ಸ್ಪಷ್ಟವಾಗುತ್ತದೆ.

**ಅಶ್ವತ್ಥೋ ದೇವಸದನಸ್ತೃತೀಯ ಸ್ಯಾಮಿತೋ ದಿವಿ।**
**ತತ್ರಾಮೃತಸ್ಯ ಚಕ್ಷಣಂ ದೇವಾಃ ಕುಷ್ಠಮವನ್ವತಃ ॥3॥**
**ಶಿರ್ಷಾಮಯಮುಪಹತ್ಯಾಮಕ್ಶೋ ಸ್ತನ್ವೋರಪಃ।**
**ಕುಷ್ಠಸ್ತತ್ಸರ್ವಂ ನಿಷ್ಕರದ್ದೈವಂ ಸಮಹ ವೃಷ್ಣ್ಯಮ್ ॥10॥**

**ಅಶ್ವತ್ಥಃ ದೇವಸದನಃ** – ಅಶ್ವತ್ಥ ವೃಕ್ಷವು ದಿವ್ಯ ಶಕ್ತಿಗಳ ನೆಲಯಾಗಿದೆ. **ತೃತೀಯ ಸ್ಯಾಮ್** ದಿವಿ ಇತಃ – ಸರ್ವೋನ್ನತವಾದ ಬೆಳಕುಳ್ಳ ಜಾಗದಲ್ಲಿ ಅದು ನೆಲಸಿದೆ. ತತ್ರ – ಅಶ್ವತ್ಥದಲ್ಲಿ **ಅಮೃತಸ್ಯಚಕ್ಷಣಂ** – ಅಮೃತತ್ತ್ವದ ದರ್ಶನವಿದೆ. **ದೇವಾಃ** – ವೈದ್ಯರು **ಕುಷ್ಠಂ ಅವನ್ವತ** (ಅದನ್ನು) ಕುಷ್ಠವೆಂದು ಅಂಗೀಕರಿಸುತ್ತಾರೆ. – **ವೈದ್ಯರು ಅಶ್ವತ್ಥದಲ್ಲಿ ಕುಷ್ಠವೆಂಬ ಔಷಧದ ಮೂಲವನ್ನು ಕಾಣುತ್ತಾರೆ** ॥3॥

**ಶೀರ್ಷಾಮಯಂ** – ತಲೆಯಲ್ಲಿರುವ ರೋಗಗಳು, **ಅಕ್ಷ್ಯೋಃ ಉಪಹುತ್ಯಾಂ** – ಕಣ್ಣಿನ ದೋಷ ಮತ್ತು **ತನ್ವಃ ರಪಃ** – ಶರೀರದ ದೋಷ **ತತ್ ಸರ್ವಂ** – ಅದೆಲ್ಲವನ್ನೂ, **ದೈವಂ ವೃಷ್ಣ್ಯಂ ಸಂ ಅಹ** – ದಿವ್ಯ ಶಕ್ತಿಯನ್ನು ನೀಡಿ, **ಕುಷ್ಠಃ ನಿಷ್ಕರತ್** – ಈ ಕುಷ್ಠ ಔಷಧಿಯು ದೂರ ಮಾಡುತ್ತದೆ – **ತಲೆಯಲ್ಲಿನ ದೋಷಗಳು, ಕಣ್ಣಿನ ದೋಷಗಳು ಹಾಗೂ ಶರೀರದ ಇತರ ರೋಗಗಳನ್ನು ಈ ಕುಷ್ಠವೆಂಬ ಔಷಧಿಯು ನಾಶಮಾಡುತ್ತದೆ.** ॥10॥

ಅಥರ್ವವೇದದ ೫ ನೇ ಕಾಂಡದ ೪ನೇ ಸೂಕ್ತದ ೩ನೆ ಮತ್ತು ೧೦ ನೇ ಮಂತ್ರಗಳು ಈ ಸೂಕ್ತದ ಹತ್ತೂ ಮಂತ್ರಗಳಿಗೆ ಕುಷ್ಠೋಯಕ್ಷ್ಮ ನಾಶನಮ್ ದೇವತಾಃ (–ವೇದಭಾಷ್ಯ ಪ್ರಕಾಶ ಸಮಿತಿ – ಅಥರ್ವವೇದ ಭಾಷ್ಯ).



**ಛಿನ್ನೋ ಯೇನ ವೃಕ್ಷಾಶ್ವತ್ಥಃ ಛೇದಿತಾಃ ಪಿತೃದೇವತಾಃ।**
**ಯಜ್ಞಾರ್ಥಂಛೆದಿತೇ–ಶ್ವತ್ಥೇ ಹ್ಯಕ್ಷಯಂ ಸ್ವರ್ಗಮಾಪ್ನುಯಾತ್।**
**ಅಶ್ವತ್ಥಃ ಪೂಜಿತೋಯತ್ರ ಪೂಜಿತಾಃ ಸರ್ವದೇವತಾಃ॥**

ಅಕಾರಣವಾಗಿ ಅಶ್ವತ್ಥ ವೃಕ್ಷಕ್ಕೆ ಹಾನಿನ್ನುಂಟು ಮಾಡಿದರೆ ಸಂತಾನಕಾರಕರಾದ ಪಿತೃ ದೇವತೆಗಳನ್ನು ಘಾಸಿ ಮಾಡಿದಂತೆ. ಅದರೆ ಯಜ್ಞಾರ್ಥವಾಗಿ ಕೊಂಬೆಗಳನ್ನು ಕತ್ತರಿಸುವುದರಿಂದ ಸ್ವರ್ಗಪ್ರಾಪ್ತಿ. ತ್ರಿಮೂರ್ತಿಗಳ ನೆಲೆಯಾದ ಅಶ್ವತ್ಥ ಪೂಜೆಯಿಂದ ಸಮಸ್ತ ದೇವತೆಗಳನ್ನೂ ಪೂಜಿಸಿದಂತಾಗುತ್ತದೆ. ಅಶ್ವತ್ಥರೂಪೀ ಮಹಾವಿಷ್ಣುವು ಸಂಪ್ರೀತನಾಗಿ ಸತ್ಸಂತಾನವನ್ನು ಕರುಣಿಸುವಂತೆ ಪ್ರಾರ್ಥಿಸುತ್ತಾ ಅಶ್ವತ್ಥ ವೃಕ್ಷದ ಬುಡಕ್ಕೆ ನೀರೆಯುವ ಒಂದು ಪ್ರಾಚೀನ ಶ್ಲೋಕ ಮಂತ್ರ ಹೀಗಿದೆ : – **ಸಿಂಚಾಮಿ ತೇಽಶ್ವತ್ಥ ಮೂಲ ಮಮ ಸಂತತಿ ವೃದ್ಧಯೇ। ಅಶ್ವತ್ಥರೂಪೀ ಭಗವಾನ್ ಪ್ರಿಯತಾಂ ಮೇ ಜನಾರ್ದನಃ॥**

ಹೀಗೆ ಇಹದಲ್ಲಿ ರೋಗಮುಕ್ತರಾಗಿ ಸತ್ಸಂತಾನವನ್ನು ಪಡೆದು ಸುಖ ಜೀವನ ನಡೆಸಿ ದೇಹವಸಾನದಲ್ಲಿ ಮೋಕ್ಷ ಪ್ರಾಪ್ತಿಗಾಗಿ ಅಶ್ವತ್ಥವನ್ನು ನೆಟ್ಟು ಬೆಳಸಿ, ಪೂಜಿಸುವ ಆದರ್ಶವು ನಮಗೆ ಹಿರಿಯರಿಂದ ಬಂದ ಬಳುವಳಿ.

